॥ ಶ್ರೀಃ ॥

# ಧರ್ಮಶಾಸ್ತ್ರ ಕರದೀಪಿಕಾ



ಲೇಖಕರು :

ಪಂಡಿತಪ್ರವರ ವಿದ್ವಾನ್ ಕೆ. ಕೃಷ್ಣಜೋಯಿಸ್

ಶಂಕರಮಠ, ಬೆಂಗಳೂರು.



ಪ್ರಕಾಶನ :

ಶೃಂಗೇರಿ ಶ್ರೀ ಶಾರದಾ ಸಂಸ್ಥಾನ

ಶೃಂಗೇರಿ



ಶ್ರೀ ಶ್ರೀ ಶೃಂಗೇರಿ ಜಗದ್ಗುರು
ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರು



ಶ್ರೀ ಶ್ರೀ ಶೃಂಗೇರಿ ಜಗದ್ಗುರು
ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರ
ಕರಕಮಲ ಸಂಜಾತರಾದ
ಶ್ರೀ ಶ್ರೀ ಭಾರತೀತೀರ್ಥ ಮಹಾಸ್ವಾಮಿಗಳವರು



## ಆಶೀರ್ವಾದಗಳು

### ॥ ಶ್ರೀ ಶೃಂಗೇರಿ ಜಗದ್ಗುರು ಮಹಾಸಂಸ್ಥಾನಮ್ ॥

ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಪದವಾಕ್ಯ ಪ್ರಮಾಣ ಪಾರಾವಾರಪಾರೀಣ ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣಧ್ಯಾನ ಸಮಾಧ್ಯಷ್ಟಾಂಗಯೋಗಾನುಷ್ಠಾನನಿಷ್ಠ ತಪಶ್ಚಕ್ರವರ್ತ್ಯನಾದ್ಯವಿಚ್ಛಿನ್ನ ಶ್ರೀ ಶಂಕರಾಚಾರ್ಯಗುರುಪರಂಪರಾ ಪ್ರಾಪ್ತ ಷಡ್ದರ್ಶನಸ್ಥಾಪನಾಚಾರ್ಯ ವ್ಯಾಖ್ಯಾನಸಿಂಹಾಸನಾಧೀಶ್ವರ ಸಕಲನಿಗಮಾಗಮಸಾರಹೃದಯ ಸಾಂಖ್ಯತ್ರಯ ಪ್ರತಿಪಾದಕ ವೈದಿಕ ಮಾರ್ಗಪ್ರವರ್ತಕ ಸರ್ವತಂತ್ರಸ್ವತಂತ್ರಾದಿ ರಾಜಧಾನೀವಿದ್ಯಾನಗರ ಮಹಾರಾಜಧಾನೀ ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ ಶ್ರೀಮದ್ರಾಜಾಧಿರಾಜ ಗುರುಭೂಮಂಡಲಾಚಾರ್ಯ ಋಷ್ಯಶೃಂಗ ಪುರವರಾಧೀಶ್ವರ ತುಂಗಭದ್ರಾತೀರವಾಸಿ ಶ್ರೀಮದ್ವಿದ್ಯಾಶಂಕರ ಪಾದಪದ್ಮಾರಾಧಕ

ಶ್ರೀ ಶೃಂಗೇರಿ ಶ್ರೀ ಜಗದ್ಗುರು ಶ್ರೀ ಚಂದ್ರಶೇಖರ ಭಾರತೀ ಸ್ವಾಮಿ ಕರಕಮಲ ಸಂಜಾತ

ಶ್ರೀ ಜಗದ್ಗುರು ಶ್ರೀಮದಭಿನವ ವಿದ್ಯಾತೀರ್ಥ ಮಹಾ ಸ್ವಾಮಿಭಿಃ ಅಸ್ಮದತ್ಯಂತ ಪ್ರಿಯಶಿಷ್ಯ ಶ್ರೀ ಕೃಷ್ಣಜೋಯಿಸ ವಿಷಯೇ ನಾರಾಯಣಸ್ಮರಣ ಪೂರ್ವಕಂ ವಿರಚಿತಾ ಆಶೀಷಃ ಸಮುಲ್ಲಸಂತು ।

ವೇ॥ ಬ್ರ॥ ಶ್ರೀ ಕೆ. ಕೃಷ್ಣಜೋಯಿಸರು ಅನೇಕ ಸ್ಮೃತಿನಿಬಂಧನೆಗಳನ್ನು ನೋಡಿ ಅನುಷ್ಠಾನಕ್ಕೆ ಬೇಕಾಗಿರುವ ಅನೇಕ ವಿಷಯಗಳನ್ನು ಸಂಗ್ರಹಿಸಿ "ಧರ್ಮಶಾಸ್ತ್ರ ಕರದೀಪಿಕಾ" ಎಂಬ ಪುಸ್ತಕವನ್ನು ಬರೆದಿರುತ್ತಾರೆ. ಈ ಪುಸ್ತಕವು ಪುರೋಹಿತರುಗಳಿಗೆ ತುಂಬಾ ಉಪಕಾರಕವಾಗಿರುತ್ತದೆ. ಆಚಾರಪದ್ಧತಿಯನ್ನು ಅರಿಯುವ ಕುತೂಹಲ ಉಳ್ಳವರಿಗೂ ಮಾರ್ಗದರ್ಶಕವಾಗಿರುತ್ತದೆ ಇಂತೆಂಬು

ಪರಮಪೂಜ್ಯ ಶ್ರೀ ಜಗದ್ಗುರುಗಳವರ ಆಶೀರ್ವಾದಗಳನ್ನು ತಿಳಿಸುತ್ತಿದ್ದೇನೆ.

ಇಂತು ಆಪ್ತಕಾರ್ಯದರ್ಶಿ,
ಕೆ. ನ. ಶಂಕರ ಶರ್ಮಾ

ಅಕ್ಷಯ ಸಂ॥ ಚೈತ್ರ ಶುಕ್ಲ
ಪೂರ್ಣಿಮಾ ಗುರುವಾರ
ದಿನಾಂಕ 24-4-1986
ಶೃಂಗೇರಿ.

# ಮುನ್ನುಡಿ

ಕಲಿಯ ಪ್ರಭಾವದಿಂದ ಧರ್ಮವು ಹ್ರಾಸವಾಗುತ್ತಿರುವಂತೆ ಅದರ ಜ್ಞಾನವೂ ಸಹ ಹ್ರಾಸವಾಗುತ್ತಾ ಬಂದಿದೆ. ಸಂಸ್ಕೃತವೇ ಬಾರದ ನಮ್ಮ ದೇಶದ ಕನ್ನಡಿಗರಿಗೆ ನಾವು ಆಚರಿಸುವ ಧರ್ಮವು ಅಲ್ಪವಾಗಿದ್ದರೂ ಅದರ ತಿಳುವಳಿಕೆಯು ಎಲ್ಲರಿಗೂ ಇರಬೇಕೆಂಬುದು ನಮ್ಮ ಅಭಿಲಾಷೆ. ಇದರಿಂದ ಜನಸಾಮಾನ್ಯಕ್ಕೂ ಇದರ ಅರಿವಾಗಲು "**ಧರ್ಮಶಾಸ್ತ್ರ ಕರದೀಪಿಕೆ**" ಎಂಬ ಈ ಪುಸ್ತಕವನ್ನು ಬರೆಯಲಾಯಿತು.

ಇದರಲ್ಲಿ ಧರ್ಮಸಿಂಧುವಿನ ಅನೇಕ ಉಪಯುಕ್ತ ವಿಷಯಗಳನ್ನು ಆರಿಸಿ ಬರೆದಿರುವುದಲ್ಲದೆ, ಕೆಲವು ಕಡೆ ವೈದ್ಯನಾಥೀಯ, ಧರ್ಮಪ್ರವೃತ್ತಿ, ಗೋತ್ರಪ್ರವರನಿರ್ಣಯ, ವಿದ್ಯಾಮಾಧವೀಯ, ಆಪಸ್ತಂಭ ಯಲ್ಲಾಜೀಯ ಪ್ರಯೋಗ ಪಾರಿಜಾತ, ತಾಂತ್ರಿಕಮುಲಾಕರ ಮೊದಲಾದ ಗ್ರಂಥಗಳನ್ನು ಆಧರಿಸಿ ಬರೆಯಲಾಗಿದೆ. ಇದರಲ್ಲಿ ಪೂರ್ವಾರ್ಧ, ಉತ್ತರಾರ್ಧವೆಂದು ಎರಡುಭಾಗ ಮಾಡಿ ಬರೆದಿದೆ. ಪೂರ್ವಾರ್ಧದಲ್ಲಿ ನಾಂದಿಯಿಂದ ಪ್ರಾರಂಭ ಮಾಡಿ ವಿವಾಹ, ಉಪನಯನ, ದತ್ತುಸ್ವೀಕಾರ, ಗೋತ್ರ ಪ್ರವರವಿಚಾರ, ಗೃಹಾರಂಭ, ಗೃಹಪ್ರವೇಶ ಮೊದಲಾದ ವಿಷಯಗಳನ್ನು ಸನ್ಯಾಸಾಶ್ರಮ ಸ್ವೀಕಾರವಿಧಾನ ಪರ್ಯಂತರ ತಿಳಿಸಿದೆ. ಉತ್ತರಾರ್ಧದಲ್ಲಿ ಜೀವತ್ಪಿತೃಕನ ಕರ್ತವ್ಯ, ಎಂಬುದನ್ನು ಆರಂಭಿಸಿ ಅಪರಕರ್ಮಕ್ಕೆ ಸಂಬಂಧಪಟ್ಟ ವಿಷಯಗಳೊಂದಿಗೆ ಯತಿಸಂಸ್ಕಾರಪರ್ಯಂತ ಮುಖ್ಯ ವಿಷಯಗಳನ್ನು ತಿಳಿಸಿದೆ.

ಆಶೌಚಪ್ರಕರಣವನ್ನು ಎರಡನೇ ಭಾಗದಲ್ಲಿ ಸೇರಿಸಲಾಗಿದೆ,

ಇದರಲ್ಲಿ ಬಿಟ್ಟ ಕೆಲವು ವಿಷಯಗಳನ್ನು ಪರಿಶಿಷ್ಟದಲ್ಲಿ ಸೇರಿಸಲಾಗಿದೆ.

ಕೆಲವು ಕಾಲವಿಚಾರದಲ್ಲಿ ವ್ರತಕಥೆಗಳಿಗೆ ಮತ್ತು ಕರ್ಮಗಳಿಗೆ ಬೇಕಾದ ತಿಥಿನಿರ್ಣಯ, ಜಯಂತೀನಿರ್ಣಯವನ್ನು ಮಾಡಲು ಧರ್ಮಸಿಂಧುವನ್ನು

ಅನುಸರಿಸಿದೆ, ಪ್ರಾಜ್ಞರಾದ ಜ್ಯೋತಿಷ ವಿದ್ವಾಂಸರು ಈ ಗ್ರಂಥವಲ್ಲಿ ಬರೆದ ತಿಥ್ಯಾದಿ ನಿರ್ಣಯದಲ್ಲಿ ಅಭಿಪ್ರಾಯ ಭೇದವಿದ್ದರೆ ನೋಡಿ ದಯ್ವ ಇಟ್ಟು ತಿಳಿಸಿದಲ್ಲಿ ಅದನ್ನು ತಿದ್ದುಪಡಿ ಮಾಡಿ ಮುಂದೆ ಪ್ರಕಟಿಸಬಹುದು.

ಈ ಗ್ರಂಥವನ್ನು ಮುದ್ರಿಸಿ ಪ್ರಕಟಿಸಲು ಶ್ರೀ ಶೃಂಗೇರಿ ಶ್ರೀ ಜಗದ್ಗುರು ಶ್ರೀಮದಭಿನವ ವಿದ್ಯಾತೀರ್ಥಸ್ವಾಮಿಗಳವರೂ, ತತ್ಕರಕಮಲ ಸಂಜಾತರಾದ ಶ್ರೀ ಭಾರತೀತೀರ್ಥಸ್ವಾಮಿಗಳವರೂ ಸಹ ಪೂರ್ಣ ಅನುಗ್ರಹಿಸಿರುವರು. ಶ್ರೀಮಠದಿಂದಲೇ ಮುದ್ರಿಸಿ ಪ್ರಕಟಿಸಿರುವುದಕ್ಕೆ ನಾನು ತುಂಬಾ ಕೃತಜ್ಞನಾಗಿಯೂ, ಚಿರಋಣಿಯಾಗಿಯೂ ಇದ್ದೇನೆ.

ಈ ಗ್ರಂಥದ ಮುದ್ರಣವನ್ನು ಜಯನಗರದ ಶ್ರೀ ಶಾರದಾ ಮುದ್ರಣಾಲಯದಲ್ಲಿ ಶ್ರೀಯುತ ಪ್ರಸನ್ನಯ್ಯನವರು ವಹಿಸಿಕೊಂಡು ಅಂದವಾಗಿ ಮುದ್ರಿಸಿಕೊಟ್ಟಿದ್ದಾರೆ. ಅವರಲ್ಲೂ ನನ್ನ ಕೃತಜ್ಞತೆಯನ್ನು ಸೂಚಿಸುತ್ತೇನೆ.

ಶ್ರೀಶ್ರೀಗಳವರ ಅನುಗ್ರಹದಿಂದ ಬರೆದು ಪ್ರಕಟಿತವಾದ ಈ ಗ್ರಂಥವು ಕರ್ನಾಟಕದಲ್ಲಿರುವ ಧರ್ಮಾಭಿಮಾನಿಗಳಾದ ಆಸ್ತಿಕ ಮಹಾಜನರ ಕೈಸೇರಿ, ಧರ್ಮಾಚರಣೆಯ ತಿಳುವಳಿಕೆಯುಂಟಾಗಿ ಆ ಮೂಲಕ ಸನಾತನ ಧರ್ಮವು ಪುನರುಜ್ಜೀವಿತವಾಗಲೆಂದೂ, ಅದರಿಂದ ಸಕಲ ಶ್ರೇಯಸ್ಸೂ ಉಂಟಾಗಲೆಂದೂ ಸದ್ಗುರು ಚರಣಾರವಿಂದಗಳಲ್ಲಿ ಪ್ರಾರ್ಥಿಸುತ್ತೇನೆ.

ಪಂಡಿತಪ್ರವರ
ವಿದ್ವಾನ್ ಕೆ. ಕೃಷ್ಣಜೋಯಿಸ್

ಶಂಕರಮಠ,
ಬೆಂಗಳೂರು.

# ಅಭಿಪ್ರಾಯ ನಿವೇದನ

ವೇ|| ಬ್ರ|| ಶ್ರೀ ವಿದ್ವಾನ್ ಕೃಷ್ಣಜೋಯಿಸರಿಗೆ,

ನೀವು ನನಗೆ ನೋಡಲು ಕೊಟ್ಟಿದ್ದ "ಧರ್ಮಶಾಸ್ತ್ರ ಕರದೀಪಿಕಾ" ಎಂಬ ಪುಸ್ತಕವನ್ನು ಆಮೂಲಾಗ್ರವಾಗಿ ನೋಡಿದಾಗ, ಆವಶ್ಯಕವಾಗಿರುವ ಧರ್ಮಶಾಸ್ತ್ರದ ಮುಖ್ಯ ವಿಷಯಗಳನ್ನು ಧರ್ಮಸಿಂಧುವಿನಿಂದಲೂ, ಕೆಲವು ಧರ್ಮಶಾಸ್ತ್ರಗಳಿಂದಲೂ ಆಯ್ಕೆಮಾಡಿ ಸಪ್ರಮಾಣವಾಗಿ ಬರೆದಿದ್ದೀರಿ.

ಇದರಲ್ಲಿ ಪೂರ್ವಾರ್ಧ, ಉತ್ತರಾರ್ಧವೆಂದು ವಿಭಾಗ ಮಾಡಿ, ನಾಂದಿಯಿಂದ ಆರಂಭಿಸಿ ಶುಭಕಾರ್ಯಗಳಿಗೆ ಉಪಯುಕ್ತವಾದ ಕಾಲನಿರ್ಣಯಾದಿಗಳನ್ನೂ, ಅವುಗಳ ಸ್ವರೂಪವನ್ನೂ ಸ್ಪಷ್ಟವಾಗಿ ತಿಳಿಸಿದೆ. ಅಲ್ಲದೆ ಉತ್ತರಾರ್ಧದಲ್ಲಿ ಜೀವತ್ಪಿತೃಕನಿಗೆ ಕೆಲವು ಕರ್ಮಾಧಿಕಾರ ನಿರ್ಣಯದಿಂದ ಆರಂಭಿಸಿ ಅಪರಕ್ರಿಯೆಗಳಿಗೆ ಸಂಬಂಧಿಸಿದ ಅಧಿಕಾರಾದಿ ನಿರ್ಣಯವನ್ನು ತಿಳಿಸಿ, ಪರಿಶಿಷ್ಟದಲ್ಲಿ ಬಿಟ್ಟ ಕೆಲವು ಅಂಶಗಳನ್ನು ಉಲ್ಲೇಖಿಸಿದೆ. ಇವೆಲ್ಲವೂ ತೃಪ್ತಿಕರವಾಗಿದೆ.

ಕನ್ನಡನಾಡಿನ ಆಸ್ತಿಕಮಹಾಜನರು ಸ್ವಧರ್ಮಾಚರಣೆಯ ಬಗ್ಗೆ ಸುಲಭವಾಗಿ ತಿಳಿದು ಆಚರಿಸಲು ಈ ಗ್ರಂಥವು ಸಹಾಯಕವಾಗಿರುವುದು. ಸಾಮಾನ್ಯವಾಗಿ ತಿಳುವಳಿಕೆಯಿರುವ ಪುರೋಹಿತವರ್ಗಕ್ಕೂ ಇದು ತುಂಬಾ ಸಹಾಯಕವಾಗಿದೆ. ಆದರಿಂದ ನಮ್ಮ ನಾಡಿನ ಜನರು ಈ ಪುಸ್ತಕದಿಂದ ತಮ್ಮ ಧರ್ಮವನ್ನು ತಿಳಿದು ಆಚರಿಸಿ, ಭಗವತ್ಕೃಪೆಗೆ ಪಾತ್ರರಾಗಲೆಂದು ಆತ್ಮವಿಶ್ವಾಸದಿಂದಲೂ, ಸಂತೋಷದಿಂದಲೂ ಸದಭಿಪ್ರಾಯವನ್ನು ಈ ಮೂಲಕ ಪ್ರಕಾಶಪಡಿಸಿರುತ್ತೇನೆ.

ಇಂತಿ ನ್ಯಾಯಮೀಮಾಂಸಾವಿದ್ವಾನ್

**ಬಿ. ರಾಮಭಟ್ಟ,**

ಶ್ರೀ ಶಂಕರಮಠದ ಪಾಠಶಾಲಾ ಅಧ್ಯಕ್ಷರು.

# ವಿಷಯಾನುಕ್ರಮಣಿಕೆ

## ಪರಿಶಿಷ್ಟ ವಿಷಯಗಳು

॥ ಶ್ರೀ ಸದ್ಗುರುಚರಣಾರವಿಂದಾಭ್ಯಾಂನಮಃ ॥

# ಧರ್ಮಶಾಸ್ತ್ರ ಕರದೀಪಿಕಾ

ರಾಕಾಶಶಾಂಕವತ್ ಸೌಮ್ಯದರ್ಶನಾನಂದದಾಯಿನಮ್ ।
ಶ್ರೀಚಂದ್ರಶೇಖರಾಭಿಖ್ಯಂ ಹೃದಾವಂದೇ ಜಗದ್ಗುರುಮ್ ॥
ಗಂಗಾತೀರ್ಥಮಿವಸ್ಮರ್ತೃ-ವಕ್ತೃಶ್ರೋತೃಸುಪಾವನಮ್ ।
ವಿದ್ಯಾತಪೋಭ್ಯಾಂರಾಜನ್ತಂ ವಿದ್ಯಾತೀರ್ಥಂ ಗುರುಂಭಜೇ ॥
ವನ್ದೇಹಂ ಭಾರತೀತೀರ್ಥಂ ನ್ಯಾಯವೇದಾನ್ತಪಾರಗಂ ।
ವಿದ್ವದ್ವರೇಣ್ಯಾಭಿವನ್ದ್ಯಂ ಭಾಸ್ವನ್ತಂ ತೇಜಸಾನಘಮ್ ॥
ಹೇರಂಬಂ ಯೋಗಿವರ್ಯಸ್ಯ ಸ್ತಂಭೇದರ್ಶಿತರೂಪಿಣಂ ।
ಕಂಚಿದೇಕಂ ಭಜೇ ವಿಘ್ನಪ್ರಶಮಾರ್ಥಂತು ಮಹಾದ್ಭುತಂ ॥
ರಾಕೇಂದುಮುಖಿ ಕಲ್ಯಾಣಿ ಚಂದ್ರಿಕಾಧವಳೋಜ್ವಲೇ ।
ವೀಣಾಪಾವಂತೇನಿತ್ಯಂ ಶಾರದೇ ದೇಹಿ ಸನ್ಮತಿಂ ॥
ಚತುರ್ಮುಖ ಮುಖಾಂಭೋಜ ವಿಕಾಸಕರಲೋಚನೇ ।
ಹೃದಂಬುಜವಿಕಾಸಂ ಮೇ ಕುರುದೇವಿ ವರಾನನೇ ॥

## ನಾಂದೀ ಸಮಾರಾಧನೆ

1 ನಾಂದಿಯೆಂದು ರೂಢಿಯಲ್ಲಿ ಕರೆಯುವುದು ನಾಂದಿಶ್ರಾದ್ಧವನ್ನೇ. ಇದನ್ನು ವಿವಾಹಾದಿ ಕರ್ಮಗಳಲ್ಲಿ ಮೊಟ್ಟಮೊದಲು ಮಾಡಬೇಕಾದದ್ದು. ಪುಂಸವನ, ಸೀಮಂತ, ಚೌಲ, ಉಪನಯನ, ವಿವಾಹಾದಿಗಳಲ್ಲೂ, ಅಗ್ನ್ಯಾಧಾನ ಮೊದಲಾದ ಶ್ರೌತಕರ್ಮಗಳಲ್ಲೂ, ಗರ್ಭಾಧಾನಾದಿ ಸಂಸ್ಕಾರಗಳಲ್ಲೂ ಮೊಟ್ಟಮೊದಲು ನಾಂದಿಯನ್ನು ಮಾಡಬೇಕೆಂದು ಹೇಳಿರುವರು.

ಅಲ್ಲದೆ, ವಾಪಿ, ಕೂಪ, ತಟಾಕ, ಆರಾಮ ಮೊದಲಾದ ಪೂರ್ತಕರ್ಮ ಗಳಲ್ಲೂ, ಉದ್ಯಾಪನೆ ಮೊದಲಾದ ಕರ್ಮಗಳಲ್ಲೂ ಮೊದಲು ನಾಂದಿ ಯನ್ನು ಮಾಡಲು ಹೇಳಿರುವರು. ಇದಕ್ಕೆ ಅಭ್ಯುದಯಿಕ ಶ್ರಾದ್ಧವೆಂದು ಮತ್ತೊಂದು ಹೆಸರೂ ಇದೆ.

ಗೃಹ್ಯಕಾರಿಕೆಯಲ್ಲಿ-'ಸ್ಯಾದಾಭ್ಯುದಯಿಕ ಶ್ರಾದ್ಧಂ ವೃದ್ಧಿಪೂರ್ತೇಷು ಕರ್ಮಸು', ಪೂರ್ತವೆಂಬ ವಾಪೀಕೂಪಾದಿ ನಿರ್ಮಾಣಕ್ಕೆ ಮೊದಲು ಈ ನಾಂದಿಯನ್ನು ಮಾಡಬೇಕು. ವೃದ್ಧಿನಿಮಿತ್ತವಾಗಿ ಅಂದರೆ, ನಮ್ಮ ಅಭ್ಯು ದಯ ಏಳಿಗೆಗಾಗಿ ಮಾಡುವ ಕರ್ಮಗಳಲ್ಲೂ ಮೊದಲು ಇದನ್ನು ಮಾಡ ಬೇಕು. ನಾಂದಿಯೆಂಬ ಪಿತೃಸಮಾರಾಧನೆ ಮಾಡದೆ ಈ ಮೇಲ್ಕಂಡ ಯಾವ ಮಂಗಳಕಾರ್ಯವನ್ನೂ ಮಾಡಬಾರದು. ಆದರಿಂದ ಇದು ಅವಶ್ಯವಾಗಿದೆ.

2 ಈ ನಾಂದೀಶ್ರಾದ್ಧಕ್ಕೆ ಮೊದಲು ಮಾತೃಕಾಪೂಜೆ ಮಾಡಬೇಕು. ಮಾತೃಕೆಯರು, ದೇವಮಾತೃಗಳು, ಮನುಷ್ಯಮಾತೃಗಳೆಂದು ಎರಡು ಬಗೆ. 'ಮನುಷ್ಯೋಃಮಾತ್ರಾದಯಃ, ದೇವ್ಯೋಃ ಬ್ರಾಹ್ಮ್ಯಾದಯಃ' ಅಂದರೆ ಮಾತೃ, ಪಿತಾಮಹೀ, ಪ್ರಪಿತಾಮಹೀ ಇವರೇ ಮನುಷ್ಯಮಾತೃಕೆಯರು. ಬ್ರಾಹ್ಮೀ, ಮಹೇಶ್ವರೀ, ವೈಷ್ಣವೀ, ಕೌಮಾರೀ, ಇಂದ್ರಾಣೀ ಮಾಹೇಂದ್ರೀ ವಾರಾಹೀ, ಚಾಮುಂಡಾ ಎಂಬ ಸಪ್ತಮಾತೃಕೆಯರು, ದುರ್ಗಾ, ಗಣಪತಿ, ಕ್ಷೇತ್ರಪಾಲ ಇವರನ್ನೂ ಪೂಜಿಸಬೇಕು. ಇವರನ್ನು ಪೂಜಿಸದೇ ಮಾಡಿದರೆ ಯಜಮಾನನಿಗೆ ಹಿಂಸೆಯನ್ನುಂಟುಮಾಡುವರು.

3 ಆದರೆ, ನಾಂದೀಪಿತೃದೇವತೆಗಳ ಆರಾಧನೆಯಿಲ್ಲದೆ, ಕೇವಲ ಮಾತೃಕಾಪೂಜೆ ಮಾಡಲು ಅವಕಾಶವಿಲ್ಲ. ಈಗ ಕೆಲವರು ಅನೇಕ ಕಡೆ ಕೇವಲ ಮಾತೃಕಾಪೂಜೆ ಮಾಡುತ್ತಿರುವುದು ಕಂಡುಬಂದಿದೆ. ಇದು ಸರಿಯಲ್ಲ. ಅಶಾಸ್ತ್ರೀಯ. ("ಅಕೃತ್ವಾ ಮಾತೃಯಾಗಂತು ವೈದಿಕಂ ಯಃ ಸಮಾಚರೇತ್ । ತಸ್ಯಕ್ರೋಧಸಮಾವಿಷ್ಟಾಃ ಹಿಂಸಾಮಿಚ್ಛಂತಿ ಮಾತರಃ ॥" ಇದು ಮಾತೃಕಾಪೂಜೆಯ ಅವಶ್ಯಕತೆ ಬಗ್ಗೆ ಪ್ರಮಾಣವಚನ.)

ಜಾತಕರ್ಮಾದಿಗಳು ಒಟ್ಟುಕೂಡಿದಾಗ ಒಂದೇ ಸಲ ನಾಂದೀ ಮಾಡಬೇಕು.

4. (ಸಮಸ್ತ ಅಭ್ಯುದಯ ಕರ್ಮಗಳಲ್ಲೂ ಈ ಮಾತೃಕಾಪೂಜೆ, ನಾಂದೀಸಮಾರಾಧನೆಯನ್ನೂ ಮಾಡಬೇಕು.) ಆದರೆ, ಕೆಲವು ವಿಷಯ ಗಳಲ್ಲಿ ಒಂದಾವರ್ತಿ ಮಾಡಿದರೆ ಸಾಕು. ಗಣಶಃ ಕ್ರಿಯಮಾಣಾನಾಂ ಮಾತೃಭ್ಯಃ ಪೂಜನಂ ಸಕೃತ್ । ಸಕೃದೇವ ಭವೇಚ್ಛ್ರಾದ್ಧಂ ಆದೌ ನ ಪೃಥಗಾದಿಷು ಎಂದಂತೆ ಹಿಂದೆ ಬಿಟ್ಟಿದ್ದ ಜಾತಕರ್ಮ, ನಾಮಕರಣ, ಅನ್ನ ಪ್ರಾಶನ, ಇತ್ಯಾದಿಗಳನ್ನು ಒಟ್ಟಾಗಿ ಮಕ್ಕಳಿಗೆ ಮಾಡುವಾಗ ಮೊದಲು ಒಂದು ಸಲ ಮಾಡಬೇಕು. ಪ್ರತ್ಯೇಕವಾಗಿ ಅಂದರೆ, ಜಾತಕರ್ಮಕ್ಕೆ ಬೇರೆ, ನಾಮಕರಣಕ್ಕೆ ಬೇರೆಯೆಂತ ಮಾಡಬಾರದು. ಚೂಡಾಕರ್ಮವನ್ನು ಮಾಡು ವಾಗಲೂ, ಉಪನಯನದೊಂದಿಗೆ ಚೂಡಾಕರ್ಮ ಮಾಡುವಾಗಲೂ ಹಿಂದೆ ಬಿಟ್ಟಿದ್ದ ಜಾತಕರ್ಮಾದಿಗಳನ್ನು ಒಟ್ಟು ಸೇರಿಸಿ ಮಾಡುವಾಗ ಒಂದೇ ಸಲ ಮಾತೃಕಾಪೂಜೆ, ನಾಂದಿ ಇವುಗಳನ್ನು ಮಾಡಬೇಕೆಂದು ತಿಳಿಯಬೇಕು.

'ಅಸ್ಯ ಕುಮಾರಸ್ಯ ಜಾತಕರ್ಮಾದಿ ಸಂಸ್ಕಾರಾಂಗತ್ವೇನ ಮಾತೃಕಾ ಪೂಜಾಂ ನಾಂದೀಸಮಾರಾಧನಂಚ ತಂತ್ರೇಣ ಕರಿಷ್ಯೇ' ಎಂದು ಸಂಕಲ್ಪ ಮಾಡಿಕೊಳ್ಳಬೇಕು.

## ನಾಂದೀ ಮಾಡಬೇಕಾದ ಕಾಲನಿರ್ಣಯ

5. ಜಾತಾದಿ ಸಂಸ್ಕಾರಗಳನ್ನು ಮಾಡುವದಿನವೇ ನಾಂದೀ ಮಾಡ ಬಹುದು. ಉಪನಯನಾದಿಗಳನ್ನು ಮಾಡುವವರು ಆದಿನವಾಗದಿದ್ದರೆ, ಅದರ ಹಿಂದಿನ ದಿನವೇ ನಾಂದೀ ಮಾಡಿಕೊಳ್ಳುವುದು.

6. ನಾಂದೀ ಮಾಡಿಕೊಳ್ಳುವವನ ಪತ್ನಿಯು ರಜಸ್ವಲೆಯಾಗುವ ಶಂಕೆಯು ಉಂಟಾದಲ್ಲೂ, ಜನನಾಶೌಚಾದಿಗಳು ಬರುವ ಶಂಕೆಯಿದ್ದಲ್ಲೂ, ಉಪನಯನ-ವಿವಾಹಾದಿಗಳನ್ನು ಮಾಡುವವರು ಹಿಂದೆಯೇ ನಾಂದಿ ಮಾಡಿ ಕೊಳ್ಳಬಹುದು. ಯಜ್ಞ ಮಾಡುವವನು ಇಪ್ಪತ್ತೊಂದು ದಿನಗಳಿಗೆ

ಮುಂಚೆ ನಾಂದಿ ಇಟ್ಟುಕೊಳ್ಳಬೇಕು. ವಿವಾಹ ಮಾಡುವವರು ಹತ್ತು ದಿನಗಳಲ್ಲೂ, ಉಪನಯನ ಮಾಡುವವರು ಆರು ದಿನಗಳಲ್ಲೂ, ಚೌಲ ಮಾಡುವವರು ಮೂರು ದಿನಗಳಲ್ಲೂ, ಹಿಂದೆಯೇ ನಾಂದಿ ಇಟ್ಟುಕೊಳ್ಳಬೇಕು. ಈ ರೀತಿ ಹೇಳಿದ ದಿನಗಳು ಅಂದರೆ, ೨೧, ೧೦, ೬, ೩ ಎಂದು ಆಯಾಯ ಕರ್ಮಗಳಿಗೆ ಹೇಳಿದ ದಿನಗಳು ಕಳೆದು ಹೋದರೆ ಪುನಃ ನಾಂದಿ ಇಟ್ಟುಕೊಳ್ಳಬೇಕು.

ಏಕವಿಂಶತ್ಯಹರ್ಯಜ್ಞೇ, ವಿವಾಹೇ ದಶವಾಸರಾಃ ।
ತ್ರಿಷಟ್ ಚೌಲೋಪನಯನೇ ನಾಂದೀಶ್ರಾದ್ಧಂ ವಿಧೀಯತೇ ॥

ಎಂದು ಕಾಲಕ್ಕೆ ಅವಧಿಯನ್ನು ಹೇಳಿದ್ದಾರೆ. ಒಂದೇ ಪಕ್ಷದಲ್ಲಿ ಈ ಅವಧಿ ಮುಗಿದರೂ ಪುನಃ ನಾಂದೀ ಮಾಡಬೇಕು. ಮಾಡಬಾರದೆಂದು ಹೇಳಿಲ್ಲ.

7. ನಾಂದೀ ಇಟ್ಟುಕೊಂಡ ನಂತರ ಸೂತಕಾದಿ ಆಶೌಚವು ಬಂದರೂ ವಿವಾಹಾದಿಗಳನ್ನು ಮಾಡಲು ಅಡ್ಡಿಯಿರುವುದಲ್ಲ. ಆರಂಭಕ್ಕೆ ಮುಂಚೆ ಬಂದರೆ ಮಾತ್ರ ಸೂತಕಾದಿ ಆಶೌಚಗಳೆಂದು ಹೇಳಿದೆ.

ವಿವಾಹವ್ರತಯಜ್ಞೇಷು ಶ್ರಾದ್ಧೇಹೋಮಾರ್ಚನೇಜಪೇ ।
ಆರಬ್ಧೇತು ಸೂತಕಂ ನಸ್ಯಾತ್, ಅನಾರಬ್ಧೇತು ಸೂತಕಂ ॥

ಆರಂಭವೆಂದರೆ ಏನು ?

' ಪ್ರಾರಂಭೋವರಣಂ ಯಜ್ಞೇ ಸಂಕಲ್ಪೋವ್ರತಸತ್ರಯೋಃ ।
ನಾಂದೀಮುಖಂ ವಿವಾಹಾದೌ ಶ್ರಾದ್ಧೇ ಪಾಕಪರಿಕ್ರಿಯಾ ॥

ಅರ್ಥ—ಯಜ್ಞದಲ್ಲಿ ಋತ್ವಿಗ್ವರಣೆಯಾಗಿದ್ದರೆ ಅದೇ ಯಜ್ಞವು ಆರಂಭವಾಯಿತೆಂದೂ, ವ್ರತ (ಸ್ನಾತಕವ್ರತಾದಿಗಳು) ಸತ್ರವೆಂಬ ಮಹಾ ಯಾಗಳಲ್ಲೂ ಸಂಕಲ್ಪವಾಯಿತೆಂದರೆ ಆರಂಭವಾಗಿದೆಯೆಂದೂ, ವಿವಾಹಾದಿ ಮಂಗಳಕಾರ್ಯಗಳಲ್ಲಿ ನಾಂದಿಯಾಯಿತೆಂದರೆ ಆರಂಭವಾಯಿತೆಂದೂ, ಶ್ರಾದ್ಧದಲ್ಲಿ ಪಾಕಪರಿಕ್ರಿಯೆ (ಅಡಿಗೆ ಮಾಡುವುದು) ಆರಂಭವಾಗಿದ್ದರೆ ಆರಂಭ ವಾಯಿತೆಂದೂ ಅರ್ಥ. ಸಮೀಪದಲ್ಲಿ ಬೇರೆ ಮುಹೂರ್ತವಿಲ್ಲದಿದ್ದರೆ

ಆಪತ್ಕಾಲವಲ್ಲಿ ಮೇಲೆ ಹೇಳಿದಂತೆ ನಾಂದಿಯನ್ನು ಮುಂಚೆಯೇ ಇಟ್ಟು ಕೊಂಡು ಮಂಗಳಕಾರ್ಯಗಳನ್ನು ನಡೆಸಬಹುದೆಂದೂ, ಆಪತ್ಕಾಲವಲ್ಲ ದಿರುವ ಪಕ್ಷದಲ್ಲಿ ಆಶೌಚವನ್ನು ಕಳೆದುಕೊಂಡೇ ನಾಂದೀ ಮಾಡಿ ಮಂಗಳ ಕಾರ್ಯ ಮಾಡಬೇಕೆಂದೂ ಧರ್ಮಸಿಂಧುಕಾರರು ನಿರ್ಣಯ ಮಾಡಿದ್ದಾರೆ. ಅಂದರೆ ನಾಂದಿಯನ್ನು ಮಾಡಿದ್ದರೂ ಆಪತ್ತಿಲ್ಲದಿರುವಾಗ ಸೂತಕ ಕಳೆದು ಕೊಂಡು ಬೇರೆ ಮುಹೂರ್ತದಲ್ಲಿ ಮಾಡಬೇಕೆಂದು ನಿರ್ಣಯವು.

8. ನಾಂದಿಯಾದ ಮೇಲೆ ಆಶೌಚವಿಲ್ಲವೆಂಬ ವಚನವು ಬೇರೆ ಗತಿ ಯಿಲ್ಲದಿರುವಾಗ ಅಂತಹ ಆಪತ್ತಿನಲ್ಲಿ ಮಾತ್ರ ಗ್ರಾಹ್ಯವೆಂದು ನಿರ್ಣಯ ಸಿಂಧುಕಾರರು ತೀರ್ಮಾನಿಸಿರುವರು.

ದೊಡ್ಡ ಆಪತ್ತು ಬಂದಲ್ಲಿ ಪ್ರಾರಂಭ ಮಾಡುವ ಮುಂಚೆಯೂ ಸೂತಕವು (ಮೈಲಿಗೆಯು) ಬಂದಲ್ಲಿ ಕೂಷ್ಮಾಂಡಹೋಮವನ್ನು ಮಾಡಿ, ಗೋದಾನ (ಅದರ ಪ್ರತ್ಯಾಮ್ನಾಯ ದಕ್ಷಿಣಾ ದಾನಮಾಡಿ) ಪಂಚಗವ್ಯ ತೆಗೆದುಕೊಂಡು ಶುದ್ಧನಾಗಿ ಚೂಡಾ, ಉಪನಯನ, ವಿವಾಹಾದಿಗಳನ್ನು ಮಾಡಬಹುದೆಂದು ಹೇಳಿದೆ. ಮುಹೂರ್ತಮಾರ್ತಾಂಡಕಾರನು ಇದು ಜನನಾಶೌಚದಲ್ಲಿ ಮಾತ್ರ ಹೇಳಿದ್ದೆಂದು ನಿರ್ಣಯಿಸಿರುವನು.

9. ಉಪಾಕರ್ಮಾದಿಗಳಲ್ಲಿ ಪ್ರಥಮಾರಂಭದಲ್ಲಿ ಮಾತ್ರ ನಾಂದಿ ಆವಶ್ಯಕ. ಗರ್ಭಾದಾನಾದಿ ಸಂಸ್ಕಾರಗಳಲ್ಲೂ ವಾಪೀ. ಕೂಪ. ತಟಾಕಾದಿ ನಿರ್ಮಾಣ, ದೇವತಾಪ್ರತಿಷ್ಠಾದಿ ಕಾರ್ಯಗಳಲ್ಲೂ. ಆಧಾನಾದಿ ಕರ್ಮಗಳಲ್ಲೂ, ಸಂನ್ಯಾಸಸ್ವೀಕಾರ ಮಾಡುವಾಗಲೂ, ಕಾಮ್ಯ ವೃಷೋತ್ಸರ್ಗ, ಗೃಹಪ್ರವೇಶ, ತೀರ್ಥಯಾತ್ರೆ, ಉಪಾಕರ್ಮ (ನೂತನೋಪಾಕರ್ಮ) ಸರ್ಪಬಲಿ. ಅಶ್ವಯುಜಿ, ಆಗ್ರಯಣ ಮುಂತಾದ ಪಾಕ ಸಂಸ್ಥೆಗಳಲ್ಲೂ ಮೊಟ್ಟಮೊದಲು ಆರಂಭಿಸುವಾಗ ನಾಂದಿ ಮಾಡಬೇಕು. ಪುನರಾಧಾನ, ಸೋಮಯಾಗಾದಿ ವ್ಯತಿರಿಕ್ತ ಕರ್ಮಗಳನ್ನು ಪದೇ ಪದೇ ಮಾಡುವಾಗ, ಅಷ್ಟಕಾಶ್ರಾದ್ಧಾದಿಗಳಲ್ಲೂ, ನಾಂದೀ ಶ್ರಾದ್ಧ ಮಾಡಬೇಕಾಗಿಲ್ಲ. ಗರ್ಭಾದಾನ, ಪುಂಸವನ, ಸೀಮಂತ, ಚೌಲ, ಮುಂಜಿ

ವಿವಾಹ ಇವನ್ನು ಬಿಟ್ಟುಳಿದ ಸಂಸ್ಕಾರ ಕರ್ಮಗಳಲ್ಲೂ ಉಪಾಕರ್ಮದಲ್ಲೂ ನಾಂದಿಯನ್ನು ಮಾಡಿದರೂ ಮಾಡಬಹುದು, ಬಿಡಲೂ ಬಹುದು.

10. ಚೌಲಾದಿ ಕರ್ಮದೊಂದಿಗೆ ಜಾತಕರ್ಮಾದಿಗಳನ್ನು ಮಾಡುವುದಾದರೆ ನಾಂದಿಯನ್ನು (ನಾಂದೀ ಶ್ರಾದ್ಧವನ್ನು) ಒಂದೇ ಸಲ ಆಚರಿಸುವುದೇ ಹೊರತು, ಒಂದೊಂದಕ್ಕೂ ಬೇರೆಯಾಗಿ ನಾಂದಿಮಾಡಬೇಕಾಗಿಲ್ಲ.

11. ಯಮಳರಿಗೆ (ಅಂದರೆ ಅವಳಿ ಜವಳಿ ಮಕ್ಕಳಿಗೆ)ಏಕಕಾಲದಲ್ಲಿ ಜಾತಕರ್ಮ ಸಂಸ್ಕಾರ ಮಾಡುವಾಗಲೂ ಒಂದೇ ನಾಂದಿಯನ್ನು ಮಾಡುವುದು. ಅವಳಿ ಜವಳಿ ಮಕ್ಕಳು ಪುತ್ರರಾಗಿರಲಿ ಅಥವಾ ಪುತ್ರಿಯರಾಗಿರಲಿ, ಇವರಿಗೆ ವಿವಾಹ, ಉಪನಯನ ಮುಂತಾದ ಸಂಸ್ಕಾರಗಳನ್ನು ಜೊತೆಯಲ್ಲೇ ಮಾಡುವಾಗ ನಾಂದಿಯನ್ನು ಒಂದೇ ಸಲ ಮಾಡಬೇಕು.

ಯಮಳರಿಗೆ ಒಂದೇ ಮಂಟಪದಲ್ಲಿ ಏಕಕಾಲದಲ್ಲಿ ಯಜಮಾನನು ಸಂಸ್ಕಾರಗಳನ್ನು ಒಟ್ಟಾಗಿಯೇ ಮಾಡಬಹುದು, ದೋಷವೇನೂ ಇಲ್ಲ.

12. ಜೀವತ್‌ಪಿತೃ-ತಂದೆ ಮಾತ್ರ ಬದುಕಿದ್ದು ತಾಯಿಯು ಮೃತಳಾಗಿದ್ದವನು, ತನ್ನ ಮಕ್ಕಳಿಗಾಗಿ ಮಾಡುವ ಚೌಲಾದಿ ಸಂಸ್ಕಾರಗಳಲ್ಲಿ

**" ಜೀವೇತ್ತು ಯದಿ ವರ್ಗಾದ್ಯಃ ತಂ ವರ್ಗಂತು ಪರಿತ್ಯಜೇತ್ । "**

ಎಂಬ ನ್ಯಾಯದಂತೆ ಪಿತೃ ವರ್ಗವನ್ನು ಬಿಟ್ಟು ಮಾತೃವರ್ಗ, ಮಾತಾಮಹವರ್ಗಗಳಿಗೆ ಮಾತ್ರ ಪಾರ್ವಣ ಅಥವಾ ಹಿರಣ್ಯ ಶ್ರಾದ್ಧವನ್ನು ಮಾಡಬೇಕು, ತಾಯಿಯು ಬದುಕಿದ್ದರೆ ಮಾತಾಮಹವರ್ಗಕ್ಕೆ ಮಾತ್ರ ಮಾಡಬೇಕು, ಮಾತಾಮಹನೂ ಬದುಕಿದ್ದರೆ, ಮಾತೃವರ್ಗಕ್ಕೆ ಮಾತ್ರ ಮಾಡಬೇಕು. (ಕೇವಲ ಮಾತೃ ಪಾರ್ವಣಮಾಡುವಾಗ ವಿಶ್ವೇದೇವರಿಗೆ ಮಾಡಬೇಕಾಗಿಲ್ಲ. ಜೀವತ್‌ಪಿತೃಕನು ತನ್ನ ಮಕ್ಕಳಿಗೆ ಮಾಡುವ ಸಂಸ್ಕಾರಗಳಲ್ಲಿ ಮೂರು ವರ್ಗದಲ್ಲೂ ಮಾತೃ, ಪಿತೃ, ಪಿತಾಮಹರು

ಬದುಕಿದ್ದಲ್ಲಿ ನಾಂದೀ ಶ್ರಾದ್ಧವನ್ನು ಮಾಡಬೇಕಾಗಿಲ್ಲ (ನಾಂದಿಯನ್ನು ಬಿಡಬೇಕು)

13. ತನಗೆ ಎರಡನೇ ವಿವಾಹವಾಗುವಾಗಲೂ ಆಧಾನ ಪುತ್ರೇಷ್ಟಿ, ಸೋಮಯಾಗಾದಿ ಕರ್ಮಗಳಲ್ಲೂ, ತಂದೆಯು ಯಾರಿಗಾಗಿ ಮಾಡುತ್ತಿದ್ದನೋ ಅವರಿಗೆ ಮಾಡಬೇಕು.

14. ಏವಂಚ ತಾಯಿಯೂ ಮಾತಾಮಹನೂ ಮೃತಪಟ್ಟಿದ್ದು ತಂದೆಯು ಬದುಕಿರುವಾಗ ಈ ಜೀವತ್ ಪಿತೃಕನು ತನಗಾಗಿ ಮಾಡಿಕೊಳ್ಳುವ ಸಂಸ್ಕಾರಗಳಲ್ಲಿ (ವಿವಾಹಾದಿಗಳಲ್ಲಿ) ಪಿತುಃ ಮಾತೃ ಪಿತಾಮಹೀ ಪ್ರಪಿತಾಮಹ್ಯಃ ಪಿತುಃ ಪಿತೃ ಪಿತಾಮಹ ಪ್ರಪಿತಾಮಹಾಃ, ಪಿತುರ್ಮಾತಾಮಹ ಮಾತೃ ಪಿತಾಮಹ ಮಾತೃ ಪ್ರಪಿತಾಮಹಾಃ ನಾಂದೀ ಮುಖಾಃ ಎಂದೇ (ಪಾರ್ವಣ ತ್ರಯವನ್ನು) ಉದ್ದೇಶಿಸಿ ನಾಂದೀ ಮಾಡಬೇಕು.

**ತಂದೆಯುಲ್ಲದೆ ಬೇರೆ ಜನರು ನಾಂದಿಯನ್ನು ಮಾಡುವುದಾದರೆ ಯಾರು ಮಾಡಬೇಕು ? ಹೇಗೆ ಮಾಡಬೇಕು ? ಎಂಬುದರ ವ್ಯವಸ್ಥೆ**

15. ಕನ್ಯಾವಿವಾಹವನ್ನೋ, ಪುತ್ರನ ಉಪನಯನವನ್ನೋ ಪುತ್ರನ ಪ್ರಥಮ ವಿವಾಹವನ್ನೋ ಯಾವುದಾದರೊಂದನ್ನು ಮಾಡುವವನು ಪಿತೃವ್ಯ (ಚಿಕ್ಕಪ್ಪ ದೊಡ್ಡಪ್ಪ) ಅಥವಾ ಸೋದರಮಾವ ಮೊದಲಾದವರು ನಾಂದಿ ಮಾಡಬೇಕು. ಕನ್ಯೆಗೂ ಪುತ್ರರಿಗೂ ತಂದೆತಾಯಿಗಳು ಮೃತಪಟ್ಟಿದ್ದರೆ ಮಾತ್ರ ಮೇಲ್ಕಂಡ ಪಿತೃವ್ಯ ಮೊದಲಾದವರು ನಾಂದಿ ಅಧಿಕಾರಿಗಳು. ಆವಾಗ ಉಚ್ಚಾರ ಮಾಡುವ ಕ್ರಮ “ಸಂಸ್ಕಾರ್ಯಸ್ಯ ಪಿತೃ ಪಿತಾಮಹ ಪ್ರಪಿತಾಮಹಾಃ, ಸಂಸ್ಕಾರ್ಯಸ್ಯ ಮಾತೃಪಿತಾಮಹೀ ಪ್ರಪಿತಾಮಹ್ಯಃ. ಸಂಸ್ಕಾರ್ಯಸ್ಯ ಮಾತಮಹ ಮಾತುಃಪಿತಾಮಹ ಮಾತುಃ ಪ್ರಪಿತಾ ಮಹಾಃ ಸಪತ್ನೀಕಾಃ ಎಂದು ಹೇಳಬೇಕು.

16 ಸಾಪತ್ನ ಭ್ರಾತಾ (ಸೌತಿಮಕ್ಕಳ ಸಹೋದರರು) ಮಾಡುವಾಗ

**ಸಂಸ್ಕಾರ್ಯಸ್ಯ ಮಾತೃಪಿತಾಮಹೀ ಪ್ರಪಿತಾಮಹ್ಯಃ**

ಇತ್ಯಾದಿಯಾಗಿ ಉಚ್ಚರಿಸಬೇಕು. ಜೀವತ್ಪಿತೃಕನು ಮೃತ ಮಾತೃ ಮೃತ ಮಾತಾಮಹವುಳ್ಳವನಾದರೂ ತನ್ನ ಸಂಸ್ಕಾರ ಕರ್ಮದಲ್ಲಿ **ಪಿತುರ್ಮಾತೃ ಮಹೀ ಪ್ರಪಿತಾಮಹ್ಯಃ** ಇತ್ಯಾದಿ ಪಾರ್ವಣತ್ರಯ ಮಾತ್ರ ಮಾಡ ಬೇಕೆಂದು ಹಿಂದೇ ಹೇಳಿದೆ. (ಆದರೆ ತನ್ನ ಮಾತೃ ಪಾರ್ವಣ, ತನ್ನ ಮಾತಾ ಮಹ ಪಾರ್ವಣಗಳನ್ನು ಉದ್ದೇಶಿಸಿ ಮಾಡಕೂಡದೆಂದು ತಿಳಿಯಬೇಕು) **ಪಿತೃ ಪಿತಾಮಹ ಈ ಇಬ್ಬರೂ ಬದುಕಿದ್ದರೆ ಪಿತಾಮಹಸ್ಯ ಮಾತೃ ಪಿತಾಮಹೀ ಪ್ರಪಿತಾಮಹ್ಯಃ** ಇತ್ಯಾದಿಯಾಗಿ ಉಚ್ಚರಿಸಬೇಕು. ಹೀಗಿಯೇ ಪ್ರಪಿತಾಮಹ (ಮುತ್ತಾತನು) ಬದುಕಿದ್ದರೆ **ಪ್ರಪಿತಾಮಹಸ್ಯ ಮಾತೃಪಿತಾಮಹೀ ಪ್ರಪಿತಾಮಹ್ಯಃ** ಇತ್ಯಾದಿ ರೂಪದಲ್ಲಿ ಉಚ್ಚರಿಸ ಬೇಕು. **ತಂದೆ, ತಾಯಿ ಇತ್ಯಾದಿಗಳು ಬದುಕಿದ್ದರೆ ಪಾರ್ವಣ ಲೋಪವೆ**. (ನಾಂದಿಲೋಪವೇ. ಕೇವಲ ಮಾತೃಕಾ ಪೂಜೆ ಮಾಡಲು ಸೂತ್ರವಿದ್ದರೆ ಮಾಡಬಹುದು, ಇಲ್ಲವಾದರೆ ಅದೂ ಇಲ್ಲ. ಒಟ್ಟಿನಲ್ಲಿ ಯೇಭ್ಯ ಏವ ಪಿತಾ **ದದ್ಯಾತ್ ತೇಭ್ಯೋ** ದದ್ಯಾತ್ ಎಂಬುದರ ವ್ಯವಸ್ಥೆಯು ಈ ರೀತಿಯಾಗಿದೆ. ಆಯಾಯವರ್ಗದ ಮಾತೃ ಪಿತೃ ಮಾತಾ ಮಹ ಎಂಬುವ ಮೊದಲಿಗನು ಬದುಕಿದ್ದರೆ ಪಾರ್ವಣ ಲೋಪವೆಂಬು ವುದೊಂದು ನಿಯಮ. ತನ್ನ ಸಂಸ್ಕಾರದಲ್ಲಿ ದ್ವಾರಲೋಪಪಕ್ಷೇ ತನ್ನ ಮಕ್ಕಳಿಗೆ ಚೂಡಾದಿ ಸಂಸ್ಕಾರಗಳನ್ನು ಮಾಡುವಾಗ '**ಯೇಭ್ಯ ಏವ ಪಿತಾದದ್ಯಾತ್ ತೇಭ್ಯೋದದ್ಯಾತ್**' ಎಂಬುದಾಗಿ ಅರಿಯಬೇಕು.

17. ಪಿತೃ (ತಂದೆ) ಮಾತ್ರ ಮೃತಪಟ್ಟು ತಾಯಿ ಮಾತಾಮಹ (ತಾಯಿಯ ತಂದೆ) ಬದುಕಿದ್ದರೆ ಕೇವಲ ಪಿತೃ ಪಾರ್ವಣದಿಂದಲೇ ನಾಂದಿ ಸಿದ್ಧಿಸುವುದು.

18. **ತಂದೆಯು ಪುತ್ರನಿಗೆ ಸಮಾವರ್ತನೆ ಮಾಡುವಾಗ ತನ್ನ ಪಿತೃಗಳನ್ನು ಉದ್ದೇಶಿಸಿ ನಾಂದಿಯನ್ನು ಮಾಡಬೇಕು.** ಜೀವತ್ ಪಿತೃಕನೂ ಕೂಡ ತಂದೆಯು ಹತ್ತಿರದಲ್ಲಿ ಇಲ್ಲದಿದ್ದರೆ ಸಹೋ ದರರೂ ಇಲ್ಲದಿದ್ದರೆ, ಪಿತೃವಿನ ಪಿತೃಗಳನ್ನು ಉದ್ದೇಶಿಸಿ ತಾನೇ ನಾಂದಿ

ಯನ್ನು ಆಚರಿಸಚಹುದು. ಉಪನಯುನವಾಗಿರುವುದರಿಂದ ಕರ್ಮಾಧಿಕಾರವು ತಾನಾಗಿಯೇ ಜೀವತ್‌ಪಿತೃಕನಿಗೆ ಬಂದಿರುವುದು. ಹಾಗೆಯೇ ವಿವಾಹದಲ್ಲೂ ಆಚರಿಸಬೇಕು.

19. **ಮಾತೃಭೇದೇ ವಿಶೇಷಃ ಅಂದರೆ ತಾಯಂದಿರು ಬೇರೆ ಬೇರೆಯಾಗಿದ್ದು ಇವರಲ್ಲಿ ಹುಟ್ಟಿದ ಪುತ್ರರಿಗೆ ಹೇಗೆ ಮಾಡಬೇಕೆಂದರೆ** "ಏಕತ್ರಲಗ್ನೇಯದಿ ಪುತ್ರಯುಗ್ಮಂ ಶುಭಾಯ ಮೌಂಜೀವ್ರತಕರ್ಮ ಕುರ್ಯಾತ್ । ಆಚಾರ್ಯ ಯುಗ್ಮಂ ಖಲುವೇದಿಯುಗ್ಮಂ ನಾಂದೀಮುಖೇ ಸ್ವಸ್ಯಪಿತುಶ್ಚ ನಿತ್ಯೇ । ಪೃಥಕ್ ಭವಾವೇಕಲಗ್ನೇ ಸೋದರಾವುಪನಾಯನೇ ಆಚಾರ್ಯೋsನ್ಯಃ ಪಿತಾನ್ಯೋsಸ್ತು ಭ್ರಾತಾವಾ ಪಿತೃ ಸೋದರಃ" ಎಂದು ಹೇಳಿದಂತೆ ಒಂದೆ ಲಗ್ನದಲ್ಲಿ ಉಪನಯಾದಿಗಳನ್ನು ಮಾಡುವಾಗ ಇಬ್ಬರಿಗೂ ಪ್ರತ್ಯೇಕವಾಗಿ ವೇದಿಕೆಮಾಡಿ, ಇಬ್ಬರು ಆಚಾರ್ಯರನ್ನು (ಪುರೋಹಿತರನ್ನು) ಮಾಡಿಕೊಂಡು ಪ್ರತ್ಯೇಕನಾಂದಿಯನ್ನು ಆಚರಿಸಬೇಕು. ಸಂಸ್ಕಾರ್ಯರು (ಸಂಸ್ಕಾರಮಾಡಿಕೊಳ್ಳುವ) ಪುತ್ರರು ಭಿನ್ನೈಸಿದ್ದದ್ದರಿಂದಲೂ (ಬೇರೆ ಬೇರೆ ತಾಯಂದಿರ ಹೊಟ್ಟೆಯಲ್ಲಿ ಹುಟ್ಟಿದ್ದರಿಂದಲೂ) ನಾಂದಿಯು ಪ್ರತ್ಯೇಕ ಆವಶ್ಯಕ. ಇದು ಯಮಳರಿಗೆ ಮಾಡುವ ಸಂಸ್ಕಾರದಂತೆ ಸಕೃನ್ನಾಂದಿಯಲ್ಲಿ, ಯಮಳರು **ಒಬ್ಬ ತಂದೆಯಿಂದ ಒಬ್ಬ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಅವಳಿ ಜವಳಿ ಮಕ್ಕಳೆಂದು ಹೇಳುವಾಗ ಮಾತೃ ಭೇದವಿಲ್ಲ.**

## ನಾಂದೀಶ್ರಾದ್ಧದಲ್ಲಿ ವಿಶೇಷಗಳು

20. ಪಿಂಡದಾನವು ವೃದ್ಧಿಶ್ರಾದ್ಧದಲ್ಲಿ (ನಾಂದೀ ಶ್ರಾದ್ಧದಲ್ಲಿ) ಕುಲಧರ್ಮಾನುಸಾರ ವೈಕಲ್ಪಿಕ—ಅಂದರೆ ಮಾಡಿದರೂ ಮಾಡಬಹುದು, ಬಿಟ್ಟರೂ ಬಿಡಬಹುದು. ಪಿಂಡಪ್ರದಾನ ಮಾಡುವುದಾದರೆ ಜೇನು, ಎಲಚಿ ಹಣ್ಣು. ದ್ರಾಕ್ಷಿ, ನೆಲ್ಲಿಕಾಯಿಗಳನ್ನು ಮಿಶ್ರಮಾಡಬೇಕು. ದಕ್ಷಿಣೆಕೊಡವಾಗ ದ್ರಾಕ್ಷಿ, ನೆಲ್ಲಿಕಾಯಿಗಳನ್ನು ಕೊಡಬೇಕು, **ಸಂಕಲ್ಪದಲ್ಲಿ ಪ್ರಥಮಾವಿಭಕ್ತಿ**

ಯಿಂದಲೇ ಉಚ್ಚರಿಸಬೇಕು. ಮಾತೃ ಪಿತಾ ಮಹೀ ಪ್ರಪಿತಾಮಹ್ಯಃ ಪಿತೃಪಿತಾಮಹ ಪ್ರಪಿತಾಮಹಾಃ ಈ ಬಗೆಯಿಂದ ಸರ್ವತ್ರ ಉಚ್ಚಾರ ಮಾಡವಾಗ ಸಂಬಂಧವನ್ನು ನಾಮವನ್ನು ಗೋತ್ರವನ್ನು ವಿಶೇಷವಾಗಿ ಹೇಳಕೂಡದು. ಕೇವಲ ಮಾತೃ ಪಿತಾಮಹೀ ಪ್ರಪಿತಾಮಹ್ಯಃ ಗೊತ್ರಾಃ ನಾಂದೀ ಮುಖಾಃ ಎಂದು ಸಾಮಾನ್ಯವಾಗಿಯೇ ಹೇಳಿಕೊಳ್ಳಬೇಕು. ಅಸ್ಮತ್ ಎಂಬುದನ್ನು ಸೇರಿಸಿಕೊಳ್ಳಬಾರದು. ಹೆಸರು ಹೇಳ ಬಾರದು ದರ್ಭೆಗೆ ಬದಲು ದೂರ್ವಾಂಕುರಗಳನ್ನು ಉಪಯೋಗಿಸ ಬೇಕು. ನಾಂದೀ ಶ್ರಾದ್ಧವನ್ನು ಸಂಕಲ್ಪವಿಧಾನದಿಂದ ಮಾಡಬಹುದು. ಸವ್ಯದಿಂದಲೇ ಎಲ್ಲವೂ ನಡೆಯಬೇಕು ಇತ್ಯಾದಿ ವಿಶೇಷಗಳನ್ನು ಗಮನಿಸಬೇಕು.

### ನಾಂದಿಯ ಅವಧಿಕಾಲ (ಪುನರ್ನಾಂದಿ)

21. ಷರಾ—ಕರ್ನಾಟಕರು ಚಾಲತಿಯಲ್ಲಿ ನಾಂದಿಯನ್ನು ಕೇವಲ ಹಿರಣ್ಯ ಆಮದ್ರವ್ಯದಿಂದಲೇ, ಸಂಕಲ್ಪದಿಂದಲೇ ಮಾಡುವುದು ರೂಢಿಗೆ ಬಂದಿದೆಯಾದ್ದರಿಂದ ಅದರಂತೆಯೇ ಮಾಡುವವರೂ ಸಹ ಕೆಲವು ಈ ನಿಯಮಗಳನ್ನು ಅನುಸರಿಸಬೇಕು. ಹಿಂದೆ ಹೇಳಿದ ವಚನದಂತೆ ಚೂಡಾ ಕರ್ಮದಲ್ಲಿ ಹಿಂದೆ ಇಟ್ಟುಕೊಂಡ ನಾಂದಿಯನ್ನು ಮೂರುದಿನ ಅವಧಿ ಮುಗಿದ ಮೇಲೂ ಪುನಃ ನಾಂದಿಯನ್ನು ಇಟ್ಟುಕೊಳ್ಳಬೇಕು. ಉಪನಯನದಲ್ಲಿ ಆರುದಿನ ಅವಧಿ ಮುಗಿದನಂತರ ಪುನಃ ನಾಂದಿ ಇಟ್ಟುಕೊಳ್ಳಬೇಕು. ವಿವಾಹ ನಾಂದಿಯನ್ನು ಹಿಂದೆ ಹತ್ತುದಿನಗಳಲ್ಲಿ ಇಟ್ಟುಕೊಂಡು ಈ ಹತ್ತು ದಿನ ಅವಧಿ ಮುಗಿದಲ್ಲಿ ಪುನಃ ನಾಂದಿಯನ್ನು ಇಟ್ಟುಕೊಳ್ಳಬೇಕು. ಪುನಃ ನಾಂದಿ ಇಟ್ಟುಕೊಳ್ಳಬೇಕೆಂಬುದು ಚೂಡಾಕರ್ಮವಾದ ನಂತರ ಉಪನಯನ, ವಿವಾಹ ಮಾಡುವುದು ಇದ್ದರೆ ಮಾತ್ರ, ಈ ನಿಯಮಗಳು ಸಲ್ಲುತ್ತವೆ, ಕೆಲವರು ವೃದ್ಧರು ಹೇಳುವಂತೆ ಒಂದೇ ಪಕ್ಷದಲ್ಲಿ ಎರಡು ಸಲ ನಾಂದಿಮಾಡಬಾರದೆಂಬ ನಿಯಮವು ಮೇಲ್ಕಂಡ ಅವಧಿ ಗಳೊಳಗೆ ಪುನಃ ಇಟ್ಟುಕೊಳ್ಳಬಾರದೆಂಬುದಕ್ಕೆ ಸಲ್ಲುವುದಷ್ಟೆ. ಅವಧಿ

**ಮುಗಿದ ನಂತರ ಪುನಃ ನಾಂದಿಯನ್ನು ಆಚರಿಸಬೇಕು. ಇಡಬಾರದೆಂಬುವುದಕ್ಕೆ** ಶಾಸ್ತ್ರವು ಕಾಣುವುದಿಲ್ಲ.

22. ಚೂಡಾಕರ್ಮದ ನಾಂದಿಯು ಒಂದೇ ದಿನದಲ್ಲಿ ಇಟ್ಟಿದ್ದು, ಆದಿನವೇ ವಿಸರ್ಜನೆಯಾಗುವುದು, ಪುನಃ ಮತ್ತೊಬ್ಬನಿಗೆ ಉಪನಯನ ಮಾಡುವುದಿದ್ದರೆ ಉಪನಯನಾಂಗವಾದ ಸ್ಥಿರನಾಂದಿಯನ್ನು ಇಟ್ಟು ತ್ರಿರಾತ್ರಾನಂತರ ವಿಸರ್ಜನೆ ಮಾಡಿದ್ದರೂ, ಅದೇಪಕ್ಷದಲ್ಲಿ ಮುಂದೆ ವಿವಾಹವು ಕನ್ಯೆಗೆ ಅಥವಾ ಪುತ್ರನಿಗೆ ಆಗುವುದಿದ್ದರೆ ಪುನಃ ನಾಂದಿ ಮಾಡಲೇಬೇಕು.

## ನಾಂದಿಯಲ್ಲಿ ಕ್ರಮ

23. ಋಗ್ವೇದಿಗಳಿಗೂ (ಬಹ್ವೃಚರಿಗೂ) ಕಾತ್ಯಾಯನರಿಗೂ "ಮಾತೃ ಪಿತಾಮಹೀ ಪ್ರಪಿತಾಮಹ್ಯಃ" ಇತ್ಯಾದಿಯಾಗಿ ಅನುಲೋಮವಾಗಿಯೇ ಉಚ್ಚರಿಸಬೇಕು. ತೈತ್ತರೀಯರು (ಯಜುರ್ವೇದಿಗಳು) ಮೊದಲಾದವರು ಪ್ರಪಿತಾಮಹ ಪಿತಾಮಹ ಪಿತರಃ, ಇತ್ಯಾದಿಯಾಗಿ ವ್ಯುತ್ಕ್ರಮದಿಂದ ಉಚ್ಚರಿಸಬೇಕು.

24. ನಾಂದಿ ಶ್ರಾದ್ಧದಲ್ಲಿ **ಅನುಕಲ್ಪಗಳು** (ಪ್ರಕೃತ ಹೆಚ್ಚು ಚಾಲ್ತಿಯಲ್ಲಿವೆ) ನಾಂದೀಶ್ರಾದ್ಧದಲ್ಲಿ ಅನ್ನವನ್ನು ದಾನಮಾಡಲು ಆಗದಿದ್ದಲ್ಲಿ ಹಿರಣ್ಯವನ್ನು, ಹಿರಣ್ಯವಿಲ್ಲದಿದ್ದಲ್ಲಿ ಯುಗ್ಮಬ್ರಾಹ್ಮಣ ಭೋಜನಕ್ಕೆ ಸಾಕಷ್ಟು ದಕ್ಷಿಣಾದ್ರವ್ಯವನ್ನು ಕೊಡಬಹುದು. "ಯಥಾಶಕ್ತಿ ಕಿಂಚಿದ್ರವ್ಯಂ ಸ್ವಾಹಾ ನಮಮ ಎಂದು ಹೇಳಬೇಕು. ಇದೇ ಕರ್ನಾಟಕ ದೇಶದಲ್ಲಿ ಹೆಚ್ಚು ಚಾಲತಿಯಲ್ಲಿರುವುದು, ನಾಂದೀಶ್ರಾದ್ಧವನ್ನು ಸಂಕಲ್ಪವಿಧಿಯಿಂದಲೂ ಮಾಡುವುದಿಲ್ಲ.

## ನಾಂದಿಯನ್ನು ನಿಷಿದ್ಧವಾರಗಳಲ್ಲಿ ಮಾಡಬಾರದು

25. **ಮಂಗಳವಾರ ಶನಿವಾರಗಳಲ್ಲಿ ನಾಂದಿಯನ್ನು ಇಡಬಾರದು.** ಬುಧವಾರ ವಿವಾಹ ಉಪನಯನಗಳನ್ನು ಇಟ್ಟುಕೊಂಡರೆ

ಸೋಮವಾರವೇ ಹಿಂದೆ ಇಟ್ಟುಕೊಳ್ಳಬೇಕು, ಭಾನುವಾರ, ಸೋಮವಾರ ವಿವಾಹ ಉಪನಯನ ಇದ್ದರೆ ಶುಕ್ರವಾರವೇ ನಾಂದಿ ಇಟ್ಟುಕೊಳ್ಳಬೇಕು. ಆದೇಶುಭಕರ. ಸಂಸ್ಕಾರ್ಯ, ಸಂಸ್ಕಾರ-ಅವುಗಳ ಕಾಲ- ಈ ಮೂರೂ ಭಿನ್ನವಾದರೆ ನಾಂದಿಯು ಬೇರ್ಪಡುವುದು. ಉದಾ. ಚೂಡಾಕರ್ಮ ಒಬ್ಬನಿಗೆ, ಉಪನಯನ ಮತ್ತೊಬ್ಬನಿಗೆ ವಿವಾಹವೂ ಮತ್ತೊಬ್ಬನಿಗೆ ಈ ಬಗೆಯಲ್ಲಿ ಸಂಸ್ಕಾರ್ಯರು ಭಿನ್ನವಾಗಿರುವುದರಿಂದಲೂ, ಸಂಸ್ಕಾರಗಳೂ ಬೇರೆ ಬೇರೆಯಾಗಿರುವುದರಿಂದಲೂ, ಭಿನ್ನ ಭಿನ್ನಕಾಲಗಳಲ್ಲಿ ನಡೆಯುವುದರಿಂದಲೂ ನಾಂದಿಯೂ ಬೇರ್ಪಡುತ್ತದೆ. **ಒಂದೇ ನಾಂದಿಯಲ್ಲಿ ಈ ಮೂರನ್ನೂ ಮುಗಿಸುವುದು ಅಶಾಸ್ತ್ರೀಯವು.**

### ಮಂಡನ ಕಾರ್ಯವಾದ ನಂತರ ಮುಂಡನ ಕಾರ್ಯವು ನಿಷಿದ್ಧ

26. **ಉಪನಯನ ವಿವಾಹಗಳು ನಡೆದ ನಂತರ ಚೂಡಾ ಕರ್ಮವನ್ನು ಮಾಡಬಾರದು.** ತ್ರಿಪುರುಷರ ಕುಲದಲ್ಲಿ ಮಂಗಳಕಾರ್ಯ ವಾದ ಮೇಲೆ ಆರುತಿಂಗಳೊಳಗೆ ಚೂಡಾಕರ್ಮ, ಉಪನಯನ ಮುಂತಾದ ಮುಂಡನಯುಕ್ತವಾದ ಕರ್ಮವನ್ನು ಮಾಡಬಾರದು. ಮುಂಡನ ಕರ್ಮ ವೆಂದರೆ, ಚೌಲ, ನಾಗ ಸಂಸ್ಕಾರಾದಿಗಳು, ಆಧಾನಾದಿಗಳು, ಅಭ್ಯುದ ಯಾರ್ಥ ಸರ್ವಪ್ರಾಯಶ್ಚಿತ್ತ ಕರ್ಮ. ಕ್ಷೌರ ಮಾಡಿಕೊಳ್ಳಬೇಕಾಗಿರುವ ತೀರ್ಥಯಾತ್ರೆ ಮೊದಲಾದುವು, ಇವುಗಳನ್ನು ಆಚರಿಸಕೂಡದೆಂದರ್ಥ.

27. "ಮಂಡನಾನ್ನತು ಮುಂಡನಂ" ಎಂಬ ವಚನದಂತೆ ಗರ್ಭಾ ದಾನಾದಿ **ಲಘುಮಂಗಳ** ನಂತರ ವಿವಾಹಾದಿ ಜ್ಯೇಷ್ಠ **ಮಂಗಳದ** ಮೇಲೂ ಮುಂಡನಯುಕ್ತ ಕರ್ಮ ಆಚರಿಸಬಾರದು. ಪುರುಷತ್ರಯಾತ್ಮಕ ಕುಲದಲ್ಲಿ ಆರುಮಾಸಗಳೊಳಗೆ ವಿವಾಹ ಉಪನಯನಗಳೆಂಬ ಮಂಗಳ ಕಾರ್ಯಗಳು ಮೂರು ನಿಷಿದ್ಧ (ಹೊರಗೆ ಮಂಟಪದಲ್ಲಿ ಮಾಡುವ ವಿವಾಹ ಉಪನಯನಗಳು ಜ್ಯೇಷ್ಠಮಂಗಳಗಳು. ಅದಕ್ಕೆ ಭಿನ್ನೈಸಿದ ಮಂಗಳಗಳು ಲಘು ಮಂಗಳಗಳೆಂದು ತಿಳಿಯತಕ್ಕದ್ದು).

28. 'ನಾಗ್ನಿಕಾರ್ಯತ್ರಯಂ ಭವೇತ್' ಎಂದು ಅಗ್ನಿ ಉತ್ಪಾದಕವಾದ ಕಾರ್ಯ ಅಗ್ನಿಕಾರ್ಯ ಅಂದರೆ ಉಪನಯನ, ವಿವಾಹವೆಂದರ್ಥ. ಒಂದೇಕುಲದಲ್ಲಿ (ತ್ರಿಪುರುಷರ ಏಕ ಕುಲದಲ್ಲಿ) ಮೂರು ಈ ಶುಭಮಂಗಳಗಳನ್ನು ಮಾಡಬಾರದು. ಆದರೆ ಗರ್ಭಾದಾನ, ನಾಮಕರಣಾದಿ ಮೂರನ್ನೂ ಆಚರಿಸಬಹುದು. ಆಯಾಯ ಕಾಲದಲ್ಲಿ ಉಕ್ತವಾದದ್ದರಿಂದ ನಿಷೇಧವಿಲ್ಲ. ವಿವಾಹಾದಿಗಳು ಆದ ಮೇಲೆ ವ್ರತ, ಉದ್ಯಾಪನ, ಗೃಹ ಪ್ರವೇಶ ಮುಂತಾದ್ದನ್ನು ಆಚರಿಸಬಾರದು. ಅದಕ್ಕೆ ಮುಂಚೆ ಆಚರಿಸಬೇಕು. ಆರು ತಿಂಗಳೊಳಗೆ ಪುತ್ರನಿಗೆ ವಿವಾಹ ಮಾಡಿದ ಮೇಲೆ ಪುತ್ರಿಗೆ ವಿವಾಹ ಮಾಡಬಾರದು. ಎರಡು ಚೌಲಗಳನ್ನು ಒಂದು ಚೌಲವನ್ನು ಈ ಬಗೆಯಾದ ಮುಂಡನವಿರುವ ಮಂಗಳಕಾರ್ಯಗಳನ್ನು ವ್ರತ ಬಂಧನಗಳ ನಂತರ ಮಾಡಬಾರದು.

29. ಸೋದರರಾದ ಪುತ್ರರಿಗೂ ಪುತ್ರಿಯರಿಗೂ ಇಬ್ಬರಿಗೆ ವಿವಾಹಗಳನ್ನು ಆರುತಿಂಗಳೊಳಗೆ ಮಾಡಬಾರದು. ತ್ರಿಪುರುಷರ ಕುಲದಲ್ಲಿ ಮಾಡಬಾರದು, **ತ್ರಿಪುರುಷಾತ್ಮಕ ಕುಲವೆಂದರೆ ಇದು ಹೀಗಿದೆ** –

ವರ, ವರನಹಿಂದಿನ ಹೆಂಡತಿ, ವರನ ಮಾತಾಪಿತೃಗಳು, ವರನ ಪಿತಾಮಹ, ಪಿತಾಮಹೀ (ಅಜ್ಜ, ಅಜ್ಜಿ) ವಿವಾಹಿತಳಾಗದ ಸೋದರತ್ತೆ ಇವು ಪೂರ್ವ ತ್ರಿಪುರುಷರ ಕುಲ, ವರ ವರನ ಸಹೋದರ (ಸಹೋದರನ ಹೆಂಡತಿ, ಪುತ್ರರು, ಅವಿವಾಹಿತ ಕನ್ಯೆಯರು, ವರನ ಅವಿವಾಹಿತ ಭಗಿನಿಯರು, ವರನ ಸೊಸೆ, ಪುತ್ರರು, ಅವಿವಾಹಿತ ಕನ್ನಿಕೆ, ಪೌತ್ರ-ಅವನ ಹೆಂಡತಿ, ಅವಿವಾಹಿತ ಪೌತ್ರ - ಎಂದು ವರತ್ರಿಪುರುಷರ ಕುಲ. ಪಿತೃವ್ಯ (ಚಿಕ್ಕಪ್ಪ-ದೊಡ್ಡಪ್ಪ) ಅವರ ಪತ್ನಿಯರು (ಚಿಕ್ಕಮ್ಮ-ದೊಡ್ಡಮ್ಮ) ಚಿಕ್ಕಪ್ಪ-ದೊಡ್ಡಪ್ಪನ ಮಕ್ಕಳು. ಈ ಮಕ್ಕಳುಗಳ ಹೆಂಡಿರು, ಅವಿವಾಹಿತ ಪಿತೃವ್ಯ ಕನ್ಯೆ ಎಂದು. ಸಂತಾನಗಳು ಭಿನ್ನವಾಗಿದ್ದರೂ **ಸಹ ಸಗೋತ್ರ ತ್ರಿಪುರುಷರ ಕುಲವೆಂದು ತಿಳಿಯಬೇಕು.** ಸಗೋತ್ರ ತ್ರಿಪುರುಷರೆಂದು ಹೇಳಿದ್ದರಿಂದ ಮಾತಾಮಹಕುಲವನ್ನು ತೆಗೆದುಕೊಳ್ಳಬಾರದು.

30. ಈ ಗಣನೆಯಂತೆ ವಿವಾಹ ನಿಶ್ಚಯವಾದ ನಂತರ ಇವರ ಪೈಕಿ (ಮೂರು ವರ್ಷ ವಯಸ್ಸಿನ ಮೇಲ್ಪಟ್ಟು) ಯಾರಾದರೂ ಮೃತಪಟ್ಟರೆ ವಿವಾಹಕ್ಕೆ ಪ್ರತಿಕೂಲ ದೋಷವೆಂದು ತಿಳಿಯಬೇಕು. ಹಾಗೆಯೆ ಮಂಡ ನಾನ್ನತು ಮುಂಡನಂ' ಎಂದು ಹಿಂದೆ ನಿಷೇಧಿಸಿದ್ದು ಈ ಬಗೆಯ ತ್ರಿಪುರು ಷರ ಕುಲದಲ್ಲೆಂದು ಅರಿಯಬೇಕು.

## (ಗರ್ಭಿಣಿಗೆ) ಪುಂಸವನಾದಿ ಸಂಸ್ಕಾರಗಳು

ಗಂಡು ಮಗುವಾಗಿ ಜನಿಸಲು ಪುಂಸವನವೆಂಬ ಸಂಸ್ಕಾರವನ್ನು ಮಾಡಿ ಕೊಳ್ಳಬೇಕು. ಈ ಸಂಸ್ಕಾರವು ಗರ್ಭಿಣಿಯಾದ ನಂತರ ಎರಡು, ನಾಲ್ಕು, ಆರು ಎಂಟು- ಈ ತಿಂಗಳಲ್ಲೂ ಅಥವಾ ಸೀಮಂತದ ಜೊತೆಯಲ್ಲೂ ಆಚರಿಸ ತಕ್ಕದ್ದಾಗಿದೆ.

ಶುಕ್ಲ ಪಂಚಮಿಯಿಂದ ಕೃಷ್ಣಪಂಚಮಿ ಪರ್ಯಂತ, ಚೌತಿ, ನವಮಿ ಚತುರ್ದಶಿ ಹುಣ್ಣಿಮೆ ಬಿಟ್ಟು ಉಳಿದ ತಿಥಿಯಲ್ಲಿ ಭಾನುವಾರ, ಮಂಗಳವಾರ ಗುರುವಾರಗಳಲ್ಲೂ, ಅಥವಾ ಮತಭೇದದಿಂದ ಸೋಮ, ಬುಧ, ಶುಕ್ರ ವಾರಗಳಲ್ಲೂ ಆಚರಿಸಬಹುದು. ಪುಂನಕ್ಷತ್ರಗಳು ಪ್ರಶಸ್ತವಾಗಿದೆ. ಪುಷ್ಯ, ಶ್ರವಣ, ಹಸ್ತ, ಪುನರ್ವಸು, ಮೃಗಶಿರ, ಅಭಿಜಿತ್ತು, ಮೂಲ, ಅನೂರಾಧ ಅಶ್ವಿನಿ ಇವುಗಳೇ **ಪುಂನಕ್ಷತ್ರಗಳು**. ಇವುಗಳಲ್ಲೂ ಪುಷ್ಯ ಮುಖ್ಯ ಅದಿಲ್ಲದೆ ಹೋದರೆ ಶ್ರವಣ, ಹಸ್ತಾದಿಗಳು ಶ್ರೇಷ್ಠವು. ಇದಕ್ಕೆ ಹೇಳಿದ ಕಾಲವೇ **ಅನವಲೋಭನ** ವೆಂಬ ಸಂಸ್ಕಾರಕ್ಕೆ ಹೇಳಿದೆ. ಈ ಎರಡನ್ನು ಪ್ರತಿಗರ್ಭ ದಲ್ಲೂ ಆಚರಿಸಬೇಕು. ಇವು ಗರ್ಭಸಂಸ್ಕಾರ,ಗರ್ಭಾಧಾನ ಸೀಮಂತ ಮಾತ್ರ ಸ್ತ್ರೀಸಂಸ್ಕಾರವಾದ್ದರಿಂದ ಪ್ರತಿಗರ್ಭಕ್ಕೂ ಮಾಡಬೇಕಾಗಿಲ್ಲ. ಮೊದಲನೆ ಗರ್ಭದಲ್ಲಿ ಮಾತ್ರ ಆಚರಿಸಬೇಕು. ಇವುಗಳು ಲುಪ್ತವಾದರೆ ಪ್ರಾಯಶ್ಚಿತ್ತ ವಾಗಬೇಕು. ಕೃಚ್ಛ್ರಾಚರಣೆ ಪಾದಕೃಚ್ಛ್ರ, ಪ್ರತಿಸಂಸ್ಕಾರಗಳಿಗೂ ಉಂಟು. ಬುದ್ಧಿಕೃತಲೋಪವಾದರೆ ದ್ವಿಗುಣ ಕೃಚ್ಛ್ರ, ತತ್ಪ್ರತ್ಯಾಮ್ನಾಯವಾಗಿ ದ್ವಿಗುಣ ದಕ್ಷಿಣದಾನಗಳು ಕರ್ತವ್ಯವಾಗಿವೆ.

## ಸೀಮಂತ ಸಂಸ್ಕಾರ

ಸೀಮಂತಕಾಲ-ಚತುರ್ಥ, ಅಷ್ಟಮ ಷಷ್ಠ, ಪಂಚಮ ಮಾಸಗಳಲ್ಲಿ ಅಥವಾ ನವಮಿಮಾಸದಲ್ಲೂ ಮಾಡಬಹುದು. ಒಂದುವೇಳೆ ಸೀಮಂತ ಸಂಸ್ಕಾರವಿಲ್ಲದೆ ಗರ್ಭಿಣಿಯು ಪುತ್ರರನ್ನು ಜನಿಸಿದರೆ, ವಿಧಿವತ್ತಾಗಿ ಜನನ ವಾದಮೇಲೂ ಈ ಸಂಸ್ಕಾರವನ್ನು ಆಚರಿಸಬೇಕು.

ಷರಾ - ಕರ್ನಾಟಕ ಜನರಲ್ಲಿ ಬಹುಮಂದಿ ಸೀಮಂತವನ್ನು ಮಾಡು ವುದನ್ನೇ ಬಿಟ್ಟಿರುವರು. ಆದರೂ ಶ್ರದ್ಧೆಯಿರುವ ಆಸ್ತಿಕರು ಜಾತ ಕರ್ಮಾದಿಗಳನ್ನು ಮಾಡುವಾಗಲಾದರೂ ಪ್ರಾಯಶ್ಚಿತ್ತಪೂರ್ವಕ ಸೀಮಂತ ಸಂಸ್ಕಾರವನ್ನು ಮಾಡಬೇಕು.

ಸ್ತ್ರೀಯದ್ಯಕೃತಸೀಮಂತಾ, ಪ್ರಸೂಯೇತ ಕದಾಚನ ।
ಗೃಹೀತ ಪುತ್ರಾ ವಿಧಿವತ್ ಸಾತಂ ಸಂಸ್ಕಾರಮರ್ಹತಿ ॥

ಪಕ್ಷ, ತಿಥಿ, ವಾರ, ನಕ್ಷತ್ರಗ್ರಗಳು ಪುಂಸವನಕ್ಕೆ ಹೇಳಿದೆ.

ದಶಮೀ ಪರ್ಯಂತ ಕೃಷ್ಣಪಕ್ಷವು ಗ್ರಾಹ್ಯ, ಷಷ್ಠಿ, ಅಷ್ಟಮಿ, ದ್ವಾದಶಿ, ರಿಕ್ತತಿಥಿಗಳು, ಹುಣ್ಣಿಮೆ, ಅಮಾವಾಸ್ಯೆ ಇವು ವರ್ಜ್ಯ ತಿಥಿಗಳು. ಆಪತ್ಕಾಲದಲ್ಲಿ ಚೌತಿ, ಚತುರ್ದಶಿ, ಪೂರ್ಣಿಮೆಗಳು ಗ್ರಾಹ್ಯವಾಗಿವೆ. ಪುಂ ನಕ್ಷತ್ರಗಳು ಲಭಿಸದಿದ್ದರೆ ರೋಹಿಣೆ. ರೇವತಿ, ಉತ್ತರೆ, ಉತ್ತರಾಷಾಢ, ಉತ್ತರಾಭಾದ್ರೆ ಆಗಬಹುದು.

**ಸೀಮಂತಾದಿಗಳಲ್ಲಿ ಕದಂಗ ಭೋಜನ ಮಾಡಿದರೆ–ಅರಾಳಿವ** ಎಂಬ **ಮಂತ್ರವನ್ನು ೧೦೮ ಸಲ ಜಪಿಸಬೇಕು.** ಅಧಾನಾಂಗ, ಬ್ರಹ್ಮೋ ದನಾಂಗ, ಭೋಜನಗಳಲ್ಲೂ ಇದೇ ಪ್ರಾಯಶ್ಚಿತ್ತವು, ಆದರೆ ಆ ದಿನಗಳಲ್ಲಿ ಅವರ ಗೃಹದಲ್ಲಿ ಭೊಜನ ಮಾಡಿದವರಿಗೆಲ್ಲಾ ಪ್ರಾಯಶ್ಚಿತ್ತವಲ್ಲ ಎಂದು ಪಾರಿಜಾತಕಾರರು ಹೇಳಿರುವರು.

## ಗರ್ಭಿಣಿಯ ಧರ್ಮಗಳು

ಗರ್ಭಿಣಿಯು ಆನೆ ಕುದುರೆ ಪರ್ವತ ಮಹಡಿಮನೆ ಈ ಬಗೆಯ ಎತ್ತರ ಪ್ರದೇಶಗಳಿಗೆ ಹತ್ತಿ ಹೋಗಬಾರದು, ಇದರಂತೆ ವ್ಯಾಯಾಮ (ಗರಡಿ) ಶೀಘ್ರಗಮನ, ಶಕಟಾರೋಹಣ (ವಾಹನಾರೋಹಣ) ಮುಳುಗಿ ಸ್ನಾನ ಮಾಡುವುದು, ಶೂನ್ಯ ಗೃಹಾವಾಸ, ಮರದ ಬುಡದಲ್ಲಿ ವಾಸ, ಕಲಹ, ಮೈಮುರಿಯುವುದು, ಇವುಗಳನ್ನು ಬಿಡಬೇಕು.

ತೀಕ್ಷ್ಣ, ಅತ್ಯುಷ್ಣ ಅತಿಖಾರ, ಅತಿಹುಳಿ ಅತಿಶೀತ, ಗುರುವಾದ ಆಹಾರಗಳನ್ನು ವರ್ಜಿಸಬೇಕು. ವ್ಯವಾಯ (ಮೈಥುನ) ರಕ್ತಮೋಕ್ಷಣ, ದಿವಾಸ್ವಾಪ, ರಾತ್ರಿ ನಿದ್ರೆಗೆಡುವುದು, ಅಮಂಗಳಕರ ಮಾತು, ಅಧಿಕವಾದ ಹಾಸ್ಯ-ಇವುಗಳನ್ನು ಬಿಡಬೇಕು. ತಲೆಬಿಚ್ಚುಹಾಕಿಕೊಂಡು ಶೋಕಿಸುವುದು ಕುಕ್ಕುಟಾಸನ-ಇವುಗಳನ್ನು ಬಿಡಬೇಕು. ಈ ನಿಯಮಗಳು ಗರ್ಭರಕ್ಷಣೆ ಗಾಗಿಯೇ ಹೇಳಲ್ಪಟ್ಟಿವೆ. ನಿತ್ಯವೂ ಶುಚಿಯಾಗಿರಬೇಕು.

ಉತ್ತಮವಾದ ಶ್ರೀರಾಮ, ಗೋಪಾಲಕೃಷ್ಣ ಮಂತ್ರ-ಇತ್ಯಾದಿ ಗಳನ್ನು ಬರೆಯುವುದು, ಉತ್ತಮವಾದ ಹೂ, ಗಂಧಗಳ ಸೇವನೆ, ಶುಚಿ ಯಾದ ಗೃಹಾವಾಸ, ದಾನಧರ್ಮಗಳು, ಅತ್ತೆಮಾವಂದಿರನ್ನು ಸಂತೋಷ ಪಡಿಸುವುದು, ಅರಿಶಿನ ಕುಂಕುಮ, ಚಂದ್ರ, ಕಾಡಿಗೆಗಳ ಅಲಂಕಾರಗಳು ಕೇಶಸಂಸ್ಕಾರಗಳು, ತಾಂಬೂಲ, ಮಾಂಗಲ್ಯಾಭರಣ-ಇವುಗಳು ಅತ್ಯವಶ್ಯ ವಾಗಿವೆ.

ನಾಲ್ಕು, ಆರು, ಎಂಟನೆ ಮಾಸಗಳಲ್ಲಿ ಗರ್ಭಿಣಿಯು ಪ್ರಯಾಣ ಯಾತ್ರೆಗಳನ್ನು ವರ್ಜಿಸಬೇಕು. ಆರನೆ ತಿಂಗಳಿನಿಂದ ಸರ್ವಥಾ ಪ್ರಯಾಣ ಮಾಡಕೂಡದು.

## ಗರ್ಭಿಣೀಪತಿಯ ಧರ್ಮ

ಗರ್ಭಿಣೀಪತಿಯು ಗರ್ಭಿಣಿಯು ಬಯಸುವ ವಸ್ತುವನ್ನು ಯಥೋ ಚಿತವಾಗಿ ತಂದುಕೊಡಬೇಕು, ಇದರಿಂದ ದೀರ್ಘಾಯುವಾದ ಪುತ್ರನು

ಜನಿಸುವನು. ಅನ್ಯಥಾ ಗರ್ಭಶಿಶುವಿಗೆ ದೋಷವುಂಟಾಗುವುದು, ಸಮುದ್ರ ಸ್ನಾನ, ವೃಕ್ಷಚ್ಛೇದನ, ವಪನ, ಪ್ರೇತವಾಹನ (ಶವ ಹೊರುವುದು) ವಿದೇಶಯಾತ್ರೆ, ಇವುಗಳನ್ನು ಬಿಡಬೇಕು. ಏಳನೆ ತಿಂಗಳಿಂದ ಆಚೆಗೆ ವ್ಯಸನ, ಮೈಥುನ ತೀರ್ಥಯಾತ್ರೆ ಶ್ರಾದ್ಧಭೋಜನ, ನೌಕಾರೋಹಣ, ಚೌಲ ವಿವಾಹ ಮುಂಡನ ಪಿಂಡದಾನ, ಪ್ರೇತಕರ್ಮ, ಇವುಗಳನ್ನು ಜೀವತ್ ಪಿತೃಕನೂ ಗರ್ಭಿಣೀಪತಿಯೂ ವರ್ಜಿಸಬೇಕು. ಇವು ಸಾಮಾನ್ಯ ನಿಷೇಧಗಳು. ಆದರೆ ವಿಶೇಷಅಪವಾದ ಶಾಸ್ತ್ರ ನೈಮಿತ್ತಿಕವಾದ ಕ್ಷೌರ, ತಂದೆತಾಯಿಗಳು. ಹೋದರೆ ಅವರ ಉತ್ತರ ಕ್ರಿಯೆಗಳು ಗರ್ಭಿಣೀಪತಿಯಾದರೂ ಅವಶ್ಯ ಆಚರಿಸಬೇಕು. ಅನ್ವಷ್ಟಕ್ಯಾ ಅಷ್ಟಕಾ ಶ್ರಾದ್ಧಗಳಲ್ಲೂ ಪಿಂಡದಾನ ಮಾಡ ಬಹುದು. ತಂದೆ ತಾಯಿಗಳ ಪ್ರತಿಸಾಂವತ್ಸರಿಕ ಶ್ರಾದ್ಧಗಳಲ್ಲಿ ಪಿಂಡದಾನ ಮಾಡಬಹುದು.

## ಗರ್ಭಸ್ರಾವವಾದರೆ ಅದಕ್ಕೆ ಪರಿಹಾರ

ಕಾಂಚನ ಯಜ್ಞೋಪವೀತ ದಾನ (ಧನಿಕರು ಮಾತ್ರ).

ಇದನ್ನು ಸ್ತ್ರೀಯೇ ದಾನಮಾಡಬೇಕು. ಸುವರ್ಣ ಯಜ್ಞೋಪವೀತ ವನ್ನು ಮೂರು ಎಳೆಯಾಗಿ ಮಾಡಿಸಿ ಗಂಟುಹಾಕುವ ಸ್ಥಳದಲ್ಲಿ ಒಂದು ಮುತ್ತನ್ನು ಪೋಣಿಸಿ, ಮಣಿಯಿಂದ ಮಾಡಿದ ಬೆಳ್ಳಿಯ ಉತ್ತರೀಯವನ್ನು ಮಾಡಿಸಿ ಪಂಚಗವ್ಯದಿಂದ ಶುದ್ಧಿಮಾಡಿ, ಗಾಯಿತ್ರಿಯಿಂದ ಪ್ರೋಕ್ಷಿಸಿ ತೊಳೆದು ತಾಮ್ರದ ಪಾತ್ರೆಯಲ್ಲಿ ತುಂಬ ಮೊಸರನ್ನು ಹಾಕಿ, ಅಷ್ಟೇ ಅಳತೆ ಯಲ್ಲಿ ತುಪ್ಪವನ್ನು ಹಾಕಿ ಅದರಲ್ಲಿ ಆ ಉಪವೀತ, ಉತ್ತರೀಯ ಎರಡನ್ನು ಇರಿಸಿ, ಪತಿಯಾಗಲಿ, ಬ್ರಾಹ್ಮಣನಾಗಲಿ ಗಾಯತ್ರೀ ಮಂತ್ರದಿಂದ ಪೂಜಿಸಿ, ಬ್ರಾಹ್ಮಣನ ಮೂಲಕ ಆಜ್ಯ ಮಧುಮಿಶ್ರವಾದ ತಿಲದಿಂದ ಅಷ್ಟೋತ್ತರಶತ ಗಾಯತ್ರಿಯಿಂದಲೂ, ವ್ಯಾಹೃತಿಯಿಂದಲೂ ಹೋಮ ಮಾಡಬೇಕು. ಹೋಮ ಮಾಡಿದ ನಂತರ ಆ ಬ್ರಾಹ್ಮಣನನ್ನು ವಸ್ತ್ರಾದಿಗಳಿಂದ ಪೂಜಿಸಿ, ಪೂರ್ವದಿಕ್ಕಿಗೆ ಮುಖ ಮಾಡಿಕೊಂಡ ಆತನಿಗೆ ಉತ್ತರಕ್ಕೆ ಮುಖಮಾಡಿ ಕುಳಿತು ಪತಿ ಅಥವಾ ಪತ್ನಿಯೇ ದಾನ ಮಾಡಬೇಕು.

ಈ ದಾನ ಮಾಡಲು ಮುಂಚೆ ಜನ್ಮಾಂತರದಲ್ಲಾಗಲಿ, ಈ ಜನ್ಮ ದಲ್ಲಾಗಲಿ ಬಾಲಹತ್ಯ ಮಾಡಿದ ಪಾಪವನ್ನು ಪರಿಹರಿಸಲು ಪ್ರಾಯಶ್ಚಿತ್ತ ಮಾಡಿಕೊಂಡೇ ಮಾಡಬೇಕು.

ಮತ್ತು ಚಿನ್ನದಾನ, ಗೋದಾನ, ಹರಿವಂಶ ಶ್ರವಣ ಮುಂತಾದು ವನ್ನು ಹೇಳಿ, ಅಭಿಲಾಷ್ಟಕ ಪಠನ ಮಾಡುವುದು, ತುಪ್ಪ ತುಂಬಿದ ತಾಮ್ರ ಪಾತ್ರದಾನ ಇತ್ಯಾದಿಗಳನ್ನು ಹೇಳಿದ್ದಾರೆ.

## ಸುಖಪ್ರಸವಕರ

ಪ್ರಸವವು ಕಷ್ಟವಾಗಿದ್ದರೆ " ಪ್ರಮಂದಿನೇ " ಎಂಬ ಮಂತ್ರವನ್ನೂ, " ವಿಜಿಹೀಷ್ವಾ " ಎಂಬ ಸೂಕ್ತವನ್ನು (ಋಗ್ವೇದಿಗಳು) ಆಚಾರವಂತರಾಗಿದ್ದ ವರು ಜಪಿಸಿ ಅಭಿಮಂತ್ರಿಸಿದ ನೀರನ್ನು ಗರ್ಭಿಣಿಗೆ ಕುಡಿಸಬೇಕು. ಅಥವಾ

ಹಿಮವತ್ಯುತ್ತರೇ ಪಾರ್ಶ್ವೆ ಸುರಥಾನಾಮ ಯಕ್ಷಿಣೀ ।
ತಸ್ಯಾಃ ಸ್ಮರಣಮಾತ್ರೇಣ ವಿಶಲ್ಯಾ ಗರ್ಭಿಣೀ ಭವೇತ್ ॥

**ಓಂ ಕ್ಷೀಂ ಓಂ ಸ್ವಾಹಾ ಎಂಬ ಮಂತ್ರದಿಂದ ತಿಲತೈಲವನ್ನು ೧೦೮ ಸಲ, ಅಥವಾ ೧೦೦೮ ಸಲ ಅಭಿಮಂತ್ರಿಸಿ** ಸ್ವಲ್ಪ ಕುಡಿಸ ಬೇಕು. ಅಲ್ಲದೆ ಅದೇ ತೈಲವನ್ನು ಗರ್ಭದ ಮೇಲೆ ಲೇಪಿಸಬೇಕು. ಚೆನ್ನಾಗಿ ಲೇಪಿಸಿದರೆ ಶೀಘ್ರದಲ್ಲಿ ಸುಖಪ್ರಸವವಾಗುವುದು.

ಅಥವಾ ಅಸ್ಥಿಮಾತ್ರ ಉಳಿದ ಗೋವಿನ ತಲೆಯನ್ನು ಸೂತಿಕಾಗೃಹದ ಮೇಲಿಟ್ಟರೂ ಸುಖಪ್ರಸವವಾಗುವುದು.

ಹರಾ ಇದೇ ಬಗೆಯಲ್ಲಿ ಅನೇಕ ಉಪಾಯಗಳನ್ನು ಹೇಳಿದ್ದಾರೆ. ಶ್ರದ್ಧೆಯಿದ್ದು ಮಾಡಿದಲ್ಲಿ ಫಲವಾಗುವುದು.

## ಜಾತಕರ್ಮ

1 ತಂದೆಯು ಮೂಲಾನಕ್ಷತ್ರ, ಜ್ಯೇಷ್ಠಾ, ವ್ಯತೀಪಾತ ಇತ್ಯಾದಿ ಗಳಿರುವ ಕಾಲವಲ್ಲದೆ ಬೇರೆ ಕಾಲದಲ್ಲಿ ಹುಟ್ಟಿದ ಮಗನ ಮುಖವನ್ನು

ನೋಡುವ ಮೊದಲು ಕುಲದೇವತಾ, ಗುರು, ವೃದ್ಧರು ಅವರಿಗೆ ನಮಸ್ಕಾರ ಮಾಡಿ ನಂತರ ಮಗುವಿನ ಮುಖವನ್ನು ನೋಡಿ, ನದಿ-ಕೊಳ-ಕೆರೆಗಳಲ್ಲಿ ಉತ್ತರಮುಖನಾಗಿ ನಿಂತು ಸ್ನಾನ ಮಾಡಬೇಕು. ನದಿ ಮುಂತಾದುವು ಗಳಲ್ಲಿ ಸ್ನಾನ ಮಾಡಲು ಅವಕಾಶವಿಲ್ಲದಿದ್ದರೆ ಮನೆಯಲ್ಲಿ ಚಿನ್ನವನ್ನು ನೀರಿನಲ್ಲಿ ಹಾಕಿ ಆ ನೀರಿನಲ್ಲಿ (ತಣ್ಣೀರಿನಲ್ಲಿ) ಸ್ನಾನ ಮಾಡಬೇಕು. ಅಶಕ್ತನಾದವನು ಬೆಂಕಿಯ ಮುಂದೆ ನಿಂತು ಸ್ನಾನಮಾಡಬೇಕು.

2 ಮೂಲ, ಜ್ಯೇಷ್ಠ, ಆಶ್ಲೇಷಾದಿ ನಕ್ಷತ್ರಗಳಲ್ಲಿ ಹುಟ್ಟಿದ ಮಗುವಿನ ಮುಖವನ್ನು ನೋಡದೆ ಸ್ನಾನ ಮಾಡಬೇಕು.

3 ದೇಶಾಂತರಕ್ಕೆ ತಂದೆಯು ಹೋಗಿದ್ದರೆ ಪುತ್ರನು ಹುಟ್ಟಿದ ಸಮಾಚಾರ ತಿಳಿದ ಕೂಡಲೆ ಸ್ನಾನ ಮಾಡಬೇಕು. ಸ್ನಾನ ಮಾಡುವ ಮುಂಚೆ ತಂದೆಯು ಅಸ್ಪೃಶ್ಯನು. ಅವನನ್ನು ಮುಟ್ಟಬಾರದು. ಹೀಗೆಯೇ ಕನ್ಯೆ ಹುಟ್ಟಿದರೂ ಸ್ನಾನ, ಅಸ್ಪೃಶ್ಯತೆಯು ಉಂಟೇ ಉಂಟು.

4 ಬೇರೆ ಜ್ಞಾತಿಗಳ ಆಶೌಚವಿದ್ದಾಗಲೂ ನಡುವೆ ಜನನವಾದರೂ ತಾತ್ಕಾಲಿಕವಾಗಿ ತಂದೆಯು ಸ್ನಾನ, ದಾನಾದಿಗಳನ್ನು ಮಾಡಬಹುದು. ಆ ಕಾಲಕ್ಕೆ ಅವನಿಗೆ ಶುದ್ಧಿಯಿದೆ.

5 ಕೆಲವರು ಮೃತಾಶೌಚದ ನಡುವೆ ಪುತ್ರ ಜನನವಾದರೆ ಆಶೌಚ ಕಳೆದನಂತರವೇ ಜಾತಕರ್ಮವನ್ನು ಮಾಡಬೇಕೆಂದು ಹೇಳುವರು.

6 ಹೊಕ್ಕಳಬಳ್ಳಿಯನ್ನು ಕತ್ತರಿಸುವ ಮುಂಚೆ ಸಂಪೂರ್ಣ ಸಂಧ್ಯಾವಂದನಾದಿ ಕರ್ಮಗಳನ್ನು ಮಾಡಲು ಆಶೌಚವಿರುವುದಿಲ್ಲ.

7 ಜಾತಾಶೌಚವಿರುವಾಗ ಹುಟ್ಟಿದ ದಿನ, ಐದು, ಆರು, ಹತ್ತು ಈ ದಿನಗಳಲ್ಲಿ ದಾನ, ಪ್ರತಿಗ್ರಹ ಮಾಡುವಲ್ಲಿ ದೋಷವಿಲ್ಲ. ಆದರೆ ಬೇಯಿಸಿದ ಅನ್ನ ಮುಂತಾದವುಗಳನ್ನು ಆಶೌಚಿಯಿಂದ ಸ್ವೀಕರಿಸಬಾರದು,

8 ಜ್ಯೋತಿಷ್ಟೋಮ ಮೊದಲಾದ ಕರ್ಮದೀಕ್ಷೆಯನ್ನು ವಹಿಸಿದವನು ಅವಭೃತ ಸ್ನಾನವಾದ ನಂತರವೇ ದೀಕ್ಷೆಯನ್ನು ವಿಸರ್ಜಿಸಿ ಜಾ

ಕರ್ಮ ಮಾಡಬೇಕು. ಅದಕ್ಕೆ ಮುಂಚೆ ಮಾಡಬಾರದು. ಇನ್ನೊಬ್ಬ ರಿಂದಲೂ ಮಾಡಿಸಬಾರದು.

9 ಜ್ಯೇಷ್ಠನು ಕನಿಷ್ಠನಿಂದಲೂ ಮಾಡಿಸಬಾರದು. ಪುಂಸವನಾದಿ ಗಳನ್ನು ಮಾಡಿಸಬಾರದು, ಆದರೆ ಜಾತಕರ್ಮವನ್ನು ಮಾಡಿಸಬಹುದು. ಕಾಲವು ಮೀರಿ ಹೋಗಿದ್ದರೆ ತಂದೆಯೇ ತಾನು ಆಚರಿಸಬೇಕು. ದೊಡ್ಡ ರೋಗದಿಂದ ಪೀಡಿತನಾದವನು ಜಾತಕರ್ಮವನ್ನು ತಾನು ಮಾಡಬಾರದು.

10 ಜಾತಕರ್ಮದ ಸಂಸ್ಕಾರಕ್ಕೆ ಅಂಗವಾದ ನಾಂದೀ ಶ್ರಾದ್ಧವನ್ನು ಕನ್ಯೆ-ಪುತ್ರ ಇವರ ಜನ್ಮನಿಮಿತ್ತವಾಗಿ ರಾತ್ರಿಯಾದರೂ ಮಾಡಬೇಕು.

11 ಷರಾ—ಈಗಿನ ಕಾಲದಲ್ಲಿ ಹುಟ್ಟಿದ ಕೂಡಲೇ ಯಾರೂ ಜಾತ ಕರ್ಮವನ್ನು ಮಾಡುವುದಿಲ್ಲ. ಆದ್ದರಿಂದ ಹತ್ತು ದಿನ ಕಳೆದ ನಂತರ ನಾಮ ಕರಣದೊಂದಿಗೆ ಮಾಡುವುದು ಚಾಲತಿಯಲ್ಲಿದೆ. ಆಗಲೇ ನಾಂದಿಯನ್ನು ಹಿರಣ್ಯದಿಂದ ಮಾಡಬೇಕು. ಅನ್ನಾದಿಗಳಿಂದ ನಾಂದೀಶ್ರಾದ್ಧವನ್ನು ಮಾಡಬಾರದು.

12 **ಜಾತಕರ್ಮದ ಪ್ರಯೋಗಗಳನ್ನು ಪ್ರಯೋಗಗ್ರಂಥ ಗಳಿಂದ ತಿಳಿಯಬಹುದು.** ಜಾತಕರ್ಮದಲ್ಲಿ ಕೊಡಬೇಕಾದ ದಾನಗಳು - ಸುವರ್ಣ, ಭೂಮಿ, ಗೋವು, ಅಶ್ವ, ರಥ, ಛತ್ರಿ, ಆಡು, ಹಾಸಿಗೆ, ಮಾಲಿಕೆ, ಆಸನ, ಗೃಹ ಇವು ಶಕ್ತರಾದ ರಾಜಮಹಾರಾಜರುಗಳು ಮಾಡ ಬೇಕಾದ ದಾನಗಳು. ಹಿರಣ್ಯ, ತಿಲಪಾತ್ರ ಇವುಗಳನ್ನು ದಾನಮಾಡಬೇಕು.

13 ಜಾತಕರ್ಮದಲ್ಲಿ ಜಾತಾಶೌಚವಿರುವಾಗ ಅವನ ಅನ್ನವನ್ನು ಊಟಮಾಡಿದರೆ ಪ್ರಾಯಶ್ಚಿತ್ತವಿದೆ. ಅದರಿಂದ ಮಾಡಬಾರದು.

14 ಪ್ರತಿಕೂಲವಾದ ಗ್ರಹಗಳ ಅನುಕೂಲ್ಯಕ್ಕಾಗಿ ಗ್ರಹಮಂತ್ರ ಜಪ, ಶಾಂತಿಸೂಕ್ತ ಜಪ, ಮೊದಲಾದ ಕರ್ಮಗಳನ್ನು ಬ್ರಾಹ್ಮಣರಿಂದ ಮಾಡಿಸಬೇಕು.

15 ಜಾತಕರ್ಮಾದಿ ಅನ್ನಪ್ರಾಶನಾಂತ ಸಂಸ್ಕಾರಗಳಲ್ಲಿ ಆಶ್ವಲಾ ಯನರಿಗೆ ಹೋಮ, ಕೃತಾಕೃತ ಅಂದರೆ ಹೋಮವನ್ನು ಮಾಡಲೂ

ಬಹುದು, ಬಿಡಲೂಬಹುದು. ಮಾಡುವುದಾದರೆ, ಪ್ರಯೋಗಪಾರಿಜಾತ ದಲ್ಲಿ ಹೇಳಿರುವಂತೆ ಆಚರಿಸಬೇಕು.

16 ಆಪಸ್ತಂಬರಿಗೆ ಮತ್ತು ಇತರರಿಗೆ ತಮ್ಮ ತಮ್ಮ ಗೃಹ್ಯಸೂತ್ರ ದಲ್ಲಿ ಹೇಳಿದಂತೆ ಆಚರಿಸುವ ವಿಧಾನವು.

17 ಕುಮಾರಿಗೂ ಜಾತಕರ್ಮ ಮೊದಲ್ಗೊಂಡು ಚೌಲಾಂತ ಸಂಸ್ಕಾರಗಳನ್ನು ಮಂತ್ರವಿಲ್ಲದೆ ಆಚರಿಸಬೇಕು. ಆದರೆ ವಿವಾಹವು ಮಾತ್ರ ಸಮಂತ್ರಕವಾಗಿಯೇ ನಡೆಯಬೇಕು.

18 ಕನ್ಯೆಗೆ ಜಾತಕರ್ಮಾದಿಗಳು ಲುಪ್ತವಾಗಿದ್ದರೆ ವಿವಾಹಕಾಲದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿ ನಂತರ ವಿವಾಹ ಮಾಡಬೇಕು.

19 ಉಕ್ತಕಾಲವನ್ನು ಬಿಟ್ಟರೆ ಗುರು ಶುಕ್ರಸ್ತಾದಿಗಳು ಇಲ್ಲದಿರುವ ಶುಭನಕ್ಷತ್ರಾದಿ ಯೋಗವಿರುವ ಕಾಲದಲ್ಲಿ ಆಚರಿಸಬೇಕು.

## ನಾಮಕರಣ ಕಾಲ

1 ಜನ್ಮದಿನವೇ ಜಾತಕರ್ಮವಾದ ಕೂಡಲೇ ಅದೇ ಕಾಲದಲ್ಲಿ ನಾಮಕರಣ ಮಾಡಬೇಕು. (ಇದು ಈಗ ರೂಢಿಯಲ್ಲಿಲ್ಲ).

2 ಹನ್ನೊಂದನೇ ದಿನ ಅಥವಾ ಹನ್ನೆರಡನೆಯ ದಿನ ನಾಮಕರಣ ಕಾಲ. ಇದು ಬ್ರಾಹ್ಮಣರಿಗೆ ಮುಖ್ಯ ಕಾಲ. ಕ್ಷತ್ರಿಯರಿಗೆ ೧೩, ೧೬ನೇ ದಿನಗಳಲ್ಲಿ. ವೈಶ್ಯರಿಗೆ ೧೬, ೨೦ನೇ ದಿನಗಳಲ್ಲಿ. ಶೂದ್ರರಿಗೆ ೨೨ನೇ ದಿನ, ತಿಂಗಳ ಕೊನೆಗೆ ನಾಮಕರಣ.

3 ಗೌಣಕಾಲ ಮಾಸದ ಕೊನೆ, ನೂರನೇ ದಿನ, ವರ್ಷದ ಕೊನೆ ಯಲ್ಲಿ ಬ್ರಾಹ್ಮಣಾದಿಗಳಿಗೆ ಹೇಳಿದೆ.

4 ಮುಖ್ಯಕಾಲವನ್ನು ಮೀರಿದರೆ ಶುಭ ನಕ್ಷತ್ರಾದಿಗಳನ್ನು ನೋಡಿ ಮಾಡಬೇಕು. ಆ ತಿಥಿಗಳು ಬಿದಿಗೆ, ತದಿಗೆ, ಪಂಚಮಿ, ದಶಮಿ

ತ್ರಯೋಶಿ ಇದವುಗಳು ಪ್ರಶಸ್ತ ತಿಥಿಗಳು. ಇತರ ತಿಥಿಗಳು ನಿಷಿದ್ಧವಾಗಿವೆ. ಸೋಮ, ಬುಧ, ಶುಕ್ರವಾರಗಳೂ, ಅಶ್ವಿನಿ, ಉತ್ತರೆ, ಉತ್ತರಾಷಾಢ, ಉತ್ತರಾಭಾದ್ರೆ, ರೋಹಿಣಿ, ಮೃಗಶಿರ, ಪುನರ್ವಸು, ಪುಷ್ಯ, ಹಸ್ತ, ಸ್ವಾತಿ, ಅನೂರಾಧಾ, ಶ್ರವಣ, ಧನಿಷ್ಠೆ, ಶತತಾರೆ, ರೇವತಿ ಇವು ಪ್ರಶಸ್ತ ನಕ್ಷತ್ರಗಳು. ವೃಸಭ, ಸಿಂಹ, ವೃಶ್ಚಿಕ, ಈ ಲಗ್ನಗಳು ಪ್ರಶಸ್ತವಾದವು.

5 ನಾಲ್ಕು ಬಗೆ ನಾಮಕರಣಗಳು—ದೇವತಾನಾಮ, ಮಾಸ ನಾಮ, ನಕ್ಷತ್ರನಾಮ, ವ್ಯಾವಹಾರಿಕನಾಮ (ಅಭಿವಾದನ ನಾಮ.)

ದೇವತಾನಾಮ ತಮ್ಮ ತಮ್ಮ ಇಷ್ಟದೇವತಾ, ಕುಲದೇದತಾ ಹೆಸರು.

6 ಮಾಸನಾಮ—ಗಂಡುಮಕ್ಕಳಿಗೆ

| | | | |
|---|---|---|---|
| ಚೈತ್ರದಲ್ಲಿ ಹುಟ್ಟಿದರೆ | ಕೃಷ್ಣ | ಆಶ್ವಯುಜ | —ಉಪೇಂದ್ರ |
| ವೈಶಾಖ | — ಅನಂತ | ಕಾರ್ತಿಕ | —ಯಜ್ಞಪುರುಷ |
| ಜ್ಯೇಷ್ಠ | — ಅಚ್ಯುತ | ಮಾರ್ಗಶಿರ | – ವಾಸುದೇವ |
| ಆಷಾಢ | — ಚಕ್ರಿ | ಪುಷ್ಯ | ಹರಿ |
| ಶ್ರಾವಣ | —ವೈಕುಂಠ | ಮಾಘ | —ಗೋವಿಂದ |
| ಭಾದ್ರಪದ | —ಜನಾರ್ದನ | ಫಾಲ್ಗುಣ | —ಪುಂಡರೀಕಾಕ್ಷ |

ಹೆಣ್ಣುಮಕ್ಕಳಿಗೆ

| | | | |
|---|---|---|---|
| ಚೈತ್ರ | —ಭೂದೇವಿ | ಆಶ್ವಯುಜ | —ಚಂದ್ರಾವತೀ |
| ವೈಶಾಖ | — ಕಲ್ಯಾಣೀ | ಕಾರ್ತಿಕ | —ಲಕ್ಷ್ಮೀ |
| ಜ್ಯೇಷ್ಠ | —ಸತ್ಯಭಾಮಾ | ಮಾರ್ಗಶಿರ | —ವಾಗ್‌ದೇವೀ |
| ಆಷಾಢ | — ಪುಣ್ಯವತೀ | ಪುಷ್ಯ | — ಪದ್ಮಾವತೀ |
| ಶ್ರಾವಣ | —ರೂಪಿಣೀ | ಮಾಘ | —ಶ್ರೀದೇವೀ |
| ಭಾದ್ರಪದ | — ಇಂದುಮತೀ | ಫಾಲ್ಗುಣ | —ಸಾವಿತ್ರೀ |

7 ಶಿಶುವು ಯಾವ ನಕ್ಷತ್ರದಲ್ಲಿ ಹುಟ್ಟಿರುವುದೋ, ಆ ನಕ್ಷತ್ರದ ಹೆಸರನ್ನು ಇಡಬೇಕು. (ಅಶ್ವಿನ್ಯಾದಿ ನಕ್ಷತ್ರ ನಾಮಗಳು). ಅಭಿವಾದನ ನಾಮವನ್ನು ಮಾತ್ರ ಮುಂಜಿಪರ್ಯಂತರ ತಾಯಿ ತಂದೆಗಳು ಗುಪ್ತವಾಗಿ ಇರಿಸಿಕೊಂಡು ಅಭಿವಾದನೆ ಮಾಡುವಾಗ ಕುಮಾರನಿಗೆ ಹೇಳಿಕೊಡಬೇಕು.

ವ್ಯವಹಾರನಾಮ ಗಂಡುಮಕ್ಕಳಿಗೆ ೨, ೪, ಇತ್ಯಾದಿಯಾಗಿ ಸಮಾಕ್ಷರಗಳಿರುವ ನಾಮ, ರಾಮ, ರಾಮಚಂದ್ರ ಇತ್ಯಾದಿ. ಹೆಣ್ಣುಮಕ್ಕಳಿಗೆ ಬೆಸಸಂಖ್ಯೆಯ ಅಕ್ಷರಗಳಿರಬೇಕು. ಶಾರದಾ, ಲಲಿತಾ, ಶ್ರೀಮಹಾಲಕ್ಷ್ಮೀ ಇತ್ಯಾದಿ. ತಂದೆಯು ತನ್ನ ಪಿತೃ, ಪಿತಾಮಹ, ಪ್ರಪಿತಾಮಹರ ಹೆಸರನ್ನು ಇಡಬಹುದು.

ವ್ಯವಹಾರ ನಾಮವನ್ನು ಶರ್ಮಪದಾಂತವಾಗಿ ಬ್ರಾಹ್ಮಣರಿಗೂ, ವರ್ಮಪದಾಂತವಾಗಿ ಕ್ಷತ್ರಿಯರಿಗೂ, ಗುಪ್ತ ಅಥವಾ ದತ್ತಪದಾಂತವಾಗಿ ವೈಶ್ಯರಿಗೂ, ದಾಸಪದಾಂತವಾಗಿ ಶೂದ್ರರಿಗೂ ಇಡಬೇಕು.

ಷರಾ ಈ ವ್ಯವಹಾರಿಕ ನಾಮದ ವಿಷಯದಲ್ಲಿ ಅನೇಕ ನಿಯಮಗಳನ್ನು ಶಾಸ್ತ್ರಕಾರರು ಹೇಳಿದ್ದಾರೆ. ಎಲ್ಲವನ್ನೂ ನಾವು ತಿಳಿಸಿಲ್ಲ. ಬೇಕಾದವರು ಧರ್ಮಶಾಸ್ತ್ರದಿಂದ (ಬಲ್ಲವರಿಂದ) ತಿಳಿಯಬಹುದು. ಈ ವ್ಯವಹಾರಿಕವಾದ ನಾಮವನ್ನು ದೇವಾಲಯ, ಪ್ರಾಸಾದಾದಿಗಳಿಗೂ ಇಡಬಹುದು. ಶಾಸ್ತ್ರವಚನವಿದೆ.

8 ಪ್ರಯೋಗಾನುಷ್ಠಾನ ಮಾಡುವಾಗ ಈ ವಿಶೇಷವನ್ನು ಗಮನಿಸಬೇಕು. ಗರ್ಭಾಧಾನಾದಿ ಸಂಸ್ಕಾರಗಳು ಬಿಟ್ಟುಹೋಗಿದ್ದರೆ ಕೃಚ್ಛ್ರಾಚರಣೆ ಅದರ ಪ್ರತ್ಯಾಮ್ನಾಯ ದಕ್ಷಿಣಾ ದಾನಮಾಡಿ ಅನಂತರ ಜಾತಕರ್ಮ, ನಾಮಕರಣಗಳನ್ನು ಆಜ್ಯಹೋಮಪೂರ್ವಕ ಆಚರಿಸಬೇಕು. ಜಾತಕರ್ಮ ಕಾಲವು ಮಿಂಚಿಹೋಗಿದ್ದಾಗಲೂ ಆಜ್ಯಹೋಮ ಮಾಡಿಯೇ ಜಾತಕರ್ಮ ನಾಮಕರಣಗಳನ್ನು ಆಚರಿಸಬೇಕು.

9 ಸ್ತ್ರೀಶಿಶುವಿಗೆ ನಾಮಕರಣ ಮಾಡುವಾಗ ಆಶ್ವಲಾಯನರಿಗೆ ನಕ್ಷತ್ರನಾಮವನ್ನು ಇಡಕೂಡದು. ಪೂಜಾದಿಗಳನ್ನು ವೈದಿಕಮಂತ್ರವಿಲ್ಲದೆ ಬೇರೆ ಮಂತ್ರಗಳಿಂದ ಮಾಡಬೇಕು.

10 ತಂದೆಯು ಸಮೀಪದಲ್ಲಿ ಇಲ್ಲದಿದ್ದರೆ ಪಿತಾಮಹಾದಿಗಳೂ ಸಹ ನಾಮಕರಣ ಮಾಡಬಹುದು.

## ದತ್ತುಸ್ವೀಕಾರ ಮತ್ತು ಅದರ ಕ್ರಮ

1 ಬ್ರಾಹ್ಮಣರಿಗೆ ತನ್ನ ಸೋದರನ ಪುತ್ರನನ್ನು ದತ್ತುಸ್ವೀಕಾರ ಮಾಡುವುದು ಮುಖ್ಯಪಕ್ಷ. ಅವನಿಲ್ಲವಾದರೆ ಸಗೋತ್ರ ಜ್ಞಾತಿಯಾದವನ ಪುತ್ರ ಅಥವಾ ಜ್ಞಾತಿಯ ಸಹೋದರನ ಪುತ್ರನೂ ಆಗಬಹುದೆಂದು ಕೆಲವರು. ಇದಕ್ಕೆ ವಚನಾಧಾರವಿಲ್ಲ. ಸಗೋತ್ರ ಜ್ಞಾತಿಗಳಿಲ್ಲವಾದಗೆ ಭಿನ್ನ ಗೋತ್ರದ ಸಪಿಂಡರಲ್ಲಿ ಸೋದರಮಾವನ ಕುಲದವನೋ, ಸೋದರತ್ತೆ ಮೊದಲಾದವರ ಕುಲದಲ್ಲಿ ಹುಟ್ಟಿದ ಮಗನಾಗಲಿ, ಅವನೂ ಇಲ್ಲವಾದರೆ ಜ್ಞಾತಿಯಲ್ಲದ ಸಗೋತ್ರದವನು, ಅವನೂ ಇಲ್ಲವಾದರೆ ಜ್ಞಾತಿಯಲ್ಲದ ಭಿನ್ನ ಗೋತ್ರದವನೂ ದತ್ತು ಸ್ವೀಕಾರಕ್ಕೆ ಅರ್ಹನು.

2 ಭಿನ್ನಗೋತ್ರ ಸಪಿಂಡರಲ್ಲೂ, ಅಕ್ಕತಂಗಿಯರ ಮಕ್ಕಳನ್ನೂ, ದೌಹಿತ್ರರನ್ನೂ ಸ್ವೀಕರಿಸಬಾರದು. ಈ ರೀತಿಯಾಗಿ ವಿರುದ್ಧ ಸಂಬಂಧ ವುಂಟಾಗುವುದರಿಂದ ಪುತ್ರಬುದ್ಧಿಯು ಉಂಟಾಗಲಾರದ ಸೋದರಮಾವನನ್ನು ದತ್ತುಸ್ವೀಕಾರ ಮಾಡಬಾರದು.

3 ಇದೇ ಕಾರಣದಿಂದ ಸಗೋತ್ರ ಸಪಿಂಡರಲ್ಲಿ ಸಹೋದರನನ್ನೂ, ಚಿಕ್ಕಪ್ಪ ದೊಡ್ಡಪ್ಪ ಎಂಬುವರನ್ನೂ ಸ್ವೀಕರಿಸಬಾರದು,

4 ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರಿಗೆ ಸಮಾನವರ್ಣ ದವರೇ ಸ್ವೀಕಾರಕ್ಕೆ ಅರ್ಹರು. ಮತ್ತು ಆಯಾಯ ದೇಶದ ವರ್ಗದವರೇ

ಗ್ರಾಹ್ಯರು. ಮತ್ತು ಅಣ್ಣತಮ್ಮಂದಿರಿರುವ ಪುತ್ರನೇ ಗ್ರಾಹ್ಯ. ಶೂದ್ರರಿಗೆ ದೌಹಿತ್ರ, ಭಾಗಿನೇಯರು ಗ್ರಾಹ್ಯರು.

ಇದಕ್ಕೆ ಮೂಲವಚನವಿದು –

ಬ್ರಹ್ಮಣಾಮೇಕಜಾತಾನಾ ಮೇಕಶ್ಚೇತ್ ಪುತ್ರವಾನ್ ಭವೇತ್ ।
ಸರ್ವೇ ತೇ ತೇನ ಪುತ್ರೇಣ ಪುತ್ರಿಣೋ ಮನುರಬ್ರವೀತ್ ॥

5 ಈ ವಚನದಲ್ಲಿ "ನಾಪುತ್ರಸ್ಯ ಲೋಕೋಽಸ್ತಿ" ಇತ್ಯಾದಿ ವಚನಗಳಲ್ಲಿ ಹೇಳಿದಂತೆ ಸಂತತಿಯಿಲ್ಲದವರಿಗೆ ಸದ್ಗತಿಯಿಲ್ಲವೆಂಬ ದೋಷವು ನಿವೃತ್ತಿಯಾಗುವುದು. ವಿಧಿವತ್ತಾಗಿ ಸ್ವೀಕರಿಸದೇ ಇದ್ದರೂ ಸಹೋದರ ಪುತ್ರನಿಂದ ಪಿತೃವ್ಯನಿಗೆ (ದೊಡ್ಡಪ್ಪನಿಗೆ) ಈ ದೋಷವು ನಿವೃತ್ತಿಯಾಗುವುದೆಂದು ತಿಳಿಯುವುದು. ಆದರಿಂದ ಪುತ್ರನಿಗೆ ಸಮಾನನಾದ್ದರಿಂದ ಸ್ವೀಕರಿಸಲ್ಪಡುವ ಪುತ್ರರಲ್ಲಿ ಈತನೇ ಮುಖ್ಯನೆಂದು, ಈ ಮುಖ್ಯನಾದ ಪುತ್ರನಿಲ್ಲದಿದ್ದರೆ ಅವನಿಗೆ ಸಮಾನನಾದ ಒಬ್ಬ ಪ್ರತಿನಿಧಿಯು ಇದ್ದರೆ ಅವನಿಂದಲೇ ಸದ್ಗತಿ. ಮತ್ತು ಹಿಂದೆ ಹೇಳಿದ ದೋಷವು ನಿವೃತ್ತಿಯಾಗುವುದು. ಅವರಲ್ಲಿ ವಿಧಿವತ್ತಾಗಿ ದತ್ತುಸ್ವೀಕಾರ ಮಾಡಿರಬೇಕು. ಪುತ್ರನಿಲ್ಲದವನಿಗೆ "ನನ್ನ ಧನವನ್ನು ಸ್ವೀಕರಿಸುವುದಕ್ಕೂ ನನಗೆ ಮುಂದೆ ಪಿಂಡಹಾಕುವುದಕ್ಕೂ ಒಬ್ಬನು ಉತ್ತರಾಧಿಕಾರಿಯಾಗಿರಲಿ" ಎಂಬ ಅಭಿಲಾಷೆಯಿದ್ದರೆ ವಿಧಿವತ್ತಾಗಿ ಸ್ವೀಕಾರ ಮಾಡಿದ್ದರೆ ಮಾತ್ರ ಅಧಿಕಾರಿಯಾಗುವನು (ಈ ಮೇಲೆ ಹೇಳಿದ ಸಹೋದರನ ಪುತ್ರನು) ಎಂಬುದೇ ಮನುವಚನದ ತಾತ್ಪರ್ಯ.

6 ಹಾಗೆ ಅಭಿಲಾಷೆಯಿಲ್ಲದಿದ್ದರೆ ಸ್ವೀಕಾರ ಮಾಡದೇ ಇದ್ದಾಗ ಉತ್ತರಾಧಿಕಾರಿ (ಶ್ರಾದ್ಧಾದಿಗಳಿಗೆ ಅಧಿಕಾರಿ) 'ಪತ್ನೀ, ದುಹಿತರಶ್ಚೈವ ಪಿತರೌ ಭ್ರಾತರಸ್ತಥಾ । ತತ್ಸುತಾ ಗೋತ್ರಜಾ ಬನ್ಧುಃ........' ಇತ್ಯಾದಿ ವಚನದಂತೆ ಪತ್ನಿಯೇ ಅಧಿಕಾರಿಯಾಗುವಳು. ಅವಳಿಲ್ಲದಿದ್ದರೆ ಹೆಣ್ಣು ಮಕ್ಕಳು, ತನ್ನ ತಂದೆತಾಯಂದಿರು, ಸಹೋದರರು, ಸಹೋದರರ ಮಕ್ಕಳು, ಅವರ ಮಕ್ಕಳು ಅಥವಾ ತನ್ನ ಗೋತ್ರದಲ್ಲಿ ಹುಟ್ಟಿದವರು ಬಂಧು-ಎಂಬುವರೇ ಕ್ರಮವಾಗಿ ಅಧಿಕಾರಿಗಳಾಗುವರು.

7 ಹೀಗೆಯೇ ಅನೇಕ ಹೆಂಡತಿಯರು ಇದ್ದರೆ, ಸವತಿ ಪುತ್ರನಿದ್ದರೆ, ಈತನಿಗೆ ಪುತ್ರನಿಲ್ಲದಿದ್ದರೂ ಸವತಿ ಪುತ್ರನೇ ಉತ್ತರಾಧಿಕಾರಿಯಾಗುತ್ತಾನೆ. ಆದರಿಂದ ಮತ್ತೊಬ್ಬಳಿಂದ ಪುತ್ರಗ್ರಹಣ ಮಾಡಬೇಕಾಗಿಲ್ಲ.

ಸರ್ವಾಸಾಮೇಕಪತ್ನೀನಾ ಮೇಕಾಚೇತ್ ಪುತ್ರಿಣೀ ಭವೇತ್ ।
ಸರ್ವಾಸ್ತಾಸ್ತೇನ ಪುತ್ರೇಣ ಪುತ್ರಿಣ್ಯೋ ಮನುರಬ್ರವೀತ್ ॥

8 ದೌಹಿತ್ರ, ಭಾಗಿನೇಯ (ಅಕ್ಕತಂಗಿಯರ ಪುತ್ರರು) ಇದ್ದರೂ ಪುತ್ರಸ್ವೀಕಾರ ಮಾಡಬೇಕಾಗಿಲ್ಲ. ಶೂದ್ರರಿಗೆ ಮಾತ್ರ ಆಗಬಹುದು.

9 ಜ್ಯೇಷ್ಠಪುತ್ರನನ್ನು ದಾನಮಾಡಬಾರದು. ಒಬ್ಬನೇ ಮಗನಿದ್ದಲ್ಲಿ ಅವನನ್ನೂ ಕೊಡಲೂಬಾರದು, ಸ್ವೀಕರಿಸಲೂಬಾರದು. ಔರಸ ಪುತ್ರರು ಅನೇಕರು ಇದ್ದರೆ ಪುತ್ರದಾನ ಮಾಡಬಹುದು.

10 ಮೊದಲು ಸ್ವೀಕರಿಸಿದ ದತ್ತಪುತ್ರನು ಇರುವಾಗ ಅನಂತರ ತನ್ನ ಹೆಂಡತಿಗೆ ಔರಸಪುತ್ರನು ಹುಟ್ಟಿದರೆ, ಈ ತಂದೆಗೆ ಈ ಬಗೆಯ ಅನೇಕ ಪುತ್ರರಿದ್ದರೆ ದತ್ತಪುತ್ರನನ್ನೂ ಔರಸಪುತ್ರನನ್ನೂ ದಾನ ಮಾಡಬಾರದು.

11 ಪತಿಯು ಇರುವಾಗ ಸ್ತ್ರೀಯು ಪತಿಯ ಅನುಜ್ಞೆಯಿಂದ ಪುತ್ರನನ್ನು ಕೊಡಲೂಬಹುದು.

12 ವಿಧವೆಯೂ ಸಹ 'ನೀನು ಪುತ್ರಸ್ವೀಕಾರ ಮಾಡೆಂದು ಅನುಜ್ಞೆ ಕೊಟ್ಟ ಪತಿಯು ಮೃತಪಟ್ಟರೆ ಈಕೆಯೂ ದತ್ತುಸ್ವೀಕಾರ ಮಾಡಬಹುದು.

13 ಸರ್ವಸಮ್ಮತವಾದ ಒಂದು ವಿಷಯ –

ಪತಿಯು ಬದುಕಿರುವಾಗ ಅನುಜ್ಞೆ ಕೊಡದೆ ಮೃತಪಟ್ಟಲ್ಲಿ ಆಪ್ತರ ಮುಖದಿಂದ ಭರ್ತೃವಿನ ಅಭಿಪ್ರಾಯವಿತ್ತೆಂದು ತಿಳಿದು ಪತ್ನಿಯು ವಿಧವೆಯಾದರೂ ದತ್ತುಸ್ವೀಕಾರ ಮಾಡಬಹುದು.

14 ಮತ್ತು ಈ ಎರಡು ಬಗೆಯಲ್ಲೂ ಭರ್ತೃವಿನ ಅನುಜ್ಞೆಯಿಲ್ಲ ದಿದ್ದರೂ ಶಾಸ್ತ್ರದ ಬಲದಿಂದ ನಿತ್ಯಕಾಮ್ಯ ವ್ರತಗಳ ಆಚರಣೆಯಲ್ಲಿ ಅಧಿಕಾರವಿರುವಂತೆಯೇ 'ಅಪುತ್ರಸ್ಯ ಗತಿರ್ನಾಸ್ತಿ' ಎಂಬ ಶಾಸ್ತ್ರದಂತೆ ವಿಧವೆಗೂ ಸದ್ಗತಿಯಾಗಬೇಕಾದರೆ ಪುತ್ರಪ್ರತಿಗ್ರಹ ಮಾಡಲೇಬೇಕಾಗು ವುದು ಅನಿವಾರ್ಯವು. ಅದರಿಂದ ಆಗಲೂ ಅಧಿಕಾರವಿದೆಯೆಂದು ಹೇಳುವರು.

"ನಸ್ತ್ರೀ ಪುತ್ರಂ ದದ್ಯಾತ್, ಪ್ರತಿಗೃಹ್ಣೀಯಾತ್" ಎಂಬ ವಸಿಷ್ಠರ ವಚನಕ್ಕೆ "ಪತಿಯ ಅನುಜ್ಞೆಯಿಲ್ಲದೆ ಸ್ತ್ರೀಯು ಪುತ್ರನನ್ನು ಕೊಡಲೂ ಬಾರದು. ಸ್ವೀಕರಿಸಲೂ ಬಾರದು" ಎಂದು ಹೇಳುವುದು ಮುಖ್ಯ ಅಭಿ ಪ್ರಾಯವಲ್ಲ. ಪತಿಯ ಅನುಜ್ಞೆಯು ಆವಶ್ಯಕ ಒಳಿತೆಂಬುದೇ ತಾತ್ಪರ್ಯ. ಸರ್ವಥಾ ದತ್ತುಸ್ವೀಕಾರ ಮಾಡಕೂಡದೆಂದು ಅನುಜ್ಞೆಯಿಲ್ಲದ ಸ್ತ್ರೀಗೆ ಹೇಳಿಲ್ಲ. ಪುತ್ರರಿಲ್ಲದವರಿಗೆ ಸದ್ಗತಿಯಿಲ್ಲವೆಂಬ ವಚನದಿಂದ ಪುತ್ರ ಪ್ರತಿಗ್ರಹ ಮಾಡಬೇಕೆಂಬುದು ತೋರುವುದು. ಪುತ್ರನಿಂದಲೇ ಸದ್ಗತಿ ಯೆಂಬುದು ತಾತ್ಪರ್ಯ.

ಇಂತಹ ಸ್ತ್ರೀಗೆ ಪುತ್ರಪ್ರತಿಗ್ರಹ ಡಮಾಡಲು ಅಡ್ಡಿಮಾಡಿದರೆ, ಜೀವನ ವೃತ್ತಿಲೋಪ, ಪಿಂಡವಿಚ್ಛೇದಾದಿಗಳನ್ನು ಮಾಡುವವನು ನರಕಕ್ಕೆ ಹೋಗುವನು.

ಯೋ ಬ್ರಾಹ್ಮಣಸ್ಯ ವೃತ್ತ್ಯೌತು ಪ್ರತಿಕೂಲಂ ಸಮಾಚರೇತ್ ।
ವಿಡ್‌ಭುಜಾಂತು ಕ್ರಿಮೀಣಾಂಸ್ಯಾದಿತಿ ಶಾಸ್ತ್ರಾತ್ ॥

ಎಂದು ಕೌಸ್ತುಭಗ್ರಂಥದಲ್ಲಿ ಹೇಳಿದೆಯೆಂದು ಧರ್ಮಸಿಂಧುಕಾರರು ಪ್ರತಿಪಾದಿಸಿದ್ದಾರೆ.

## ದತ್ತುಪುತ್ರನ ಗೋತ್ರ ಮತ್ತು ಸಾಪಿಂಡ್ಯ ನಿರ್ಣಯ

1 ಪರಗೋತ್ರದಲ್ಲಿ ಹುಟ್ಟಿದವನ ದತ್ತುಸ್ವೀಕಾರ ಮಾಡುವಾಗ ಪಾಲಕ ತಂದೆಯು ಉಪನಯನ ಮಾತ್ರ ಮಾಡಿದರೆ, ಅದರಲ್ಲೂ ಪಾಲಕನ

ಗೋತ್ರದಲ್ಲೇ ಮಾಡಿದರೆ, ಅಥವಾ ಉಪನಯನವಾದ ಮೇಲೆ ಪಾಲಕನು ದತ್ತುಸ್ವೀಕಾರ ಮಾಡಿದರೆ ಅಭಿವಾದನ ಕಾಲದಲ್ಲೂ, ಶ್ರಾದ್ಧ ಮೊದಲಾದ ಕರ್ಮಗಳಲ್ಲೂ ಎರಡು ಗೋತ್ರಗಳನ್ನೂ ಉಚ್ಚರಿಸಬೇಕು.

2 ಚೂಡಾಕರ್ಮ ಮೊದಲ್ಗೊಂಡು ಎಲ್ಲಾ ಸಂಸ್ಕಾರಗಳೂ ಪಾಲಕನಿಂದ ಮಾಡಲ್ಪಟ್ಟರೆ ಪಾಲಕಗೋತ್ರದಲ್ಲೇ ವಿವಾಹವೂ ಆಗಿದ್ದಲ್ಲಿ ಎಲ್ಲಾ ದತ್ತುಪುತ್ರರೂ ಜನಕತಂದೆ, ಪಾಲಕತಂದೆ ಈ ಇಬ್ಬರ ಗೋತ್ರ ಮತ್ತು ಪ್ರವರಗಳಲ್ಲಿ ಹುಟ್ಟಿದ ಕನ್ಯೆಯನ್ನು ವರ್ಜಿಸಬೇಕು. ವಿವಾಹ ಮಾಡಿಕೊಳ್ಳಬಾರದು.

3 ಆದರೆ ಏಳುತಲೆಮಾರಿನ ಸಾಪಿಂಡ್ಯವು ಐದು ತಲೆಮಾರಿನ ಸಾಪಿಂಡ್ಯವೂ ಈ ಭಿನ್ನಗೋತ್ರದಲ್ಲಿ ದತ್ತಾಗಿರುವವನಿಗೆ ಅನ್ವಯಿಸುವುದಿಲ್ಲ.

4 ಜನಕಗೋತ್ರದಲ್ಲಿ ಉಪನಯನವಾಗಿದ್ದಲ್ಲಿ ಜನಕ ಮಾತಾಪಿತೃ ಕುಲದಲ್ಲಿ ಏಳು ತಲೆಮಾರಿನವರೆಗೆ ಸಾಪಿಂಡ್ಯವು ಐದು ತಲೆಮಾರಿನವರೆಗೆ ಸಾಪಿಂಡ್ಯವೂ ಇರುವುದು. ಆದರೆ ದತ್ತುಸ್ವೀಕಾರ ಮಾಡಿದ ಮಾತಾಪಿತೃಗಳ ಕುಲದಲ್ಲಿ ತ್ರಿಪುರುಷ ಸಾಪಿಂಡ್ಯವು. ಸ್ವೀಕಾರ ಮಾಡುವವನ ಗೋತ್ರದಲ್ಲಿ ಉಪನಯನ ಮಾತ್ರ ಮಾಡಲ್ಪಟ್ಟಿದ್ದರೆ ಎರಡು ಕುಲಗಳಲ್ಲೂ ಐದು ತಲೆಮಾರು ಸಾಪಿಂಡ್ಯವಿರುವುದು, ಮಾತೃಕುಲದಲ್ಲಿ ತ್ರಿಪುರುಷಸಾಪಿಂಡ್ಯವು.

5 ಜಾತಕರ್ಮಾದಿ ಉಪನಯನಾಂತ ಸಂಸ್ಕಾರಗಳನ್ನು ಪಾಲಕನೇ ಮಾಡಿದ್ದಲ್ಲಿ ಪಾಲಕನ ಕಾಲದಲ್ಲಿ ಏಳು ತಲೆಮಾರು ಸಾಪಿಂಡ್ಯವಿರುವುದು. ತಾಯಿಮೂಲಕವಾದಲ್ಲಿ ಐದು ತಲೆಮಾರು ಸಾಪಿಂಡ್ಯವು. ಜನಕ ಕುಲದಲ್ಲಿ ಮಾತ್ರ ಇದಕ್ಕೂ ಕಮ್ಮಿಯಾಗಿಯೇ ಸಾಪಿಂಡ್ಯವಿರುವುದೆಂದು ಕಲ್ಪಿಸಬೇಕು. ಇವೇ ರೀತಿಯಾಗಿ ದತ್ತುಪುತ್ರನ ಸಂತತಿಯಲ್ಲೂ ಊಹಿಸಿಕೊಳ್ಳಬೇಕು,

6 ಹೆಂಡತಿ, ಮಗಳು, ಮುಂತಾದವರು ಇದ್ದರೂ ದತ್ತುಪುತ್ರನೇ ತಂದೆಯ ಧನಕ್ಕೂ ಸ್ವತ್ತಿಗೂ ಭಾಗಿಯಾಗುವನು. ದತ್ತುಸ್ವೀಕಾರ ಮಾಡಿದ ನಂತರ ಔರಸಪುತ್ರನು ಹುಟ್ಟಿದರೆ ದತ್ತುಪುತ್ರನಿಗೆ ನಾಲ್ಕನೇಒಂದು ಭಾಗ ಆಸ್ತಿಯಲ್ಲಿ ಕೊಡತಕ್ಕದ್ದು.

7 ದತ್ತುಪುತ್ರನಿದ್ದರೂ ಔರಸಪುತ್ರನೇ ತಂದೆತಾಯಿಗಳಿಗೆ ಪಿಂಡ ಹಾಕುವ ಅಧಿಕಾರಿ. ಜನಕನಿಗೆ ಯಾರೂ ಇಲ್ಲದಿದ್ದರೆ ದತ್ತುಪುತ್ರನೇ ಜನಕ ಪಾಲಕ ಇಬ್ಬರಿಗೂ ಶ್ರಾದ್ಧವನ್ನು ಮಾಡಬೇಕು. ಇಬ್ಬರ ಧನ ವನ್ನೂ ದತ್ತುಪುತ್ರನೇ ಸ್ವೀಕರಿಸಬೇಕು.

8 ದತ್ತುಕನ್ಯೆಯ ಸ್ವೀಕಾರವನ್ನು ಹಿಂದೆ ಹೇಳಿದ ವಿಧಿಯಂತೆ ಮಾಡಬೇಕು. ಭಿನ್ನಗೋತ್ರದ ಕನ್ಯೆಯನ್ನು ಸ್ವೀಕರಿಸಿದರೆ ವಿವಾಹ ಮಾಡುವಾಗ ಎರಡು ಗೋತ್ರಗಳನ್ನೂ ಬಿಡಬೇಕು. ಪುತ್ರ, ಪತ್ನಿ ಇಬ್ಬರೂ ಇಲ್ಲವಾದರೆ ದತ್ತುಪುತ್ರಿಯೇ ತಂದೆಯ ಧನಕ್ಕೆ ಭಾಗಿಯಾಗುವಳು.

## ಚೂಡಾಕರ್ಮ ವಿಧಿಯ ಕಾಲನಿರ್ಣಯ

1 ದ್ವಿಜರಿಗೆ ಎರಡನೇ ವರ್ಷ, ಮೂರನೇ ವರ್ಷ ಅಥವಾ ಐದನೇ ವರ್ಷದಲ್ಲಿ ಚೂಡಾಕರ್ಮವು ವಿಹಿತವಾಗಿದೆ. ಉತ್ತರಾಯಣದಲ್ಲೇ ಆಚರಿಸ ಬೇಕು. ಶುಕ್ಲಪಕ್ಷ ಮತ್ತು ಉತ್ತಮವಾದ ನಕ್ಷತ್ರದಲ್ಲಿ ಆಚರಿಸಬೇಕು.

2 ಕುಲಧರ್ಮದಂತೆ ಉಪನಯನದೊಂದಿಗೂ ಚೌಲವನ್ನು ಮಾಡ ಬಹುದು. ಇದೇ ಕಾಲದಲ್ಲೇ ವ್ರತ (ಸ್ನಾತಕವ್ರತ) ಉಪನಯನವನ್ನು ಮಾಡಬೇಕು. ವಿವಾಹವು ದಕ್ಷಿಣಾಯನದಲ್ಲಾದರೂ ಆಗಬಹುದು. ಇದನ್ನು ಉತ್ತರಾಯಣದಲ್ಲೇ ಆಚರಿಸತಕ್ಕದ್ದು ಎಂದು ಗೃಹ್ಯಕಾರಿಕಾಕಾರರು,

"ತೃತೀಯೇ ವರ್ಷೇ ಚೌಲಂ ಯಥಾ ಕುಲಧರ್ಮಂ ವಾ" ಎಂಬ ಗೃಹ್ಯಸೂತ್ರ. ಮೂರನೇ ವರ್ಷ ಅಥವಾ ಉಪನಯನದೊಂದಿಗೆ ಎಂಬುವ ಕಾಲವು ವ್ಯವಸ್ಥಿತ. ವಿಕಲ್ಪವು ಅಂದರೆ ಕುಲಧರ್ಮದಂತೆ ಯಾವುದೋ ಒಂದು ಕಾಲವನ್ನೇ ಅನುಸರಿಸಬೇಕು. ಬದಲಾಯಿಸಬಾರದೆಂದು ಅರ್ಥ.

3 ಮಗುವು ಹುಟ್ಟಿದ ವರ್ಷದಿಂದ ಮೂರು, ಐದು, ಎಂದು ವರ್ಷಗಣನೆಯಂತೆ ಗರ್ಭ ನಿಂತ ದಿನದಿಂದಲೂ ವರ್ಷಗಣನೆ ಮಾಡುವುದುಂಟು. ಇದು ಮುಖ್ಯ-ಗೌಣಪಕ್ಷಕ್ಕೆ ಸೇರುವುದು. ಜನ್ಮತಃ ತೃತೀಯ ಎಂಬುವುದೇ ಮುಖ್ಯ ಕಾಲವು.

4 ಉತ್ತರಾಯಣವು ದೇವಭಾಗ. ದಕ್ಷಿಣಾಯನ ಯಮನ ಭಾಗ. ಸೂರ್ಯನು ಉತ್ತರಾಯಣದಲ್ಲಿರುವಾಗಲೇ ಚೂಡಾಕರ್ಮವು ಶ್ರೇಷ್ಠವೆನಿಸಿದೆ. ದಕ್ಷಿಣಾಯನದಲ್ಲಿ ಚೌಲವು ಅಶುಭಕರ. ವರ್ಜ್ಯವು.

ಕೆಲವರು ಈಗ ಶಾಸ್ತ್ರವನ್ನು ಉಲ್ಲಂಘಿಸಿ ತಿರುಪತಿ ಮುಂತಾದ ದೇವಾಲಯಗಳಿಗೆ ಹೋಗಿ ದಕ್ಷಿಣಾಯನದಲ್ಲೂ ಮಾಡುವರು. ಇದು ಅಶಾಸ್ತ್ರೀಯವು. ಮಾಡಬಾರದು, ದೇವರ ಮುಂದೆ ಅಪರಾಧ ಮಾಡಿದಂತಾಗುವುದು. ದೇವಾಲಯಗಳಲ್ಲಿ ಚೂಡಾಕರ್ಮ, ಉಪನಯನ ಮಾಡಲೂ ಬಾರದು. ಹರಕೆ ಹೊತ್ತವರೂ ಸಹ ಉತ್ತರಾಯಣದಲ್ಲೇ ಮಾಡಬೇಕು.

ಮಕರ, ಕುಂಭ, ಮೀನ ಮೇಷ ವೃಷಭ. ಮಿಥುನ, ಮೀನಮಾಸಗಳೇ ಕ್ರಮವಾಗಿ ಸಂಪತ್ತು, ಸಂತಾನ, ಸೌಖ್ಯ. ಸರ್ವಾರ್ಥಸಿದ್ಧಿ. ಜಯ, ವಂಶವೃದ್ಧಿಕಾರಕಗಳು.

**ಕರ್ಕಾಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ. ಧನು, ಸರ್ವಥಾ ಅರಿಷ್ಟಕಾರಕಗಳು.** ಅದರಿಂದ ಈ ಆರೂ ವರ್ಜ್ಯವು.

5 ಅಧಿಕ ಮಾಸ, ಸಂಸರ್ಪ, ಅಂಹಸ್ಪತಿ ಮಾಸಗಳು ವರ್ಜ್ಯವಾಗಿವೆ. ಗುರುಶುಕ್ರರು ಅಸ್ತವಾಗಿದ್ದಲ್ಲೂ ಅವುಗಳ ಬಾಲ ವೃದ್ಧಾವಸ್ಥೆಗಳಲ್ಲೂ ಚೌಲವನ್ನು ಮಾಡಬಾರದು. ಜನ್ಮಮಾಸವೂ ನಿಷಿದ್ಧವಾಗಿದೆ. ಮಾಘ, ಫಾಲ್ಗುಣ, ವೈಶಾಖ, ಜ್ಯೇಷ್ಠ ಮಾಸಗಳು ಪ್ರಶಸ್ತವು. ಜ್ಯೇಷ್ಠಪುತ್ರನಿಗೆ ಜ್ಯೇಷ್ಠಮಾಸವು ನಿಷಿದ್ಧ.

6. ಬಿದಿಗೆ, ತದಿಗೆ, ಪಂಚಮಿ, ಸಪ್ತಮಿ, ದಶಮಿ, ಏಕಾದಶಿ; ತ್ರಯೋದಶಿ ತಿಥಿಗಳು ಶುಭಕರವು, ಬುಧವಾರ, ಗುರುವಾರ, ಶುಕ್ರವಾರಗಳು ಶ್ರೇಷ್ಠವಾಗಿವೆ. ಸೋಮವಾರವು ಸರ್ವಶ್ರೇಷ್ಠವಾದುದು,

7 ಅಶ್ವಿನಿ. ಮೃಗಶಿರ, ಪುನರ್ವಸು, ಪುಷ್ಯ, ಹಸ್ತ, ಚಿತ್ತೆ, ಸ್ವಾತಿ. ಜ್ಯೇಷ್ಠ, ಶ್ರವಣ. ಧನಿಷ್ಠೆ, ಶತತಾರೆ, ರೇವತಿ ಇವು ಶ್ರೇಷ್ಠ ನಕ್ಷತ್ರಗಳು.

8 ಗುರುವು ಸಿಂಹದಲ್ಲಿರುವಾಗ ಚೌಲವು ನಿಷಿದ್ಧ, ಮಾಡಬಾರದು. ಮಗುವಿನ ತಾಯಿಯು ಗರ್ಭಿಣಿಯಾಗಿರುವಾಗ ಐದುವರ್ಷ ಪರ್ಯಂತರ ಚೌಲವು ನಿಷಿದ್ಧ. ಐದುವರ್ಷವು ಕಳೆದನಂತರ ಗರ್ಭಿಣಿಯಾಗಿದ್ದರೂ ಚೂಡಾಕರ್ಮ ಮಾಡಬಹುದು. ಗರ್ಭಿಣಿಯಾಗಿದ್ದರೂ ಉಪನಯನದ ಜೊದಿಗೆ ಮಾಡುವಲ್ಲಿ ದೋಷವಿಲ್ಲ. ಹೀಗಿಲ್ಲದೆ ಚೂಡಾಕರ್ಮವನ್ನು ಬೇರೆಯಾಗಿ ಮಾಡುವುದು ದೋಷಕರವು. ಎರಡನ್ನು ಸೇರಿಸಿ ಮಾಡುವಲ್ಲಿ ದೋಷವಿಲ್ಲವೆಂದು ಧರ್ಮಸಿಂಧುವಿನ ನಿರ್ಣಯ

9. ಗರ್ಭಿಣಿಯಾಗಿದ್ದರೂ ಐದು ತಿಂಗಳು ತುಂಬುವವರೆಗೂ, ಚೌಲ ಮಾಡಬಹುದು, ಐದುತಿಂಗಳು ಕಳೆದ ಮೇಲೆ ಮಾಡಬಾರದು, ಜ್ವರ ಬಂದಿರುವ ಮಗುವಿಗೆ ಚೌಲ ಮೊದಲಾದ ಮಂಗಳಕಾರ್ಯ ಕೂಡದು.

10 ತಾಯಿಯು ಬಹಿಷ್ಠೆಯಾಗಿದ್ದಾಗ ವಿವಾಹ, ಉಪನಯನಾದಿ ವ್ರತ ಬಂಧ, ಚೂಡಾಕರ್ಮ ಇವುಗಳನ್ನು ಮಾಡಬಾರದು, ಸ್ನಾನವಾದ ನಂತರ ಐದನೆ ದಿನ ಆಚರಿಸಬಹುದು.

ವಿವಾಹ ವ್ರತ ಚೂಡಾಸು ಯದಿ ಮಾತಾ ರಜಸ್ವಲಾ ।
ತಸ್ಯಾಃ ಶುದ್ಧೇಃ ಪರಂಕಾರ್ಯಂ ಮಂಗಳಂ ಮನುರಬ್ರವೀತ್ ॥

11 ನಾಂದಿಯಿಟ್ಟ ನಂತರ ತಾಯಿಯು ಬಹಿಷ್ಠೆಯಾದಲ್ಲಿ ಶಾಂತಿಯನ್ನು ಮಾಡಿ ಆಚರಿಸಬೇಕು. ಈ ನಿಯಮವು ಸೋದರಮಾವ ಮುಂತಾ

ದವರು ಚೌಲವನ್ನು ಮಾಡುವಲ್ಲೂ ಅವರ ಹೆಂಡರು ಬಹಿಷ್ಠೆಯಾದಲ್ಲಿ ಈ ಮಂಗಳಕಾರ್ಯವು ವರ್ಜ್ಯವೆಂದು ಸಿಂಧುಕಾರನು ಹೇಳಿರುವನು,

12 ತ್ರಿಪುರುಷಾತ್ಮಕವಾದ ಕುಲದಲ್ಲಿ ಆರು ತಿಂಗಳ ನಡುವೆ ಮುಂಚೆ ವಿವಾಹಗಳು ನೆಡೆದ ನಂತರ ಈ ಮುಂಡನ ಕಾರ್ಯವನ್ನು ಮಾಡಬಾರದು. ಆಪತ್ಕಾಲದಲ್ಲಿ ವರ್ಷಭೇದವಿದ್ದರೆ ಮಾಡಬಹುದು. ಚತುಃಪುರುಷಾಂತ ಕುಲದಲ್ಲೂ ಸಪಿಂಡೀಕರಣ ಮಾಸಿಕಾದಿ ಪ್ರೇತಕರ್ಮಗಳು ಮುಗಿಯುವ ಮುಂಚೆ ಚೂಡಾಕರ್ಮಾದಿಗಳನ್ನು ಮಾಡಬಾರದು.

13 ಆರಂಭವಾದ ನಂತರ ಸೂತಕವು ಬಂದರೆ ಕೂಷ್ಮಾಂಡ ಮಂತ್ರ ಗಳಿಂದ ಆಜ್ಯಹೋಮಮಾಡಿ, ಗೋದಾನ ಮಾಡಿ (ಗೋ ಪ್ರತ್ಯಾಮ್ನಾಯ ದಕ್ಷಿಣಾದಾನಮಾಡಿ) ಚೌಲ, ಉಪನಯನ, ವಿವಾಹ ಮೊದಲಾದವುಗಳನ್ನು ಆಚರಿಸಬೇಕು.

14 ಶಿಖೆಯನ್ನು ಆಯಾಯ ದೇಶಪದ್ಧತಿಯಂತೆ ಇರಿಸಬೇಕು. ಶೂದ್ರರಿಗೆ ಮಂತ್ರವಿಲ್ಲದೆ ಕೇವಲ ಚೌಲ ಮಾಡಬೇಕು.

15 ಚೌಲವಾದ ನಂತರ ಮೂರು ತಿಂಗಳು ಕಾಲ ಜ್ಞಾತಿಗಳು ಪಿಂಡ ದಾನ ತಿಲತರ್ಪಣಾದಿಗಳನ್ನು ಆಚರಿಸಬಾರದು, ಆದರೆ ಮಾತಾಪಿತೃಗಳ ಪ್ರತಿಸಾಂವತ್ಸರಿಕ ಶ್ರಾದ್ಧದಲ್ಲಿ ಮತ್ತು ಮಹಾಲಯದಲ್ಲೂ ಪಿಂಡದಾನಾದಿ ಗಳನ್ನು ಅವಶ್ಯ ಮಾಡಬೇಕು,

## ವಿದ್ಯಾರಂಭ

1 ಐದನೆ ವರ್ಷ ಅಕ್ಷರ ಲೇಖನಾರಂಭವು, ಇದನ್ನು ಉತ್ತರಾಯಣ ದಲ್ಲಿ ಮಾಡಬೇಕು. ಆದರೆ ಕುಂಭರಾಶಿಯಲ್ಲಿ ಸೂರ್ಯನಿರುವಾಗ ಕೂಡದು. ಶುಕ್ಷಪಕ್ಷವೂ, ಕೃಷ್ಣಪಕ್ಷ ಪಂಚಮೀವರೆಗೆ ಉತ್ತಮ. ಬಿದಿಗೆ, ತದಿಗೆ, ಪಂಚಮಿ, ದಶಮಿ, ಏಕಾದಶಿ, ದ್ವಾದಶಿ, ತ್ರಯೋದಶಿ ತಿಥಿಗಳು ಶ್ರೇಷ್ಠ.

ಅಶ್ವಿನಿ, ಮೃಗಶಿರ, ಆರ್ದ್ರೆ, ಪುನರ್ವಸು, ಪುಷ್ಯ ಹಸ್ತ ಚಿತ್ತೆ, ಸ್ವಾತಿ ಅನೂರಾಧ, ಧನಿಷ್ಠೆ ಶತತಾರೆ, ರೇವತಿಗಳು, ಮಂಗಳವಾರ ಬಿಟ್ಟುಳಿದ ವಾರಗಳು ಶ್ರೇಷ್ಠ

ವಿಘ್ನೇಶ, ಲಕ್ಷ್ಮೀನಾರಾಯಣರು, ಸರಸ್ವತೀ, ತನ್ನವೇದ ಪುರುಷ, ಸೂತ್ರದಾರ ಈ ಎಲ್ಲರನ್ನು ಕ್ರಮವಾಗಿ ಪೂಜಿಸಿ, ಗುರು ಬ್ರಾಹ್ಮಣರನ್ನೂ ಪೂಜಿಸಿ, ನಮಸ್ಕರಿಸಿ ಮೂರುಪ್ರದಕ್ಷಣೆ ಮಾಡಿ ಓಂಕಾರ ಪೂರ್ವಕವಾಗಿ ಅಕ್ಷರಾರಂಭ ಮಾಡಬೇಕು. ಇಲ್ಲಿ ಭುವನಮಾತಾ ಸರ್ವವಾಙ್ಮಯ ರೂಪೇಣ ಆಗಚ್ಛಾಗಚ್ಛ ಎಂದೇ ಸರಸ್ವತೀ ಆವಾಹನ ಮಂತ್ರ. ಷೋಡಶೋಪಚಾರ ಪೂಜೆಯನ್ನು ಪ್ರಣವದಿಂದ ಮಾಡಬೇಕು,

## ಉ ಪ ನ ಯ ನ

1 ಆಚಾರ್ಯನ ಸಮೀಪಕ್ಕೆ ವಟುವನ್ನು ಗಾಯಿತ್ರೀ ಉಪದೇಶಕ್ಕಾಗಿ ಒಯ್ಯುವುದೇ ಉಪನಯನ, ಇದೇ ಮುಖ್ಯವಾದ ಸಂಸ್ಕಾರ ಕರ್ಮ, ಉಪನಯನವೆಂದು ತಿಳಿಯಬೇಕು,

2 **ಅದನ್ನು ಮಾಡುವ ಅಧಿಕಾರಿಗಳು** – ತಂದೆ, ತಂದೆಯಿಲ್ಲದಿದ್ದರೆ ಪಿತಾಮಹ (ತಾತ) ಅವರೂ ಇಲ್ಲದಿದ್ದರೆ ಚಿಕ್ಕಪ್ಪ, ದೊಡ್ಡಪ್ಪ, ಇವರು ಯಾರೂ ಇಲ್ಲವಾದರೆ ಜ್ಯೇಷ್ಠ ಪುತ್ರ, ಅವನೂ ಇಲ್ಲದಿದ್ದರೆ, ಸಗೋತ್ರ ಜ್ಞಾತಿಗಳು (ಈ ಪ್ರಕಾರ ತಿಳಿಯಬೇಕು) ಅವರೂ ಇಲ್ಲದಿದ್ದರೆ, ಸೋದರ ಮಾವ, ಮಾತಾಮಹ ಇತ್ಯಾದಿಗಳು, ಆದರೆ ವಟುವಿಗೆ ವಯಸ್ಸಿನಲ್ಲಿ ಹಿರಿದಾದವರೇ ಉಪನಯನ ಮಾಡಬೇಕು. ಕನಿಷ್ಠನು ಎಂದಿಗೂ ಉಪನಯನ ಮಾಡಕೂಡದು, ಇವರು ಯಾರೂ ಇಲ್ಲದಿದ್ದರೆ ಶ್ರೋತ್ರಿಯ ಬ್ರಾಹ್ಮಣ ಮಾಡಬಹುದು. **ಶ್ರೋತ್ರಿಯ** ಎಂದರೆ **ಜನ್ಮತಃ ಬ್ರಾಹ್ಮಣನಾಗಿಯೂ ಸಂಸ್ಕಾರದಿಂದ** ದ್ವಿಜನೆಂದೂ. ವಿದ್ವತ್ವವಿದ್ದರೆ ( ವೇದಶಾಸ್ತ್ರಜ್ಞನಾದರೆ) **ವಿಪ್ರನೆಂದೂ,** ಈ ಮೂರರಿಂದ **ಶ್ರೋತ್ರಿಯ**ನೆಂದು ಹೇಳಲ್ಪಡುವನು.

3 ಆಧಾರ—

ಪಿತ್ರೈವೋಪನಯೇತ್ ಪುತ್ರಂ ತದಭಾವೆ ಪಿತುಃ ಪಿತಾ ।

ತದಭಾವೇ ಪಿತುರ್ಭ್ರಾತಾ ತದಭಾವೇತು ಸೋದರಃ ॥ ಇತ್ಯಾದಿ

ಕೃಚ್ಛ್ರತ್ರಯವನ್ನು ಉಪನಯನ ಮಾಡುವವನೂ ವಟುವೂ ಸಹ ಆಚರಿಸ ಬೇಕು. ಇದು ಆಗದಿದ್ದರೆ ಕೃಚ್ಛ್ರತ್ರಯ ಪ್ರತ್ಯಾಮ್ನಾಯ ಯಥಾಶಕ್ತಿ ದಕ್ಷಿಣಾದಾನ ಮಾಡಬೇಕು,

4 ಉಪನಯನ ಮಾಡುವವನು ದ್ವಾದಶ ಸಹಸ್ರ (12000) ಗಾಯತ್ರೀ ಜಪ ಮಾಡಬೇಕು. ಅಥವಾ ಒಂದು ಸಾವಿರದ ಹನ್ನೆರಡು (1012) ನ್ನಾದರೂ ಜಪಿಸಬೇಕು.

## ವಟುವಿಗೆ ಉಪನಯನ ಕಾಲ ನಿರ್ಣಯ

1 ಗರ್ಭದಿಂದಲೋ ಜನನದಿಂದಲೋ ಲೆಕ್ಕಿಸಿ, ಐದನೆ ವರ್ಷ, ಎಂಟನೆ ವರ್ಷದಲ್ಲೊ ಬ್ರಾಹ್ಮಣನಿಗೆ ಉಪನಯನ ಮಾಡಬೇಕು, ಕ್ಷತ್ರಿಯ ರಿಗೆ ಹನ್ನೊಂದು, ಹನ್ನೆರಡನೇ ವರ್ಷದಲ್ಲಿ. ವೈಶ್ಯರಿಗೆ ಹನ್ನೆರಡೋ, ಹದಿನಾರನೇ ವರ್ಷದಲ್ಲೋ ಉಪನಯನ ಮಾಡಬೇಕು. ಹದಿನಾರು ವರ್ಷ, (ಇಪ್ಪತ್ತೆರಡು ವರ್ಷ, ಇಪ್ಪತ್ತನಾಲ್ಕು ವರ್ಷಗಳ) ಅವಧಿ

2 ಹದಿನಾರು ವರ್ಷ ಕಳೆದನಂತರ ಬ್ರಾಹ್ಮಣನಿಗೆ ಪ್ರಾಯಶ್ಚಿತ್ತ ಮಾಡಬೇಕು. ಅನಂತರವೇ ಉಪನಯನ.

3 ಮಾಘಾದಿ ಪಂಚಮಾಸಗಳು ಎಲ್ಲಾ ದ್ವಿಜರಿಗೂ ಹೇಳಿದ ಮಾಸ ಗಳೆಂದು ಗರ್ಗರು ಹೇಳಿದ್ದು. ವಸಂತ ಋತುವಿನಂತೆ, ಶಿಶಿರ, ಗ್ರೀಷ್ಮ ಋತು ಗಳನ್ನು ಉಪನಯನಕ್ಕೆ ಅವಕಾಶವನ್ನು ಮಾಡಿಕೊಟ್ಟಿದೆ. ಪಂಚಮಾಸ ಗಳನ್ನು ನಿಯಮಮಾಡಿದ್ದರಿಂದ ಪುಷ್ಯ ಆಷಾಢ ಮಾಸಗಳಲ್ಲಿ ಉತ್ತರಾಯಣ ವಿದ್ದರೂ ಈ ಮಾಸಗಳು ವರ್ಜ್ಯವೆ. ಅವರಲ್ಲೂ ಮೀನ ಮಾಸದಿಂದ ಆರಂಭಿಸಿ ಮಿಥುನ ಮಾಸದಲ್ಲಿ ರವಿ ಪ್ರವೇಶವಾಗುವವರೆಗೂ ಪ್ರಶಸ್ತಕಾಲ. ಮೀನ, ಮೇಷಮಾಸಗಳಲ್ಲಿ ಅತ್ಯಂತ ಪ್ರಶಸ್ತವು.

" ಮಕರ ಕುಂಭಸ್ಥೇ ಮಧ್ಯಮಂ. ಮೀನ ಮೇಷಸ್ಥೇ ಉತ್ತಮಂ. ವೃಷಭ ಮಿಥುನಸ್ಥೇ ಅಧಮಮುಪನಯನ " ಎಂದು ಹೇಳಿದೆ.

5 ಮೀನಾರ್ಕಯುಕ್ತವಾದ ಚೈತ್ರಮಾಸವು, ಅನಿಷ್ಟಬೃಹಸ್ಪತ್ಯಾದಿ ಬಹುದೋಷಗಳನ್ನು ಪರಿಹರಿಸುವುದರಿಂದ ಅತ್ಯಂತ ಪ್ರಶಸ್ತ.

ಜೀವಭಾರ್ಗವಯೋರಸ್ತೇ ಸಿಂಹಸ್ಥೇ ದೇವತಾ ಗುರೌ ।
ಚಂದ್ರಸೂರ್ಯೇ ದುರ್ಬಲೇಽಪಿ ಗೋಚರೇಽನಿಷ್ಟದೇ ಗುರೌ ॥

ಮೇಖಲಾಬಂಧನಂ ಕಾರ್ಯಂ ಚೈತ್ರೇ ಮೀನಗತೇ ರವೌ ॥

ಎಂದು ವಚನ.

6 ಮೀನಾರ್ಕ ಚೈತ್ರವಾದರೆ ಜನ್ಮಮಾಸ, ಜನ್ಮನಕ್ಷತ್ರ ದೋಷಗಳೂ ಇಲ್ಲ. ಜನ್ಮಮಾಸ, ಜನ್ಮನಕ್ಷತ್ರ, ಜನ್ಮತಿಥಿ, ಜನ್ಮಲಗ್ನ, ಜನ್ಮರಾಶಿಗಳಲ್ಲಿ ವಿಪ್ರರಿಗೆ ಉಪನಯನವು ದೋಷಕಾರಿಯಲ್ಲ. ಗುರು ಶುಕ್ರರು ಅಸ್ತರಾಗಿರಬಾರದು. ಜ್ಯೇಷ್ಠಪುತ್ರನಿಗೆ ಜ್ಯೇಷ್ಠಮಾಸದಲ್ಲಿ ಮಂಗಳ ಕಾರ್ಯವೇ ನಿಷಿದ್ಧ. ಶುಕ್ಲ ಪಕ್ಷವು ಶುಭಕರವು. ಕೊನೆಯಲ್ಲಿ ದಶಮೀ ಪರ್ಯಂತ ಆಪತ್ಕಾಲದಲ್ಲಿ ಉಪನಯನ ಮಾಡಬಹುದು, ಶಿಷ್ಟಾಚಾರವು ಕೃಷ್ಣಪಕ್ಷದಲ್ಲಿ ಪಂಚಮೀಪರ್ಯಂತ ಮಾಡವುದೇ ರೂಢಿ.

**7 ದ್ವಿತೀಯ, ಬಿದಿಗೆ, ತದಿಗೆ, ಪಂಚಮಿ, ಷಷ್ಠಿ, ದಶಮಿ ಏಕಾದಶಿ, ದ್ವಾದಶಿ ತಿಥಿಗಳು ಪ್ರಶಸ್ತವು. ಕೆಲವುಕಡೆ ಸಪ್ತಮಿ, ತ್ರಯೋದಶಿಗಳನ್ನು ಹೇಳಿದೆ.**

**8 ಸೋಪಪದ ತಿಥಿಯಲ್ಲಿ ಅನಧ್ಯಾಯದಲ್ಲೂ, ಗಲಗ್ರಹದಲ್ಲೂ, ಅಪರಾಹ್ನದಲ್ಲೂ** ಉಪನಯನ ಮಾಡಿದರೆ ಅವನಿಗೆ ಪುನಃ ಉಪನಯನವಾಗಬೇಕು ಆದರಿಂದ ಇವುಗಳನ್ನು ವರ್ಜಿಸಬೇಕು.

ಸೋಪಪದ ತಿಥಿಗಳೆಂದರೆ—

ಜ್ಯೇಷ್ಠಮಾಸದ ಶುದ್ಧ ಬಿದಿಗೆ. ಅಶ್ವಯುಜದ ಶುದ್ಧ ದಶಮಿ. ಮಾಘದಲ್ಲಿ ಚೌತಿ, ದ್ವಾದಶಿಗಳು ಸೋಪಪದ ತಿಥಿಗಳು.

ಪೂರ್ಣಿಮೆ, ಚತುರ್ದಶಿ. ಅಷ್ಟಮಿ, ಅಮಾವಾಸ್ಯೆ, ಪ್ರತಿಪತ್, ಸೂರ್ಯಸಂಕ್ರಾಂತಿ, ಮನ್ವಾದಿ ಯುಗಾದಿಗಳೂ, ಕಾರ್ತಿಕ, ಆಷಾಢ, ಫಾಲ್ಗುಣ ಕೃಷ್ಣಪಕ್ಷ ದ್ವಿತೀಯಾ ದಿನಗಳೂ, ವಿಷುವ, ಅಯನಸಂಕ್ರಾಂತಿ ಗಳಲ್ಲಿ ಪಕ್ಷಿಣಿಯೂ ಅನಧ್ಯಯನವೆಂದು ಹೇಳಪ್ಪಟ್ಟಿವೆ.

ಬ್ರಾಹ್ಮಣನಿಗೆ ವಸಂತ ಋತುವು ಉಪನಯನಕ್ಕೆ ವಿಹಿತ ಕಾಲ, ಈ ಋತುವನ್ನು ಬಿಟ್ಟು ಉಳಿದ ಕಾಲದ ಗಳಗ್ರಹಗಳು **ದೋಷ-**

8, **ಗಳಗ್ರಹಗಳು**—ತ್ರಯೋದಶಿ, ಚತುರ್ದಶಿ, ಹುಣ್ಣಿಮೆ ಪಾಡ್ಯ ಸಪ್ತಮಿ, ನವಮಿ, ಚತುರ್ಥಿ, ಈ ಎಂಟು. ಚತುರ್ಥಿ, ನವಮಿ ಈ (ಅಮಾವಾಸ್ಯೆ) ಎರಡೂ ವ್ರತಕಾಲಕ್ಕೆ ತ್ಯಾಜ್ಯವೆಂದು ಸಿಂಧುಕಾರನ ಮತ. ನವಮಿ ಶೇಷವಿದ್ದ ದಶಮಿಯಲ್ಲಿ ಮುಂಜಿಯನ್ನು ಮಾಡಬಾರದೆಂದು ಮಯೂಖ ಗ್ರಂಥದಲ್ಲಿ ಉಕ್ತವಾಗಿದೆ. ಇದಕ್ಕೆ **ಅಪವಾದ ಶಾಸ್ತ್ರ ಪಾರಿಜಾತದಲ್ಲಿದೆ.**

9 ಅಪರಾಹ್ಣವು ವ್ರತಬಂಧಗಳಿಗೆ ತ್ಯಾಜ್ಯ, **ಅಪರಾಹ್ಣವೆಂದರೆ ಹಗಲನ್ನು** ಸೂರ್ಯೋದಯದಿಂದ ಆರಂಭಿಸಿ **ಮೂರುಭಾಗ ಮಾಡಿದಾಗ ಹಗಲಿನ ಮೂರನೆಭಾಗವು ಅಪರಾಹ್ಣವೆನಿಸಿದೆ.** ಹಗಲಿನ ಮಧ್ಯಮ ಭಾಗವು **ಮಧ್ಯಮ,** ಮೊದಲಿನ ಭಾಗವೆ ವ್ರತಬಂಧಕ್ಕೆ (ಉಪನಯನಾದಿಗಳಿಗೆ) ಮುಖ್ಯಕಾಲ, **ಉಪನಯನಕ್ಕೆ ಚೈತ್ರಶುದ್ಧ ತದಿಗೆಯು ಕೂಡದು. ಅದು ಮನ್ವಾದಿಯಾಯಿತು. ಹೀಗೆಯೇ ವೈಶಾಖ ಶುದ್ಧ ತದಿಗೆಯೂ ಯುಗಾದಿಯಾದ್ದರಿಂದ ಕೂಡದು.**

10 **ಆದರೂ ಇದಕ್ಕೂ ಅಪವಾದಶಾಸ್ತ್ರವಿದೆ.** ಸಿಂಧು, ಕೌಸ್ತುಭ ಮೊದಲಾದ ಗ್ರಂಥಗಳಲ್ಲಿ—

ಯಾ ಚೈತ್ರ ವೈಶಾಖ ಸಿತಾ ತೃತೀಯಾ ಮಾಘಸ್ಯ ಸಪ್ತಮ್ಯಥ
- ಫಾಲ್ಗುನಸ್ಯ ।
ಕೃಷ್ಣೇ ದ್ವಿತೀಯೋಪನಯನೇ ಪ್ರಶಸ್ತಾ ಪ್ರೋಕ್ತಾ ಭಾರದ್ವಾಜ
ಮುನೀಂದ್ರಮುಖ್ಯೈಃ ॥

ಎಂದಂತೆ ಮೇಲ್ಕಂಡ ಚೈತ್ರ ವೈಶಾಖ ಶುಕ್ಲ ತೃತೀಯೆಯೂ ಮಾಘ ಸಪ್ತಮಿಯೂ, ಫಾಲ್ಗುನ ಕೃಷ್ಣ ದ್ವಿತೀಯೆಯೂ ಉಪನಯನಕ್ಕೆ ಪ್ರಶಸ್ತ ವೆಂದು **ಭಾರದ್ವಾಜಾದಿ ಮುನಿಗಳ ಮತ.**

ಇಲ್ಲಿ ಮಾಘ ಸಪ್ತಮಿಯು ಮನ್ವಾದಿಯಾದರೂ ಆಗಬಹುದೆಂದು ಹೇಳಿದ್ದು ಪುನರುಪನಯನಕ್ಕೆ ಮಾತ್ರ.

11 ಪ್ರದೋಷ ದಿನವೂ ಉಪನಯನಕ್ಕೆ ವರ್ಜ್ಯವು. ಒಂದುವೇಳೆ ಮಾಡಿದರೆ ಪುನರುಪನಯನವಾಗಬೇಕಾಗುವುದು. ಹೀಗೆಯೆ ಶನಿವಾರವೂ, ಕೃಷ್ಣಪಕ್ಷದ ಕೊನೆಯ ಮೂರುದಿನವೂ ವರ್ಜ್ಯವು. ಈ ದಿನಗಳು ನಿತ್ಯಾನಧ್ಯಾಯ ದಿನಗಳು, **ಪ್ರದೋಷವೆಂದರೆ** ರಾತ್ರಿಯ ದೊದಲನೆಯಾಮದಲ್ಲಿ ಚೌತಿಯಿದ್ದರೆ ತೃತೀಯಾತಿಥಿ ಪ್ರದೋಷ ದಿನ. ಹಾಗೂ ಷಷ್ಠಿದಿನ ರಾತ್ರಿ ಒಂದುವರೆ ಯಾಮ ಸಪ್ತಮಿಯಿದ್ದರೆ ಪ್ರದೋಷ. ದ್ವಾದಶಿ ದಿನ ರಾತ್ರಿ ಎರಡುಯಾಮಗಳಲ್ಲಿ ತ್ರಯೋದಶಿಯು ಇದ್ದರೆ ಪ್ರದೋಷವಂದರ್ಥ.

12 ನಾಂದಿಯಿಟ್ಟನಂತರ ಅಕಾಲಿಕ ವೃಷ್ಟಿ, ಗುಡುಗು ಮಿಂಚು ಬಂದರೆ ಅನಧ್ಯಾಯವೆಂದು ಹೇಳಿದೆ. ಆವಾಗ ಉಪನಯನ ಮಾಡಬಹುದು. ವೇದಾರಂಭವು ವರ್ಜ್ಯ. ಈ ನಿಷೇಧವು ಯಜುರ್ವೇದಿಗಳಿಗೆ ಮಾತ್ರ. ಋಗ್ವೇದಿಗಳಿಗೆ ಉಪಾಕರ್ಮದಲ್ಲಿ ವೇದಾರಂಭವೆಂದು ಅರಿಯಬೇಕು. ನಾಂದಿಗೆ ಮುಂಚೆ ನೈಮಿತ್ತಿಕವಾದ ಅನಧ್ಯಾಯವು ಬಂದರೆ ಬೇರೆ ಮುಹೂ

ರ್ತವಲ್ಲಿ ಉಪನಯನ ಮಾಡಬೇಕು. ಉಪನಯನವಾದ ನಂತರ ಅನು ಪ್ರವಚನೀಯ ಹೋಮಕ್ಕೆ ಮುಂಚೆ ಮೇಘ ಗುಡುಗಿದರೆ, ಮಳೆ ಬರುವ ಸಂಭವ ಕಂಡರೆ ಹಗಲೇ ಚರುಶ್ರಪಣಾಂತ ಕಾರ್ಯವನ್ನು ಮಾಡಿ ನಿಲ್ಲಿಸಿ ರಾತ್ರೆ ಅನುಪ್ರವಚನೀಯ ಹೋಮ ಮಾಡಬೇಕು. ಪಾಕವು ಆಗಿಲ್ಲವಾದರೆ ಗುಡುಗು ಮಳೆ ನಿಮಿತ್ತವಾಗಿ ಶಾಂತಿ ಮಾಡಿ, ಅನಂತರ ಪಾಕವನ್ನು ಮಾಡಬೇಕು.

## ಶಾಂತಿ ವಿಧಾನ ಕ್ರಮ

ಬ್ರಹ್ಮೌದನಪಾಕಾತ್ ಪೂರ್ವಂಗರ್ಜಿತೇನ ನಿಮಿತ್ತೇನ ಸೂಚಿತಸ್ಯ ಬ್ರಹ್ಮಚಾರಿಕರ್ತೃಕತಾಧ್ಯಯನ ವಿಘ್ನಸ್ಯ ನಿರಾಸದ್ವಾರಾ ಶ್ರೀಪರಮೇಶ್ವರ ಪ್ರೀತ್ಯರ್ಥಂ ಶಾಂತಿಂ ಕರಿಷ್ಯೇ– ಇತಿ ಸಂಕಲ್ಪ್ಯ.

ಸ್ವ ಸ್ತಿ ವಾ ಚ ನ—ಆಚಾರ್ಯವರಣೇಕೃತೇ ಆಚಾರ್ಯಃ ಅಗ್ನಿಂ ಪ್ರತಿಷ್ಠಾಪ್ಯ ಚಕ್ಷುಷೀ ಆಜ್ಯೇನೇತ್ಯನ್ತೆ ಸವಿತಾರಮ್ ಅಷ್ಟೋತ್ತರ ಶತಸಂಖ್ಯಯಾ ಸಾಜ್ಯಪಾಯಸಾಹುತಿಭಿಃ ಗಾಯತ್ರೀಮಂತ್ರೇಣ, ಶೇಷೇಣ ಸ್ವಿಷ್ಟಕೃತಂ ಇತ್ಯಾದಿ ಪ್ರಾಯಶ್ಚಿತ್ತ ಹೋಮಾನ್ತೆ ಗಾಯಾತ್ರ್ಯಾ ಸವಿತಾರ ಮಾಜ್ಯೇನೇತ್ಯನ್ವಾಧಾಯ, ಗೃಹಸಿದ್ಧ ಪಾಯಸ ಹೋಮಾನ್ತೇ ಬೃಹಸ್ಪತಿ ಸೂಕ್ತ ಜಪಃ ಕಾರ್ಯಃ, ಅನ್ತೆ ಆಚಾರ್ಯಾಯ ಧೇನುಂ ತತ್ಪ್ರತ್ಯಾ ಮ್ನಾಯ ದಕ್ಷಿಣಾಂವಾ ದತ್ವಾ ಯಥಾ ಶಕ್ತಿ ವಿಪ್ರಾನ್ ಭೋಜಯೇತ್.

ಉಪನಯನದ ಅಗ್ನಿಯು ನಷ್ಟವಾದರೆ—ಉಪನಯನಾಹುತಿಗಳಿಂದ ಅಗ್ನಿಯನ್ನು ಉತ್ಪಾದಿಸಿ ಅದರಲ್ಲಿ ಮೇಧಾಜನನಕ್ಕೆ ಪೂರ್ವಭಾವಿಯಾದ ಅಗ್ನಿಕಾರ್ಯಗಳನ್ನು ಮಾಡಿ ಮೇಧಾಜನನವನ್ನು ಮಾಡಬೇಕು. ಅನು ಪ್ರವಚನೀಯಕ್ಕೆ ಪೂರ್ವಭಾವಿಯಾದ ಅಗ್ನಿಕಾರ್ಯವನ್ನು ಅನುಪ್ರವಚ ನೀಯ ಹೋಮವನ್ನು ಮಾಡಬೇಕಾಗಿಲ್ಲವೆಂದು ಧರ್ಮಸಿಂಧುಕಾರನ ಮತ. ಗಾಯತ್ರೀ ಉಪದೇಶ ಅನುಪ್ರವಚನೀಯ ಹೋಮ, ಮೇಧಾಜನನ-ಈ

ಮೂರು ಅಧ್ಯಯನಾಂಗವಾಗಿದ್ದು, ಸಮ ಪ್ರಧಾನವಾಗಿಯೂ ಇರುವುದ ರಿಂದ ಅಗ್ನಿಯೂ ಈ ಮೂರಕ್ಕೂ ಅಂಗವಾಗಿದೆ. ಗಾಯತ್ರ್ಯುಪದೇಶ, ತತ್ಪೂರ್ವದಲ್ಲಿ ಮಾಡುವ ಅಗ್ನಿಕಾರ್ಯಗಳಿಗೆ ಆ ವೃತ್ತಿಯು ಇಲ್ಲವೆಂಬುದು ಕೌಸ್ತುಭಕಾರನ ಮತದಂತೆ ಅನುಪ್ರವಚನೀಯ, ತತ್ಪೂರ್ವದ ಅಗ್ನಿ ಕಾರ್ಯಗಳಿಗೂ 'ಆವೃತ್ತಿಯಿಲ್ಲವೆಂಬುದೆ ಯುಕ್ತವೆಂಬುದು ಇವರ ಅಭಿ ಪ್ರಾಯ.

ಕೌಸ್ತುಭಕಾರನು ಹೇಳುವಂತೆ ಮಾಡಬೇಕಾಗಿಲ್ಲ. ಕೌಸ್ತುಭಮತ ಹೀಗಿದೆ – ಉಪನಯನಾಗ್ನಿಯು ಮೇಧಾಜನನಕ್ಕೆ ಮುಂಚೆ ಮಾಡಿದ ಅಗ್ನಿ ಕಾರ್ಯ ಮೊದಲೆ ನಷ್ಟವಾದರೆ ಪೂರ್ವೋತ್ತರ ತಂತ್ರಗಳಿಂದ ಉಪನಯನ ಆಹುತಿಗಳಿಂದ ಪುನಃ ಅಗ್ನಿಯನ್ನು ಉತ್ಪಾದಿಸಿ, ಅನುಪ್ರವಚನೀಯಕ್ಕೆ ಮುಂಚೆ ಮಾಡುವ ಅಗ್ನಿಕಾರ್ಯವನ್ನು ಮಾಡಿ, ನಂತರ ಅನುಪ್ರವಚನೀಯ ಹೋಮವನ್ನು ಮಾಡಿ, ಮೇಧಾಜನನಕ್ಕೆ ಮೊದಲು ಮಾಡುವ ಅಗ್ನಿ ಕಾರ್ಯಗಳನ್ನು ಮಾಡಿ ಮೇಧಾಜನನ ಮಾಡಬೇಕೆಂದು ಕೌಸ್ತುಭದಲ್ಲಿ ಹೇಳಿದೆ, “ನಷ್ಟಸ್ಯ ಉಪನಯನಾಗ್ನೇಃ ಪುನರುತ್ಪತ್ತಿವಿನಿಯೋಗಃ” ಎಂಬ ವಿಶೇಷವನ್ನು ಹೇಳಿರುವುದು.

ಸಾಯಂಕಾಲದಲ್ಲಿ, ಅಗ್ನಿಕಾರ್ಯಮಾಡಿ ಅನುಪ್ರವಚನೀಯ ಹೋಮ ವನ್ನು ಬ್ರಹ್ಮಚಾರಿಯೆ ಮಾಡಬೇಕು, ವಟುವಿಗೆ ಶಕ್ತಿಯಿಲ್ಲದಿದ್ದರೆ ಚರುಶ್ರಪ ಣಾಂತ ಕಾರ್ಯವನ್ನು ಆಚಾರ್ಯನು ಮಾಡಿ, ಹೋಮಮಾತ್ರ ವಟುವು ಮಾಡಬೇಕು, ಹೋಮ ಮಾಡಿ ಉಳಿದ ಚರುಶೇಷದಿಂದ ಮೂರುನಾಲ್ಕು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

## ವಟುವಿನ ನಿಯಮ

ಉಪನಯನವಾದ ಮೇಲೆ ಮೂರುದಿನ ಕಾರ ಉಪ್ಪು ಇರುವ ಕಟ್ಟು ಆಹಾರವನ್ನು ವರ್ಜಿಸಬೇಕು, ನೆಲದ ಮೇಲೆ ಮಲಗಬೇಕು. ನಾಲ್ಕನೆ ದಿನ

ಮೇಧಾಜನನವನ್ನು ಆಚರಿಸಬೇಕು. ಇದರ ವಿಧಿಯು ಪ್ರಯೋಗ ಪಾರಿಜಾತದಲ್ಲಿದೆ

## ಅಂಗವಿಕಲರಿಗೆ ಉಪನಯನ ಹೇಗೆ ಮಾಡಬೇಕು ?

ಷಂಡರು ಅಂಧರು ಕಿವುಡರು ಮೂಕರು ಕುಂಟ ಕುಬ್ಜರು ಇವರಿಗೂ ಸಂಸ್ಕಾರಮಾಡಬೇಕು. ಇದರಲ್ಲಿ ಆಚಾರ್ಯನು ಹೋಮಮಾಡಬೇಕು. ಇಂಥವರಿಗೆ ಆಚಾರ್ಯ ಸಮೀಪಕ್ಕೆ ಒಯ್ಯುವುದು, ಅಗ್ನಿಸಮೀಪಕ್ಕೆ ಒಯ್ಯುವುದೂ. ಗಾಯತ್ರಿಯನ್ನು ಹೇಳಿಸುವುದು, ಮುಖ್ಯ. ಮೂಕರಿಗೂ ಕಿವುಡರಿಗೂ ಗಾಯತ್ರಿ ಹೇಳಿಸಲು ಅಸಾಧ್ಯವಾದ್ದರಿಂದ ಇವರನ್ನು ಮುಟ್ಟಿಕೊಂಡು ಗಾಯತ್ರೀಜಪವನ್ನು ಮಾಡುವುದು, ಸಂಸ್ಕಾರಮಂತ್ರ ಪರಿಧಾನಮಂತ್ರಗಳನ್ನೆಲ್ಲಾ ಆಚಾರ್ಯನೇ ಹೇಳುವುದು. ಮತ್ತರಿಗೂ ಹುಚ್ಚರಿಗೂ ಈ ಸಂಸ್ಕಾರ ಮಾಡಬೇಕಾಗಿಲ್ಲ, ಕರ್ಮಾಧಿಕಾರವಿಲ್ಲವಾದ್ದರಿಂದ ಪಾತಿತ್ಯವಿಲ್ಲ, ಇವರ ಮಕ್ಕಳಿಗೆ ಮುಂದೆ ಸಂಸ್ಕಾರಮಾಡಬಹುದು, ಇದೇ ರೀತಿ ಅಂಗವಿಕಲರಿಗೆ ಮದುವೆಯಲ್ಲಿ ಕನ್ಯಾಸ್ವೀಕಾರವನ್ನು ಬಿಟ್ಟು ಉಳಿದದ್ದನ್ನು ಆಚಾರ್ಯನೆ ಮಾಡಬೇಕು.

**ಕಲಿಯುಗದಲ್ಲಿ ಔರಸ-ದತ್ತನೆಂಬ ಪುತ್ರರೇ ಮುಖ್ಯವಾದ್ದರಿಂದ ಇವರನ್ನು ಬಿಟ್ಟುಳಿದ ಕುಂಡ ಗೋಳಕಾದಿ ಪುತ್ರರಿಗೆ ಈ ಉಪನಯನಾದಿಗಳಿಲ್ಲ.** ಜ್ಯೇಷ್ಠನಿಗೆ ಚೌಲ, ಉಪನಯನಾಂತ ಸಂಸ್ಕಾರಗಳನ್ನು ಮಾಡದೆ ಕನಿಷ್ಠನಿಗೆ ಮಾಡಬಾರದು. ವಿವಾಹ ವಿಷಯದಲ್ಲಿ ಈ ನಿಯಮವಿಲ್ಲ.

## ಬ್ರಹ್ಮಚಾರಿ ಧರ್ಮಗಳು

1 ತ್ರಿಕಾಲದಲ್ಲೂ ಸಂಧ್ಯಾವಂದನೆ, ಅಗ್ನಿಕಾರ್ಯ, ಬೆಳಗ್ಗೆ ಸಾಯಂಕಾಲ. ಭಿಕ್ಷಾನ್ನ ಬ್ರಾಹ್ಮಣ ಗೃಹಗಳಲ್ಲಿ ( ಭವತಿ ಭಿಕ್ಷಾಂದೇಹಿ ಎಂದು ಕೇಳಬೇಕು ) ಗುರುಶುಶ್ರೂಷೆ, ವೇದಾಧ್ಯಯನ, ಹೊಸಉಪಾಕರ್ಮಕ್ಕೆ ಮುಂಚೆ

ಕೇವಲ ಗಾಯತ್ರಿಯಿಂದ ಬ್ರಹ್ಮಯಜ್ಞ. ಇದು ನಿತ್ಯಕರ್ಮ ಗುರುವು ಭೋಜನಮಾಡಿದ ಶಿಷ್ಟಾನ್ನವನ್ನು ಭುಂಜಿಸುವುದು.

2 ಹಗಲು ನಿದ್ರೆ - ಕಾಡಿಗೆ ಹಚ್ಚಿಕೊಳ್ಳುವುದು, ಚಪ್ಪಲಿ, ಛತ್ರಿ, ಮಂಚದ ಮೇಲೆ ಮಲಗುವುದು ಇವುಗಳನ್ನು ವರ್ಜಿಸಬೇಕು.

3 ತಾಂಬೂಲ, ಅಭ್ಯಂಜನ, ಕಂಚಿನ ಪಾತ್ರದಲ್ಲಿ ಭೋಜನ. ಇವುಗಳನ್ನು ಬ್ರಹ್ಮಚಾರಿಯೂ ಯತಿಯೂ ವಿಧವೆಯೂ ಬಿಡಬೇಕು.

4 ಮದ್ಯ, ಮಾಂಸ, ಸೂತಕಾನ್ನ ಮುಂತಾದ ನಿಷಿದ್ಧ ಆಹಾರಗಳನ್ನು ವರ್ಜಿಸಬೇಕು.

5 ಮೇಖಲೆ, ಅಜಿನ, ದಂಡ, ಉಪವೀತ, ಕೌಪೀನ, ಕಟಿಸೂತ್ರ, ಬ್ರಹ್ಮಚಾರಿಯು ನಿತ್ಯವೂ ಧರಿಸಬೇಕು, ಉಪವೀತಾದಿಗಳು ಕಡಿದುಹೋದರೆ ನೀರಿನಲ್ಲಿ ಹಾಕಿ ಹೊಸದಾಗಿ ಮಂತ್ರವತ್ತಾಗಿ ಪುನಃ ಧರಿಸಬೇಕು, ಯಜ್ಞೋಪವೀತವು ಕಳೆದುಹೋದರೆ 'ಅಗ್ನೇವ್ರತಪತೇ ವ್ರತಂ ಚರಿಷ್ಯಾಮಿ" ಇತ್ಯಾದಿ ನಾಲ್ಕು ಮಂತ್ರಗಳಿಂದ ಮನೋಜ್ಯೋತಿರ್ಜುಷತಾಂ ಎಂಬಮಂತ್ರದಿಂದಲೂ ಆಜ್ಯಾಹುತಿಗಳನ್ನು ಕೊಡಬೇಕು, ಇವೇ ಪ್ರಾಯಶ್ಚಿತ್ತ. ಬ್ರಹ್ಮಚಾರಿಯ ವ್ರತಲೋಪವಾದರೆ ಸಂಧ್ಯಾ-ಅಗ್ನಿಕಾರ್ಯ ಲೋಪವಾದರೆ ಅಷ್ಟ ಸಹಸ್ರ ಗಾಯತ್ರೀಜಪ ಮಾಡಬೇಕು, ಇದು ಅನೇಕಸಲ ಲೋಪವಾದರೆ, ಒಂದೆರಡು ಸಲ ಲೋಪವಾದರೆ ' ಮಾನಸ್ತೋಕೇ ' ಎಂಬ ಮಂತ್ರವನ್ನು ಜಪಿಸುವುದು (೧೦೮ ಸಲ). ಇದನ್ನೇ ಪುನಃ ಪುನಃ ಬಿಟ್ಟರೆ ಎರಡರಷ್ಟು ಜಪಮಾಡಬೇಕು. ಮದ್ಯ ಮಾಂಸಾದಿಗಳನ್ನು ಭುಂಜಿಸಿದರೆ ಪುನಃ ಸಂಸ್ಕಾರ. ಹೀಗೆಯೇ ಒಂದು, ಎರಡು ವ್ರತಗಳ (ನಿಯಮಗಳ) ಲೋಪವಾದರೆ ತಂವ್ರೋಧಿಯಾ ಎಂಬ ಮಂತ್ರವನ್ನು ಶಿವಾಲಯದಲ್ಲಿ ಒಂದು ಲಕ್ಷ ಜಪಿಸಬೇಕು, ಸ್ವಧರ್ಮಗಳಲ್ಲಿ ಏನಾದರೂ ನ್ಯೂನತೆಕಂಡರೆ ಇದರಿಂದ ಪೂರ್ಣವಾಗುವುದೆಂದು ಋಗ್ವಿಧಾನದಲ್ಲಿ ಹೇಳಿದೆ.

ತಂಪ್ರೋಧಿಯಾ ಜಪೇನ್ಮಂತ್ರಂ ಲಕ್ಷಂಚೈವ ಶಿವಾಲಯೇ ।
ಬ್ರಹ್ಮಚಾರೀ ಸ್ವಧರ್ಮೇಷು ನ್ಯೂನಂಚೇತ್ ಪೂರ್ಣಮೇತಿ ತತ್ ॥

ಋಗ್ವಿಧಾನ — ಉಪಾಕರ್ಮವಾದ ಮೇಲೆ ವಿದ್ಯಾರಂಭ ಕಾಲದಲ್ಲಿ ಹೇಳಿದಂತೆ ವಿಷ್ಣು ಮುಂತಾದ ಪೂಜಾಕ್ರಮದಂತೆ ವೇದಾರಂಭ ಮಾಡುವುದು. (ಸ್ತ್ರೀಯರಿಗೆ ಉಪನಯನ ವೇದಾಧ್ಯಯನ ಎರಡೂ ಕಲಿಯುಗದಲ್ಲಿ ವರ್ಜ್ಯ). ವೇದಾರಂಭಕಾಲದಲ್ಲೂ ಸಮಾಪ್ತಿಕಾಲದಲ್ಲೂ ಗುರುವಿನ ಪಾದಗಳಿಗೆ ನಮಸ್ಕರಿಸಬೇಕು (ಅಭಿವಾದನೆಮಾಡಬೇಕು). ವೇದಾರಂಭ ಸಮಾಪ್ತಿಗಳಲ್ಲಿ ಪ್ರಣವವನ್ನು ಉಚ್ಚರಿಸಿ ಭೂಮಿಯನ್ನು ಮುಟ್ಟಿ ನಿಲ್ಲಿಸಬೇಕು.

## ಕಲಿಯುಗಕ್ಕೆ ಹೇಳಿದ ಅನಧ್ಯಾಯಗಳು

1 ಎರಡು ಪಾಡ್ಯಗಳು, ಎರಡು ಅಷ್ಟಮಿ, ಎರಡು ಚತುರ್ದಶಿ, ಹುಣ್ಣಿಮೆ, ಅಮಾವಾಸ್ಯೆ ಅಯನ ಸಂಕ್ರಾಂತಿಗಳೆರಡು, ಇಷ್ಟೆ ಅನಧ್ಯಾಯಗಳು, ಮತ್ತು ಗ್ರಹಣದಿನಗಳು ಇಷ್ಟುದಿನಗಳನ್ನು ಬಿಟ್ಟು ವೇದ ಶಾಸ್ತ್ರಗಳನ್ನು ಅಧ್ಯಯನ ಮಾಡಬೇಕು.

2 ಹಿಂದಿನ ದಿನ ಸಾಯಂಕಾಲ ಮರುದಿನ ಬೆಳಿಗ್ಗೆ ತ್ರಿಮುಹೂರ್ತ ಅನಧ್ಯಾಯ ತಿಥಿಯಿದ್ದರೂ, ಉದಯ, ಅಸ್ತಗಳಲ್ಲಿದ್ದರೂ ಅನಧ್ಯಾಯವೆಂದು ತಿಳಿಯಬೇಕು. ಪ್ರದೋಷವಿರುವ ಕಾಲ, ಚೌತಿ, ಸಪ್ತಮಿ, ತ್ರಯೋದಶಿ ಮುಂತಾದ ಕಾಲದಲ್ಲಿ ಪ್ರದೋಷ ಬಂದಾಗ ವೇದವನ್ನು ಪಠಿಸಬಾರದು, ಅಧ್ಯಯನ ಮಾಡಬಾರದು.

3 ಈ ಅನಧ್ಯಾಯಗಳು ಅಂಗಾಧ್ಯಯನಕ್ಕೂ ಇತಿಹಾಸ ಪುರಾಣ ಪಠನಕ್ಕೂ ಧರ್ಮಶಾಸ್ತ್ರಾಧ್ಯಯನಕ್ಕೂ ಇರುವುದಿಲ್ಲ. ಆದರೆ ಪರ್ವಕಾಲದಲ್ಲಿ ವರ್ಜಿಸಬೇಕು.

4 ನಿತ್ಯಜಪ ಕಾಮ್ಯವ್ರತ, ಯಾಗ, ಪಾರಾಯಣಾದಿಗಳಲ್ಲಿ ಅನಧ್ಯಾಯವಿಲ್ಲ.

ನಿತ್ಯೇ ಜಪೇಚ ಕಾಮ್ಯೇಚ ಕ್ರತೌ ಪಾರಾಯಣೇಽಪಿಚ ।
ನಾನಧ್ಯಾಯೋಽಸ್ತಿ ವೇದಾನಾಂ ಗ್ರಹಣೇ ಗ್ರಾಹಣೇ ಸ್ಮೃತಃ ॥

## ವೇದಾಧ್ಯಯನದ ಧರ್ಮಗಳು

ವೇದಾರಂಭದಲ್ಲಿ ಗುರುವಿಗೆ ಅಭಿವಾದನೆ ಮಾಡಿ ಮೊದಲು ಪ್ರಣವವನ್ನು ಉಚ್ಚರಿಸಿ ವೇದವನ್ನು ಅಧ್ಯಯನಮಾಡಿ ಕೊನೆಯಲ್ಲಿ ಪ್ರಣವವನ್ನು ಉಚ್ಚರಿಸಿ ಭೂಮಿಯನ್ನು ಮುಟ್ಟಿ ನಿಲ್ಲಿಸಬೇಕು. ರಾತ್ರಿಯ ಮೊದಲನೆ ಯಾಮದಲ್ಲೂ ಕೊನೆಯಾಮದಲ್ಲೂ ವೇದಾಧ್ಯಯನ ಮಾಡಬೇಕು. ನಡುವೆ ಎರಡು ಯಾಮವಾತ್ರ ಮಲಗಬೇಕು. ಮಾತಾ ಪಿತೃಗಳಂತೆ ಗುರುವನ್ನು ಕಾಣಬೇಕು. ಎಂದಿಗೂ ದ್ರೋಹ ಮಾಡಬಾರದು.

## ಸಂಧ್ಯಾವಂದನೆಯು ಲೋಪವಾದಾಗ ಪ್ರಾಯಶ್ಚಿತ್ತವಿದು.

1 ಮೂರು ಸಂಧ್ಯಾಕಾಲವೂ ಮೀರಿಹೋದರೆ ಪ್ರಾಯಶ್ಚಿತ್ತಕ್ಕಾಗಿ ಒಂದು ಅರ್ಘ್ಯವನ್ನು ಹೆಚ್ಚಾಗಿ ಕೊಟ್ಟು ರಾತ್ರಿಯಲ್ಲಿ ಒಂದನೆ ಯಾಮದ ಪರ್ಯಂತ ಹಗಲು ಹೇಳಿದ ಕರ್ಮಗಳನ್ನು ಮಾಡಬೇಕು, ಬ್ರಹ್ಮಯಜ್ಞವನ್ನೂ ಸೌರಮಂತ್ರವನ್ನೂ ರಾತ್ರಿ ವರ್ಜಿಸಬೇಕು.

2 ಸರ್ವಥಾ ಸಂಧ್ಯಾಲೋಪವಾದರೆ ಪ್ರತಿ ಸಂಖ್ಯೆಗೂ ಒಂದು ಉಪವಾಸ, ಹತ್ತುಸಾವಿರ ಗಾಯತ್ರೀ ಜಪ ಅಥವಾ (೧ ಸಹಸ್ರ ಮೇಲೆ ೮) ಒಂದುಸಾವಿರದ ಎಂಟು ಗಾಯತ್ರೀ ಜಪ ಮಾಡಬೇಕು. ಬಹಳ ಅಶಕ್ತನಾದರೆ ೧೦೮ ಗಾಯತ್ರೀ ಜಪ ಮಾಡಬೇಕು. ಮೂರುದಿನ ಎರಡು ದಿನಗಳು ಸಂಧ್ಯಾವಂದನೆ ಲುಪ್ತವಾದರೆ ಜಪಸಂಖ್ಯೆಯನ್ನು ಹೆಚ್ಚಿಸಬೇಕು. ಅನಂತರವೂ

ಲೋಪವಾದರೆ ಕೃಚ್ಛ್ರಾಚರಣೆ ಪ್ರತಿನಿಧಿಯಾಗಿ ಯಥಾಶಕ್ತಿ ದಕ್ಷಿಣಾದಾನ ವನ್ನು ಮಾಡಬೇಕು.

ಸಂಧ್ಯಾಮುಪಾಸತೇ ಯೇತೇ ನಿಷ್ಪಾಪಾ ಬ್ರಹ್ಮಲೋಕಗಾಃ ।
ಅನ್ಯಕರ್ಮ ಫಲಂ ನಾಸ್ತಿ, ಸಂಧ್ಯಾಹೀನೇsಶುಚಿತ್ವತಃ ॥
ಜೀವಮಾನೋಭವೇಚ್ಛೂದ್ರಃ ಮೃತೇಶ್ವಾ ಜಾಯತೇ ಧ್ರುವಮ್ ।

ಎಂಬ ರೀತಿಯಲ್ಲಿ ಸಂಧ್ಯಾವಂದನೆ ಫಲ ಪಾಪನಿವೃತ್ತಿಯಾಗಿಬ್ರಹ್ಮ ಲೋಕವೇ ಲಭಿಸುವುದೆಂದೂ ಸಂಧ್ಯಾವಂದನೆಯನ್ನು ಬಿಟ್ಟರೆ ಅಶುಚಿತ್ವ ವಿರುವುದರಿಂದ ಬೇರೆ ಕರ್ಮಗಳ ಫಲವೂ ಸಿಗುವುದಿಲ್ಲವೆಂದೂ ಸ್ಪಷ್ಟ ಪಡಿಸಿದೆ.

## ಬ್ರಹ್ಮಯಜ್ಞ

ಬ್ರಹ್ಮಯಜ್ಞವನ್ನು ಬೆಳಿಗ್ಗೆ ಔಪಾಸನಹೋಮವಾದ ಮೇಲೆ, ಅಥವಾ ಮಾಧ್ಯಾಹ್ನಿಕ ಮಾಡಿದನಂತರವಾಗಲಿ, ವೈಶ್ವದೇವವಾದ ನಂತರವಾಗಲಿ ಮಾಡಬೇಕು, **ಆಶ್ವಲಾಯನರು ಮಾತ್ರ** ಮಾಧ್ಯಾಹ್ನಿಕ ಮಾಡಿದ ಮೇಲೆ ಮಾಡಬೇಕೆಂದು ಗೃಹ್ಯಸೂತ್ರದಲ್ಲಿ ಹೇಳಿದೆ, ಬ್ರಹ್ಮಯಜ್ಞವನ್ನೆ ಬ್ರಹ್ಮಚಾರಿ ಗಳೂ ಮಾಡಬೇಕು. ಅನೇಕರು ಕರ್ನಾಟಕದಲ್ಲಿ ಬ್ರಹ್ಮಚಾರಿಗಳು ಇದನ್ನು ಆಚರಿಸುವುದಿಲ್ಲ, ಬಿಟ್ಟಿದ್ದು ಸರಿಯಲ್ಲ. ಇದು ನಿತ್ಯಕರ್ಮ, ಬಿಡುವಂತಹು ದಲ್ಲ. ಬ್ರಹ್ಮಯಜ್ಞವನ್ನು ಮಾಡಿದ ನಂತರವೇ ದೇವಋಷಿ ಪಿತೃತರ್ಪಣ ಗಳನ್ನು ಮಾಡಬೇಕು.

ಬ್ರಹ್ಮಯಜ್ಞ ಮಾಡುವ ವಿಧಾನ– 2 ಆಚಮನ, ಪ್ರಾಣಾಯಾಮ ಸಂಕಲ್ಪ ಮಾಡಬೇಕು. " ಮಮೋಪಾತ್ತ ದುರಿತಕ್ಷಯದ್ವಾರಾ ಶ್ರೀಪರ ಮೇಶ್ವರ ಪ್ರೀತ್ಯರ್ಥಂ ಬ್ರಹ್ಮಯಜ್ಞೇನ ಯಕ್ಷ್ಯೇ, ತದಂಗತಯಾ ದೇವರ್ಷಿ ಆಚಾರ್ಯ ಪಿತೃತರ್ಪಣಂ ಚ ಕರಿಷ್ಯೇ, ಎಂದು ಸಂಕಲ್ಪ ಮಾಡಬೇಕು. ಜೀವತ್‌ಪಿತೃಕರು ಪಿತೃತರ್ಪಣ ಸಂಕಲ್ಪಮಾಡಬಾರದು. ದರ್ಭಾಸನದಲ್ಲಿ

ಕುಳಿತು ದರ್ಭೆಗಳನ್ನು ಕೈಯಲ್ಲಿ ಧರಿಸಿ ಪೂರ್ವಮುಖವಾಗಿ ಎಡದ ಮಣ ಕಾಲಮೇಲೆ ಬಲ ಮಣಕಾಲನ್ನು ಇರಿಸಿ ಎಡ ಕೈಮೇಲೆ ಬಲಗೈಯನ್ನು ಪೂರ್ವಮುಖಕ್ಕೆ ಬೆರಳು ಬರುವಂತೆ ಮಾಡಿಕೊಂಡು ಬಲಮಣಕಾಲುಗೆಣ್ಣಿನ ಮೇಲೆ ಇರಿಸಿಕೊಂಡು, ಎರಡು ಪವಿತ್ರಗಳನ್ನು ಧರಿಸಿ, ಏಕದೃಷ್ಟಿಯಿಂದ ಓಂಕಾರಪೂರ್ವಕ ವ್ಯಾಹೃತಿಗಳನ್ನು ಹೇಳಿ ಗಾಯತ್ರಿಯನ್ನು ಪಾದಪಾದ ವಾಗಿ ಹೇಳಿ ಅರ್ಧ ಋಕ್ಕಾಗಿಯೂ ಪುನಃ ಹೇಳಿ ಅನಂತರ ಒಟ್ಟುಸೇರಿಸಿ ಹೇಳಬೇಕು. ಅನಂತರ ಓಂ ಅಗ್ನಿಮೀಳೆ - ಎಂದು ಸೂಕ್ತವನ್ನು ಪಠಿಸಿ, ಸಂಹಿತೆ ಬ್ರಾಹ್ಮಣ ಷಡಂಗಗಳನ್ನು ಹೇಳಬೇಕು. ಅಧ್ಯಾಯ, ಅಥವಾ ಸೂಕ್ತ, ಅಥವಾ ಒಂದು ಋಕ್ಕನ್ನಾದರೂ ಯಥಾಶಕ್ತಿ ಪಠಿಸಬೇಕು. ಮೊದಲನೆ ದಿನ ಎಲ್ಲಿಗೆ ಸಂಹಿತೆ ನಿಲ್ಲಿಸಿದ್ದನೋ ಮರುದಿನ ಅದರ ಮುಂದಕ್ಕೆ ಪಠಿಸಬೇಕು. ಹೀಗೆಯೇ ಮುಂದುವರಿಸಬೇಕು,

ಶಾಖಾಧ್ಯಯನವಾಗದಿದ್ದರೆ ಸೂಕ್ತವನ್ನೂ, ಋಕ್ಕನ್ನೂ. ಪಠಿಸಿ ಒಂದು ಯಜುರ್ಮಂತ್ರ, ಸಾಮಮಂತ್ರ, ಉಪನಿಷತ್ತು, ಇತಿಹಾಸ ಪುರಾಣಾದಿಗಳನ್ನು ಪಠಿಸಬೇಕು. ಇದಾದನಂತರ ಓಂನಮೋಬ್ರಹ್ಮಣೆ ಎಂಬ ಮಂತ್ರವನ್ನು ಮೂರುಸಲ ಕೊನೆಯಲ್ಲಿ ಪಠಿಸಬೇಕು. ಅನಂತರ ದೇವರ್ಷಿ ಪಿತೃತರ್ಪಣ ಮಾಡಬೇಕು. (ಬ್ರಹ್ಮಯಜ್ಞ ದೇವರ್ಷಿ ಪಿತೃತರ್ಪಣ ಕ್ರಮ ವನ್ನು ಪ್ರಯೋಗಗ್ರಂಥದಲ್ಲಿರುವಂತೆ ನೋಡಿ ಮಾಡಬೇಕು). ಈ ತರ್ಪಣವು ಋಗ್ವೇದಿಗಳಿಗೆ ಆಶ್ವಲಾಯನರಿಗೆ ಬ್ರಹ್ಮಯಜ್ಞಕ್ಕೆ ಅಂಗವಾಗಿದೆ. ತೈತ್ತಿರೀಯಶಾಖೆಯವರಿಗೆ ಅದರ ಅಂಗವಿಲ್ಲ. ಅದರಿಂದ ಬ್ರಹ್ಮಯಜ್ಞಕ್ಕೆ ಮೊದಲೂ ಆಮೇಲೂ ಯಾವಾಗಲಾದರೂ ಮಾಡಬಹುದು. ಇದರಂತೆ ಕಾಣ್ವಶಾಖೆ ಮಾಧ್ಯಂದಿನ ಶಾಖೆಯವರಿಗೂ ಬ್ರಹ್ಮಯಜ್ಞಾಂಗವಿಲ್ಲ,

## ತರ್ಪಣ ವಿಚಾರ

1 ಸಂಬಂಧಂ ಪ್ರಥಮಂ ಬ್ರೂಯಾತ್ ನಾಮ ಗೋತ್ರಮನಂತ ರಮ್, ಪಶ್ಚಾದ್ರೂಪಂ ವಿಜಾನೀಯಾತ್ ಕ್ರಮ ಏಷ ಸನಾತನಃ ॥

ಎಂದು ಹೇಳಿದಂತೆ ಸಂಬಂಧ ಮೊದಲು, ನಂತರ ಹೆಸರು, ನಂತರ ಗೋತ್ರ ರೂಪ ಈ ಕ್ರಮವಾಗಿ ತರ್ಪಣದಲ್ಲಿ ಹೇಳಬೇಕು, ಉದಾ : ಅಸ್ಮತ್‌ಪಿತರಂ ವಿಷ್ಣು ಶರ್ಮಾಣಂ, ಭಾರದ್ವಾಜ ಗೋತ್ರಂ, ವಸುರೂಪಮ್ ಇದೇರೀತಿ ಯಾಗಿ ಮುಂದೆ ಹೇಳಬೇಕು.

2 ಒಂದೊಂದು ಅಂಜಲಿ, ದೇವತೆಗಳಿಗೆ, ಎರಡೆರಡು ಋಷಿಗಳಿಗೆ, ಪಿತೃಗಳಿಗೆ ಮೂರು ಮೂರು ಅಂಜಲಿ ತರ್ಪಣ ಮಾಡಬೇಕು. ಅಶ್ವಲಾಯು ನರಿಗೆ ಈ ಸಂಖ್ಯೆಯನ್ನು ಸೂತ್ರದಲ್ಲಿ ಹೇಳಿಲ್ಲವಾದ್ದರಿಂದ ಹೀಗೆಯೇ ಮಾಡ ಬೇಕೆಂಬ ನಿಯಮವಿಲ್ಲ. 'ಯೇಷಾಂಸೂತ್ರೇ ಸಂಖ್ಯೋಕ್ತಿಃ ಸ್ತೇಷಾಂ ನಿತ್ಯಮಿತಿ' ಮಾಧವಮತವು. ಮಾತೃ ಪಿತಾಮಹೀ, ಪ್ರಪಿತಾಮಹೀ ಈ ಮೂರು ಜನ ಬಿಟ್ಟುಉಳಿದ ಸ್ತ್ರೀಯರಿಗೆ ಒಂದೇ ಅಂಜಲಿದಾನವು.

### ಮತ್ತೊಂದು ಕ್ರಮವೂ ಇದೆ

ಆದೌಪಿತಾ ತತೋಮಾತಾ ಸಪತ್ನೀ ಜನನೀ ತಥಾ
ಮಾತಮಹಾಃ ಸಪತ್ನೀಕಾಃ ಹ್ಯಾತ್ಮಪತ್ನೀ ತತಃ ಪರಂ ।
ಸುತಭ್ರಾತೃ ಪಿತೃವ್ಯಾಶ್ಚ ಮಾತುಲಾಶ್ಚ ಸಭಾರ್ಯಕಾಃ ।
ದುಹಿತಾ ಭಗಿನೀಚೈವ ದೌಹಿತ್ರೋ ಭಾಗಿನೇಯಕಃ ॥
ಸ್ಯಾಲಕೋ ಭಾವುಕಶ್ಚೈವ ಶ್ವಶುರೋ ಗುರು ಋತ್ವಿಜೌ ।
ಏತೇ ಸ್ಯುಃ ಪಿತರಸ್ತೀರ್ಥೇ ತರ್ಪಣೇಚ ಮಹಾಲಯೇ ॥

ಎಂದು ಹೇಳಿದಂತೆ ಈ ಸರ್ವಪಿತೃಗಳಿಗೂ ತೀರ್ಥಕ್ಷೇತ್ರಗಳಿಗೆ ಹೋದಾಗ ಅಲ್ಲಿ ತರ್ಪಣಾದಿಗಳನ್ನು ಮಾಡುವಾಗಲೂ, ಮಹಾಲಯದಲ್ಲೂ ಸಹ ವಿನಿ ಯೋಗವಿದೆ. ಬ್ರಹ್ಮಯಜ್ಞಾಂಗ ತರ್ಪಣದಲ್ಲೂ ಮೃತ ಪಿತೃಕನಿಗೆ ಅಧಿಕಾರ, (ಜೀವತ್‌ಪಿತೃಕನಿಗೆ ಇದರಲ್ಲಿ ಅಧಿಕಾರವಿರುವುದಿಲ್ಲ).

# ಪಿತೃತರ್ಪಣ ಕ್ರಮ

1 ಅಸ್ಮತ್ ಪಿತರಂ - ಶರ್ಮಾಣಂ - ಗೋತ್ರಂ ವಸುರೂಪಂ (3 ಸಲ) ಸ್ವಧಾನಮಸ್ತರ್ಪಯಾಮಿ

2 ಅಸ್ಮತ್ಪಿತಾಮಹಂ " ... " ರುದ್ರರೂಪಂ ಸ್ವಧಾ ಮಿ

3 ಅಸ್ಮತ್ ಪ್ರಪಿತಾಮಹಂ ... ಆದಿತ್ಯರೂಪಂ ಸ್ವಧಾ .... ಮಿ

1 ಅಸ್ಮರ್‍ ಮಾತರಂ ದೇವೀದಾ, ಗೋತ್ರಾಂ ವಸುರೂಪಾಂ

2 ಅಸ್ಮತ್ ಪಿತಾಮಹೀಂ .. ದೇವೀದಾಂ, ಗೋತ್ರಾಂ ರುದ್ರ ರೂಪಾಂ .. ಸ್ವಧಾ ಮಿ

3 ಅಸ್ಮತ್ ಪ್ರಪಿತಾಮಹೀಂ ... ದೇವೀದಾಂ ಆದಿತ್ಯರೂಪಾಂ

1 ಅಸ್ಮತ್ ಸಪತ್ನಮಾತರಂ .. ದೇವೀದಾಂ ಗೋತ್ರಾಂ ವಸು ರೂಪಾಂ ಸ್ವಧಾ ... ಮಿ

1 ಅಸ್ಮನ್ಮಾತಾಮಹಂ ಶರ್ಮಾಣಂ ಗೋತ್ರಂ .... ವಸುರೂಪಂ ಸಪತ್ನೀಕಂ ಸ್ವಧಾ ಮಿ

2 ಅಸ್ಮನ್ಮಾತುಃ ಪಿತಾಮಹಂ ಶರ್ಮಾಣಂ ಗೋತ್ರಂ. ... ರುದ್ರರೂಪಂ · ಸ್ವಧಾ ಮಿ

3 ಅಸ್ಮನ್ಮಾತುಃ ಪ್ರಪಿತಾಮಹಂ ... ಶರ್ಮಾಣಂ ... ಗೊತ್ರಂ ಆದಿತ್ಯ . ರೂಪಂ .... ಸ್ವಧಾ ... ಮಿ

1 ಪತ್ನೀಂ .... ದೇವೀದಾಂ, .. ವಸುರೂಪಾಂ .... ಸ್ವಧಾನಮಸ್ತರ್ಪ ಯಾಮಿ .. ಸ್ವಧಾ ಮಿ

2 ಅಸ್ಮತ್ ಸುತಂ ಶರ್ಮಾಣಂ ಗೋತ್ರಂ ವಸುರೂಪಂ ... ಸ್ವಧಾ ... ತರ್ಪಯಾಮಿ

3 ಅಸ್ಮದ್ದುಹಿತರಂ ದೇವೀದಾಂ, ಗೋತ್ರಾಂ, ವಸುರೂಪಾಂ

4 ಅಸ್ಮತ್ಪಿತೃವ್ಯಂ ... ಶರ್ಮಾಣಂ, ಗೋತ್ರಂ, ವಸುರೂಪಂ
ಸಪತ್ನೀಕಂ (ಸಸುತಂ) ಸ್ವಧಾ ಮಿ

5 ಅಸ್ಮತ್ ಮಾತುಲಂ ಶರ್ಮಾಣಂ, ಗೋತ್ರಂ, ವಸುರೂಪಂ

6 ಅಸ್ಮತ್ಸಹೋದರಂ ಶರ್ಮಾಣಂ, ಗೋತ್ರಂ, ವಸುರೂಪಂ

7 ಅಸ್ಮತ್ ಪಿತೃಭಗಿನೀಂ ದೇವೀದಾಂ, ಗೋತ್ರಾಂ, ವಸುರೂಪಾಂ
ಸಭರ್ತೃಕಾಂ ಸಸುತಾಂ ಸ್ವಧಾ ಮಿ

8 ಆಸ್ಮತ್ ಮಾತೃಭಗಿನೀಂ .... ದೇವೀದಾಂ, ಗೋತ್ರಾಂ ವಸು
ರೂಪಾಂ .. ಸ್ವಧಾ ... ಮಿ

9 ಆತ್ಮಭಗಿನೀಂ ದೇವೀದಾಂ, ಗೋತ್ರಾಂ, ವಸುರೂಪಾಂ

10 ಆಸ್ಮತ್ ಶ್ವಶುರಂ, .... ಶರ್ಮಾಣಂ, ... ಗೋತ್ರಂ, ವಸು
ರೂಪಂ ಸಪತ್ನೀಕಂ ಸ್ವಧಾ ಮಿ

11 ಅಸ್ಮದ್ಗುರುಂ, ... ಶರ್ಮಾಣಂ, ಗೋತ್ರಂ, ವಸುರೂಪಂ

12 ಶಿಷ್ಯಂ ಶರ್ಮಾಣಂ ಗೋತ್ರಂ, ವಸುರೂಪಂ ಸ್ವಧಾ

13 ಆಪ್ತಂ .... ಶರ್ಮಾಣಂ ಗೋತ್ರಂ, ವಸುರೂಪಂ ಸ್ವಧಾ

1 ಇಷ್ಟು ವಿಸ್ತಾರವಾಗಿ ನಿತ್ಯತರ್ಪಣ ಮಾಡಲು ಸಾಧ್ಯವಿಲ್ಲದೆ ಇದ್ದರೆ ಸಂಕ್ಷೇಪ ವಾಗಿ ಮಾಡುವ ವಿಧಿ

ಆ ಬ್ರಹ್ಮಸ್ತಂಬಪರ್ಯನ್ತಂ ದೇವರ್ಷಿ ಪಿತೃ ಮಾನವಾಃ ।
ತೃಪ್ಯನ್ತು ಪಿತರಃ ಸರ್ವೇ ಮಾತೃಮಾತಾ ಮಹಾದಯಃ ॥
ಅತೀತ ಕುಲಕೋಟೀನಾಂ ಸಪ್ತದ್ವೀಪ ನಿವಾಸಿನಾಂ ।
ಆ ಬ್ರಹ್ಮಭುವನಾಲ್ಲೋಕಾದಿದಮಸ್ತು ತಿಲೋದಕಮ್ ॥

ಎಂದು ಮೂರು ಮೂರು ಸಲ ಅಂಜಲಿ ದಾನ ಮಾಡಬೇಕು.

ಇತ್ಯಾದಿ ವಚನಗಳು (ಧರ್ಮಪ್ರವೃತ್ತಿಯಲ್ಲಿ) ಇವೆ. ಮನೆಯನ್ನು ಬಿಟ್ಟು ಅಂಗಳದಲ್ಲಿ ತುಲಸಿಕಟ್ಟೆ ಹತ್ತಿರ ಮಾಡುವ ಸಂಪ್ರದಾಯವಿದೆ.

2 **ಮುಂದಿನದು ಗೃಹದ ಹೊರಗೆ ನದೀತೀರದಲ್ಲಿ** — ಮಾತ್ರ (ಗೃಹದಲ್ಲಿ ನಿಷಿದ್ಧ).

ಯೇಕೇಚಾಸ್ಮತ್‌ಕುಲೇ ಜಾತಾ ಅಪುತ್ರಾ ಗೋತ್ರಿಣೋಮೃತಾಃ ।
ತೇ ಗೃಹ್ಣನ್ತು ಮಯಾದತ್ತಂ ವಸ್ತ್ರ ನಿಷ್ಪೀಡನೋದಕಮ್ ॥

ಎಂದು ಹೊದ್ದವಸ್ತ್ರವನ್ನು ಭೂಮಿಯಲ್ಲಿ ಹಿಂಡಿ ಕೊಡಬೇಕು. ಋಗ್ವೇದಿಗಳಿಗೆ ಪ್ರಾಚೀನಾವೀತದಲ್ಲಿ ಬೇರೆಯವರಿಗೆ ನಿವೀತದಲ್ಲಿ.

3 **ಗೃಹದಲ್ಲಿ ತಿಲತರ್ಪಣ ನಿಷಿದ್ಧ.** ಭಾನುವಾರ, ಶುಕ್ರವಾರ, ನಂದಾತಿಥಿ. ಕೃತ್ತಿಕೆ, ಮಘೆ, ಭರಣಿ ನಕ್ಷತ್ರಗಳಲ್ಲೂ ಮನ್ವಾದಿ ಯುಗಾದಿ ದಿನಗಳಲ್ಲೂ ನಿಷಿದ್ಧ.

ಪಿಂಡದಾನಂ ಮೃದಾಸ್ನಾನಂ ನ-ಕುರ್ಯಾತ್ತಿಲತರ್ಪಣಂ ।
ಪಿತ್ರೋಃ ಶ್ರಾದ್ಧದಿನೇ ನಿತ್ಯತರ್ಪಣೇ ತಿಲಾ ನಿಷಿದ್ಧಾಃ ॥

4 ಪರ್ವದಿನಗಳಲ್ಲಿ ಮಾತ್ರ, ನಿಷಿದ್ಧತಿಥಿವಾರಾದಿಗಳಾದರೂ ತಿಲತರ್ಪಣ ಮಾಡಬೇಕು. ಹಾಗೂ ಅಪರಪಕ್ಷ, ವ್ಯತೀಪಾತ, ಸಂಕ್ರಾಂತಿ, ತೀರ್ಥಕ್ಷೇತ್ರ, ಪರ್ವತಿಥಿಗಳಲ್ಲೂ ನಿಷದ್ಧತಿಥಿವಾರಾದಿಗಳಾದರೂ ತಿಲತರ್ಪಣ ಮಾಡಬೇಕು. ನದಿಯಲ್ಲೂ, ತೀರ್ಥಗಳಲ್ಲೂ, ಪ್ರೇತಕಾರ್ಯದಲ್ಲೂ ವಿವಾಹವಾದವನೂ ಸಹ ತಿಲತರ್ಪಣ ಮಾಡಬಹುದು. ಗ್ರಹಣಕಾಲದಲ್ಲೂ, ಗಂಗಾನದಿಯಲ್ಲೂ ತಿಲತರ್ಪಣ ಮಾಡಬಹುದು.

ಉಪರಾಗೇ ವ್ಯತೀಪಾತೇ ಗಂಗಾಯಾ ಮಥಪರ್ವಣಿ ।
ನಿಷಿದ್ಧೇಽಪಿ ದಿನೇ ಕುರ್ಯಾತ್ ಪಿಂಡದಾನಂ ತಿಲೋದಕಮ್ ॥
ಕೃತೋದ್ವಾಹೋಽಪಿ ಕುರ್ವೀತ ತರ್ಪಣಂ ತಿಲಸಂಯುತಮ್ ॥

5 ವಿವಾಹವಾಗಿ ಒಂದುವರ್ಷ, ಉಪನಯನವಾಗಿ ಆರು ತಿಂಗಳೂ, ಚೌಲವಾಗಿ ೩ ತಿಂಗಳೂ ತಿಲತರ್ಪಣವು ನಿಷಿದ್ಧವಾಗಿದೆ, ಅಲ್ಲದೆ ಸಪ್ತಮಿ ಭಾನುವಾರ ಶುಕ್ರವಾರ ಜನ್ಮನಕ್ಷತ್ರದಿನ, ಗೃಹದಲ್ಲಿ ತಿಲಸಹಿತ ತರ್ಪಣ ಕೂಡದು. ಎರಡು ಅಯನಗಳಲ್ಲೂ ನಾಲ್ಕು ಯುಗಾದಿ ದಿನಗಳಲ್ಲೂ ಪಿಂಡ ದಾನ, ಮೃತ್ತಿಕಾಸ್ನಾನ, ತಿಲತರ್ಪಣ, ಕೂಡದೆಂದು ಸಾಮಾನ್ಯವಾಗಿ ನಿಷೇಧಿಸಿದೆ. ಮೇಲೆ ಹೇಳಿದ ಶಾಸ್ತ್ರ ವಿಶೇಷಶಾಸ್ತ್ರವಾದ್ದರಿಂದ ಪರಸ್ಪರ ವಿರೋಧವಿಲ್ಲವೆಂದು ವಾಚಕರು ಗಮನಿಸಬೇಕು.

6 ಪರೇsಹನಿ ಶ್ರಾದ್ಧಾಂಗ ತರ್ಪಣವನ್ನು ಮಾತ್ರ ತಿಲಸಹಿತ ಮಾಡಬೇಕು. ಇದೂ ಸಹ ಮಾತಾಪಿತೃವಿಷಯದಲ್ಲಿ ಮಾತ್ರ.

7 ಜೀವತ್‌ಪಿತೃಕನಿಗೆ ಮಾತೃಶ್ರಾದ್ಧವನ್ನು ಮಾತ್ರ ಮಾಡಲು ಅಧಿಕಾರ. ಆತನು ತಿಲತರ್ಪಣ ಮಾಡಬಾರದು, (ಎಂದು ಧರ್ಮಪ್ರವೃತ್ತಿ)

8 ಪಿತೃಶ್ರಾದ್ಧದ ದಿನ ಬ್ರಹ್ಮಯಜ್ಞಾಂಗ ತರ್ಪಣದಲ್ಲಿ ತಿಲ ತರ್ಪಣಕೂಡದು. ತಿಲಸಿಕ್ಕದಿದ್ದಾಗ ಚಿನ್ನ ಬೆಳ್ಳಿ ಉಂಗುರಗಳನ್ನು ಕೈಯ್ಯಲ್ಲಿ ಹಾಕಿಕೊಂಡು ಅಥವಾ ದರ್ಭೆಯನ್ನು ಇಟ್ಟುಕೊಂಡು ನಿತ್ಯತರ್ಪಣ ಮಾಡಬೇಕು.

## ಅಮಾವಾಸ್ಯಾ ತರ್ಪಣ

ಅಮಾವಾಸ್ಯಾದಿ ಷಣ್ಣವತಿ ಶ್ರಾದ್ಧಗಳು ನಿತ್ಯಶ್ರಾದ್ಧಗಳು, ಇವುಗಳಿಗೆ ಪಾರ್ವಣದ್ವಯವಿರುವ ಕಾರಣ ಸಪತ್ನೀಕ ಪಿತೃ-ಪಿತಾಮಹ-ಪ್ರಪಿತಾಮಹ, ಸಪತ್ನೀಕ ಮಾತಾಮಹ-ಮಾತುಃ ಪಿತಾಮಹ ಸಪತ್ನೀಕ ಮಾತುಃ ಪ್ರಪಿ ತಾಮಹ ಎಂದು ಒಟ್ಟು ಆರುದೇವತೆಗಳನ್ನು ಉದ್ದೇಶಿಸಿ ಅಮಾವಾಸ್ಯಾದಿ ಶ್ರಾದ್ಧಗಳನ್ನು ಮಾಡಬೇಕು, ಈಗ ಯಾರಲ್ಲೂ ಶ್ರಾದ್ಧವು ನಡೆಯದೆ ಅದಕ್ಕೆ ಬದಲು ತರ್ಪಣವೆ ನೆಡೆಯುವುದು ರೂಢಿಗೆ ಬಂದಿದೆ, ಅದರಿಂದ ಈ ಮೇಲೆ ಹೇಳಿದ ಎರಡು ವರ್ಗಕ್ಕೆ (೬) ದೇವತೆಗಳಿಗೆ ಪಿತೃ ತರ್ಪಣ, ಆದರೆ

ಹೇಮಾದ್ರಿಯಲ್ಲಿ ತ್ರಿಪಾರ್ವಣ. ಚತುಃಪಾರ್ವಣವನ್ನು ಹೇಳಿದೆಯಾದ್ದರಿಂದ ಆವಾಗ ಪಿತೃವರ್ಗ ೩ ಮಾತೃವರ್ಗ ೩ ಮಾತಾಮಹವರ್ಗ ೩ (ಸಪತ್ನೀಕ) ಎಂದು ಒಂಬತ್ತಾಗುವುದು, ಮಾತಾಮಹೀ ಮಾತುಃ ಪಿತಾಮಹೀ, ಮಾತು ಪ್ರಪಿತಾಮಹೀ ಈ ವರ್ಗವನ್ನು ಬಿಡಿಸಿದರೆ ಹನ್ನೆರಡು ಆಗುವುದು. ಅವರ ವರ ಪದ್ಧತಿಯನ್ನು ಶಿಷ್ಟಾಚಾರದಲ್ಲಿರುವಂತೆ ಆಚರಿಸಬೇಕು. ಅಮಾ ವಾಸ್ಯಾದಿಗಳಲ್ಲಿ ಗ್ರಹಣಕಾಲದಲ್ಲೂ. ಅಯನಸಂಕ್ರಾಂತಿಗಳಲ್ಲೂ ಸರ್ವಪಿತೃ ಗಳಿಗೂ ತರ್ಪಣ ಕೊಡಬೇಕಾಗಿಲ್ಲ. ತಿಳಿಯದೆ ಸರ್ವಪಿತೃಗಳಿಗೂ ತರ್ಪಣ ಕೊಡುವುದು ತಪ್ಪು. ಅಶಾಸ್ತ್ರೀಯವು.

## ಸಮಾವರ್ತನೆಯ ಕಾಲ

ಉಪನಯನಕ್ಕೆ ಹೇಳಿದ ಕಾಲದಲ್ಲಿ ಸಮಾವರ್ತನೆ ಮಾಡಬೇಕೆಂದು ಜ್ಯೋತಿಷ ಶಾಸ್ತ್ರವು ಹೇಳುವುದು. ಅನಧ್ಯಾಯ ದಿನಗಳಲ್ಲಿಯೂ ಪ್ರದೋಷದದಿನ, ಮಂಗಳವಾರ, ಶನಿವಾರಗಳಲ್ಲಿ, ಪುಷ್ಯ, ಆಷಾಢಗಳಲ್ಲೂ ಸಮಾವರ್ತನೆ ಕೂಡದು. ಆದರೆ ಮಾರ್ಗಶೀರ್ಷದಲ್ಲಿ ವಿವಾಹವಾಗುವ ಪ್ರಸಂಗವಿದ್ದರೆ ದಕ್ಷಿಣಾಯನದಲ್ಲೂ ಆಗಬಹುದು. ಇನ್ನು ಕೆಲವರು ಉಕ್ತತಿಥಿ, ಹುಣ್ಣಿಮೆ, ಅಮಾವಾಸ್ಯೆ, ಅಷ್ಟಮಿ–ಪ್ರತಿಪತ್ತು-ಬಿಟ್ಟುಳಿದ ತಿಥಿಗಳಲ್ಲೂ ಶುಕ್ಲಪಕ್ಷದಲ್ಲೂ ಕೃಷ್ಣಪಕ್ಷದ ದಶಮಿಯವರಿಗೂ ಗುರು ಶುಕ್ರಾಸ್ತಾದಿ ದೋಷಗಳೂ ಇಲ್ಲದ ಶುಭವಾರದಲ್ಲಿ ಸಮಾವರ್ತನೆ ಮಾಡಬಹುದೆಂದು ಹೇಳುವರು. ಪುಷ್ಯ ಪುನರ್ವಸು, ಮೃಗಶಿರ, ರೇವತಿ, ಹಸ್ತ, ಅನೂರಾಧ, ಉತ್ತರತ್ರಯ ರೋಹಿಣಿ, ಶ್ರವಣ, ವಿಶಾಖಾ ಚಿತ್ತೆ ಇವು ಶ್ರೇಷ್ಠವೆನ್ನುವರು. ಮಹಾನಾಮ್ನೀ–ಮುಂತಾದ ವ್ರತಚತುಷ್ಟಯ ಲೋಪವಾದಲ್ಲಿ ಪ್ರತ್ಯೇಕವಾಗಿ ಗಾಯತ್ರಿಯಿಂದ (೧೦೮, ೨೮, ೮, ರಂತೆ ಯಾದರೂ ಆಜ್ಯದಿಂದ) ಹೋಮಮಾಡಿ ಪ್ರತ್ಯೇಕ ಕೃಚ್ಛ್ರಾಚರಣೆ ಮಾಡಬೇಕು.

## ಸಮಾವರ್ತನೆಯ ಅನುಕಲ್ಪ

ಆತುರ ದೆಶೆಯಲ್ಲಿ ಉಕ್ತ ಸಮಾವರ್ತನೆಯು ನೆಡೆಯದೆ ಹೋದರೆ ಸಂಕ್ಷೇಪವಾಗಿ ಆಚರಿಸಬೇಕು. ಸಂಕ್ಷೇಪವಿಧಿಯಿದು, – ಬ್ರಹ್ಮಚಾರಿಯು ಧರಿಸುವ ಮೇಖಲಾದಿಗಳನ್ನು ತ್ಯಜಿಸಿ ವಪನಮಾಡಿಸಿ ಸ್ನಾನಮಾಡಿ ನೂತನ ವಸ್ತ್ರಧಾರಣ, ಆಚಮನ ತಿಲಕಧಾರಣೆಯನ್ನು ಮಾಡಿಕೊಂಡು, ಅಗ್ನಿ ಪ್ರತಿಷ್ಠಾಪನೆಮಾಡಿ ಪ್ರಜಾಪತಿದೇವತೆಯನ್ನು ಮನಸ್ಸಿನಲ್ಲಿ ಚಿಂತಿಸಿ, ಸಮಿಧಾಧಾನ ಮಾಡಬೇಕು. ಅವಿರೋಧಿಯಾದದ್ದನ್ನು ಉಳಿದ ಕರ್ಮ ಗಳನ್ನು ಸುಮ್ಮನೆ ಆಚರಿಸಬೇಕು. ಇದೇ ಅನುಕಲ್ಪ ವಿಧಿ.

ಈಗಿನ ಕಾಲದಲ್ಲಿ ಮದುವೆಯ ಹಿಂದಿನ ದಿನವೇ ಬಂದು ಅವತ್ತೇ ಸಮಾವರ್ತನೆ ಆಚರಿಸುವುದೂ, ಅಥವಾ ಮದುವೆಯ ದಿನವೇ ಆಚರಿಸುವ ಪದ್ಧತಿ ಹೆಚ್ಚಾಗಿ ಕಂಡು ಬಂದಿದೆ. ಇದೆಲ್ಲವುದಕ್ಕೂ ಉತ್ತಮವೇನೆಂದರೆ ಮದುವೆ ಮಂಟಪಕ್ಕೆ ಬರುವ ಮುಂಚೆಯೇ ಸ್ವಗೃಹದಲ್ಲಿ ಸಮಾವರ್ತನೆ ಮಾಡಿಕೊಂಡು ಕಾಶಿಯಾತ್ರೆ ಶಾಸ್ತ್ರವನ್ನು ಮಾತ್ರ ಮದುವೆ ಮಂಟಪಕ್ಕೆ ಬಂದಕೊಡಲೇ ಆಚರಿಸಿ ಮದುವೆ ಮಾಡಿಕೊಳ್ಳುವುದೇ ಉತ್ತಮ. ಕಾಲಾವಕಾಶವೂ ದೊರೆಯುವುದು, ನಾಂದಿಯನ್ನು ಸ್ವಗೃಹದಲ್ಲೇ ಮಾಡಿ ಕೊಂಡು ಬರುವುದು ಶಾಸ್ತ್ರೀಯವೂ ಅನುಕೂಲವೂ ಅಹುದು.

## ಇನ್ನು ಕೆಲವು ವಿವಾಹ ನಿಷೇಧಗಳು

ಪಿತೃವಿಷಯದಲ್ಲಿ ಹಿಂದೆ ಸಪಿಂಡೀಕರಣಕ್ಕಾಗಿ ಮಾಸಿಕಾನುಮಾಸಿಕ ಗಳನ್ನು ಅಪಕರ್ಷ ಮಾಡಿದ್ದರೂ ಪುನಃ ಸ್ವಕಾಲದಲ್ಲಿ ಅನುಮಾಸಿಕಗಳನ್ನು ಮಾಡಬೇಕೆಂದು ನಿರ್ಣಯಿಸಿರುವರು.

## ಪಾರಿಜಾತಕಾರರ ವಚನವು

ಮಾಸಿಕಾನ್ಯಸಮಾಪ್ಯೈವ ನಾಂದೀಶ್ರಾದ್ಧಂನಕಾರಯೇತ್ ।
ಸಮಾಪ್ಯಚ ಪುನಃಕಾಲೇ ಪಿತ್ರೋರ್ಮಾಸಿಕ ಮಾಚರೇತ್ ।
ಶುಭಕರ್ಮ ನಕುರ್ವೀತ ಮಾಸಿಕಾನ್ಯಸಮಾಪ್ಯತು ।
ಸಮಾಪ್ಯಚ ಪುನಃ ಕುರ್ಯಾತ್ ಪಿತ್ರೋಃ ಸಂವತ್ಸರಂ ತತಃ ।
ಮೃತಸ್ಯ ತೃಪ್ತಯೇ ಕುರ್ಯಾತ್ ದ್ವಿಸ್ತ್ರಿರಾವೃತ್ತಿಭೇದತಃ ॥

ಎಂಬ ವಿಶ್ವಾದರ್ಶ ವಚನವು ಇದಕ್ಕೆ ಪ್ರಮಾಣವೆಂದು ವೈದ್ಯನಾಥರು ಉದಾಹರಿಸಿರುವರು. ವೈದ್ಯನಾಥೀಯವನ್ನು ಹೆಚ್ಚಾಗಿ ದ್ರಾವಿಡರು ಅನುಸರಿಸುವರು. ಅವರು ಹೇಳಿದಂತೆ ಆಚರಿಸಬೇಕು. ಶುಭಕಾರ್ಯ ಕ್ಕಾಗಿ ಮೊಲ್ಕಂಡಂತೆ ಧರ್ಮಸಿಂಧುಕಾರರು ನಿರ್ಣಯಸಿಂಧು— ಮೊದಲಾದವರು ಮಾಡಿದ ನಿರ್ಣಯದಂತೆ ಮಾಸಿಕಾದಿ ಷೋಡಶ ಶ್ರಾದ್ಧ ಗಳನ್ನು ಅಪಕರ್ಷ ಮಾಡಿದ ಮೇಲೆ ಪುನಃ ಮಾಡಬೇಕಾಗಿಲ್ಲ. ಮಾಡ ಕೂಡದೆಂದು ನಿಷೇಧಿಸಿದ್ದರಿಂದ ಧರ್ಮಸಿಂಧು ಅನುಸರಿಸುವ ಆಸ್ತಿಕರು ಅದರಂತೆ ನಡೆಯಬೇಕೆಂದು ನಮ್ಮ ಆಶಯ. ಕನ್ಯೆಗೆ ಕಾಲಾತಿಕ್ರಮ ವಾಗಿದ್ದರೆ ಮತ್ತು ವರನಿಗೂ ಕಾಲಾತಿಕ್ರಮವಾಗಿದ್ದರೆ (ವಿವಾಹ ವಯಸ್ಸು ಮೀರಿದ್ದರೆ) ಆಪತ್ಕಾಲದಲ್ಲಿ ಸಪಿಂಡೀಕರಣವಾದ ಮೇಲೆ ಮಾಸಿಕ ಗಳನ್ನು ಅಪಕರ್ಷಮಾಡಿ ವಿವಾಹ ಉಪನಯನಗಳನ್ನು ನಡೆಯಿಸಬಹುದು. ದೋಷವಿಲ್ಲವೆಂದೂ **ಧರ್ಮಪ್ರವೃತ್ತಿ ವಚನವಿದೆ.**

ಆದರೆ ಕರ್ತೃವಾಗಿದ್ದರೆ ವರ್ಷಪರ್ಯಂತರ ವಿವಾಹವಾಗಲು ಅವ ಕಾಶವಿಲ್ಲವೆಂಬುದು ಅನೇಕ ಧರ್ಮಶಾಸ್ತ್ರ ನಿರ್ಣಯವು. ಉಪನಯನ ಮಾತ್ರ ಆಗಬಹುದು ದೋಷವಿಲ್ಲ. ಮಾತಾಮಹ, ಮಾತುಃ-ಪಿತಾಮಹ ಮಾತುಃ ಪ್ರಪಿತಾಮಹರ ಗೋತ್ರವು ತನ್ನ ಗೋತ್ರಕ್ಕೆ ಭಿನ್ನವಾಗಿದ್ದರೂ ನಾಂದೀಶ್ರಾದ್ಧ ದೇವತೆಯಾಗಿರುವುದರಿಂದ ಹಿಂದೆ ಹೇಳಿದ ಪ್ರೇತಕರ್ಮ ಗಳೂ ಮಾಸಿಕಗಳೂ ಮುಗಿಯದೆ ತಾನು ಮಂಗಳ ಕಾರ್ಯವನ್ನು

ಮಾಡುವಹಾಗಿಲ್ಲ. ಆದರೆ ಮಾತಾಮಹೀ ಮೊದಲಾದವರು ನಾಂದಿಯು ಸ್ವತಂತ್ರ ದೇವತೆಯಲ್ಲವಾದ್ದರಿಂದ ಅಂತ್ಯಕರ್ಮಗಳು ಆಗದಿದ್ದರೂ ಮಂಗಳ ಕಾರ್ಯಕ್ಕೆ ಅಡ್ಡಿಯಿಲ್ಲವೆಂದು **ಸಿಂಧುಕಾರನು ಹೇಳುವನು.** ಸಪತ್ನೀಕ ಮಾತಾಮಹ ಮೊದಲಾದವರೇ ನಾಂದೀ ದೇವತೆಗಳೆಂದು ಹೇಳಿದೆ. ಆದರೆ ಬಹುಜನಶಿಷ್ಯರು ಆರ್ದ್ರಾದಿ ನಕ್ಷತ್ರಗಳಲ್ಲಿ ಸೂರ್ಯನಪ್ರವೇಶವು ದೋಷವೆಂಬುದನ್ನು ಒಪ್ಪುವುದಿಲ್ಲ, ಕೌಸ್ತುಭ ನಿರ್ಣಯ-ಸಿಂಧು-ಮುಂತಾದ ಗ್ರಂಥಗಳಲ್ಲೂ ಮುಹೂರ್ತ ಮಾರ್ತಾಂಡದಲ್ಲೂ ಹೀಗೆ ಹೇಳಿರುವುದಿಲ್ಲ ವೆಂದು ಧರ್ಮಸಿಂಧುವಿನಲ್ಲಿ ತಿಳಿಸಿದೆ ( ಪ್ರ. 218 )

ಶುಕ್ಲಪಕ್ಷವು ಶ್ರೇಷ್ಠ ತ್ರಯೋದಶೀ ಪರ್ಯಂತ ಕೃಷ್ಣಪಕ್ಷವೂ ಮಧ್ಯಮ, ಅಮಾವಾಸ್ಯೆ, ರಿಕ್ತತಿಥಿ ಅಷ್ಟಮಿ. ಷಷ್ಠಿ ಇವುಗಳು ನಿಷಿದ್ಧ ವಾಗಿವೆ. ಬೇರೆತಿಥಿಗಳು ಉತ್ತಮ ಫಲಪ್ರದವಾಗುವವು. ಸೋಮ, ಬುಧ ಗುರು, ಶುಕ್ರವಾರಗಳು ಶ್ರೇಷ್ಠ, **ನಕ್ಷತ್ರ**-ರೋಹಿಣಿ, ಮೃಗಶಿರ, ಮಘೆ, ಉತ್ತರೆ ಉತ್ತರಾಷಾಢ, ಉತ್ತರಾಭಾದ್ರೆ, ಹಸ್ತ, ಸ್ವಾತಿ, ಮೂಲ. ಅನೂ ರಾಧೆ, ರೇವತಿ, ಇವುಗಳು ಪರ್ವಸಂವತ್ಸರನಕ್ಷತ್ರಗಳು. **ಹರದತ್ತ ಮತದಂತೆ** ಚಿತ್ತೆ. ಶ್ರವಣ, ಧನಿಷ್ಠೆ, ಅಶ್ವಿನಿ, ಈ ನಾಲ್ಕೂ ಉತ್ತಮ, ಇವುಗಳಲ್ಲೂ ಗಳಗ್ರಹಯುತವಾದ ನಕ್ಷತ್ರವು ಸರ್ವಥಾ ವರ್ಜ್ಯವು.

ಚಂದ್ರಬಲ, ತಾರಾಬಲಗಳು ಕನ್ಯೆಗೂ ವರನಿಗೂ ಅವಶ್ಯವಾಗಿದೆ. ಶಾಸ್ತ್ರೋಕ್ತವಾದ ಚಂದ್ರತಾರಾದಿ ಬಲಗಳು ಇಲ್ಲದಿರುವಾಗ ಶಾಂತಿಗಾಗಿ ದಾನಗಳನ್ನು ಮಾಡಬೇಕು. ಚಂದ್ರನಿಗಾಗಿ ಶಂಖವನ್ನೂ, ನಕ್ಷತ್ರಕ್ಕಾಗಿ ಲವಣವನ್ನೂ, ತಿಥಿಗಾಗಿ ಅಕ್ಕಿಯನ್ನೂ, ಕರಣಕ್ಕಾಗಿ ಧಾನ್ಯವನ್ನೂ. ವಾರವೂ ಯೋಗವೂ ಕೆಟ್ಟದ್ದರೆ ಚಿನ್ನವನ್ನೂ ದಾನಮಾಡಬೇಕು. ಚಿನ್ನಕ್ಕೆ ಬದಲು ಪ್ರತ್ಯಾಮ್ನಾಯ ದಕ್ಷಿಣೆ ದಾನವನ್ನು ಶಕ್ತಿಯರಿತು ಕೊಡಬೇಕು. ಅದರಿಂದ ಚಂದ್ರಬಲವು ತಾರಾದಿಮುಹೂರ್ತಕ್ಕೆ ಕೂಡುವುದು.

**ಆಪತ್ತಿನಲ್ಲಿ ಗೋಧೂಳಿ ಲಗ್ನದಲ್ಲೂ ವಿವಾಹವನ್ನು ಮಾಡಬಹುದು.**

"ಸೂರ್ಯಾತ್ ಸಪ್ತಮ ಲಗ್ನಂ ಯದ್ಗೋಧೂಳಿಕಮಿತಿ"

ಸೂರ್ಯನಿರುವ ರಾಶಿಗೆ ೭ನೇ ರಾಶಿಯು ಗೋಧೂಳಿ ಲಗ್ನವೆಂದೂ ಹೇಳಲ್ಪಡುವುದು.

ಅಭಿಜಿನ್ ಮುಹೂರ್ತವೂ ಶ್ರೇಷ್ಠ. ವಿವಾಹ ಮುಂತಾದ ಶುಭ ಕಾರ್ಯಗಳಿಗೆ, ಉಪನಯನಕ್ಕಲ್ಲ.

ಅಭಜಿತ್ ಸರ್ವಕಾರ್ಯೇಷು ಶಸ್ತಂ ನಾತ್ರೋಪನಾಯನಂ ।
ಅಭಜಿತ್ ಸರ್ವದೇಶೇಷು ಮುಖ್ಯಂ ದೋಷವಿನಾಶಕೃತ್
ಸೂರ್ಯಾಚ್ಚತುರ್ಥಂ ಯಲ್ಲಗ್ನಯಭಿಜಿತ್ ಸಂಜ್ಞಿತಂಚ ತತ್

ರವಿಬಲವೇಮುಖ್ಯ. ೨, ೫, ೭, ೯, ೧೧ರಲ್ಲಿ ಗುರುವು ಇದ್ದರೆ ಕನ್ಯೆಗೆ ಶುಭಕಾರಕನಾಗುವನು. ಜನ್ಮ, ತೃತೀಯ ಪುಷ್ಯ, ದಶಮ, ಸ್ಥಾನಗಳಲ್ಲಿ ಗುರುವಿದ್ದರೆ ಶುಭವಲ್ಲ. ಆದರೆ ಹೋಮ ಪೂಜಾದಿಗಳಿಂದ ಗುರುವು ಶುಭ ಕಾರಕನಾಗುವನು. **ಚತುರ್ಥ, ಅಷ್ಟಮ, ದ್ವಾದಶ ಸ್ಥಾನಗಳಲ್ಲಿದ್ದರೆ** ದುಷ್ಟಫಲವನ್ನು ಕೊಡುವನು. **ಆಪತ್‌ಕಾಲದಲ್ಲಿ ಗುರು ರವಿ ಇವುಗಳ ಬಲಕ್ಕಾಗಿ ಪೂಜಾಹೋಮಾದಿ ಶಾಂತಿಯನ್ನು ಮಾಡಬೇಕು.** ಧನು, ಮೀನರಾಶಿಗಳಲ್ಲಿದ್ದರೆ ಚತುರ್ಥಾದಿ-ದುಷ್ಟಸ್ಥಾನಗಳಲ್ಲಿದ್ದರೂ ಗುರುವು ದೋಷಕಾರಿಯಲ್ಲ. ಚತುರ್ಥ, ದ್ವಾದಶಸ್ಥಾನದಲ್ಲಿದ್ದರೆ ಎರಡು ಸಲ ಪೂಜೆ ಮಾಡಬೇಕು. ಅಷ್ಟಮದಲ್ಲಿದ್ದರೆ ಮೂರು ಸಲ ಪೂಜಿಸಬೇಕು, ಹೀಗೆಯೆ ಉತ್ತಮ ಸಂಖ್ಯೆಯಿಂದ ಹೋಮಪೂಜಾದಿಗಳಿಂದ ಆರಾಧಿಸಿದ್ದ ಗುರುವು ಶುಭಫಲಪ್ರದನಾಗುವನು.

ಹೀಗೆಯೇ ವರನ ರಾಶಿಯಿಂದ ೩, ೬, ೧೦, ೧೧ನೇ ಸ್ಥಾನಗಳಲ್ಲಿ ರವಿಯೇ ಇದ್ದರೆ ವರನಿಗೆ ಶುಭಕರ, ಬೇರೆಸ್ಥಾನದಲ್ಲಿದ್ದರೆ ಪೂಜಾದಿಗಳಿಂದ ಶುಭಕರನಾಗುವನು.

**ಗುರುವನ್ನು ಆರಾಧಿಸುವ ಕ್ರಮ** – ಹೀಗಿದೆ, ಶೌನಕೋಕ್ತ ಶಾಂತ್ರಿ ವಿಧಿ- "ಅಸ್ಯಕುಮಾರಸ್ಯ ಉಪನಯನೇ ಕನ್ಯಾಯಾವಾವಿವಾಹೇವಾ ಬೃಹಸ್ಪ ತ್ಯಾನುಕೂಲ್ಯಸಿದ್ಧಿದ್ವಾರಾ ಪರಮೇಶ್ವರ ಪ್ರೀತ್ಯರ್ಥಂ ಬೃಹಸ್ಪತಿಶಾಂತಿಂ ಕರಿಷ್ಯೆ" ಎಂದು ಸಂಕಲ್ಪಮಾಡಿ ಆಚಾರ್ಯವರಣೆ ಮಾಡಿ ಆಚಾರ್ಯರ ಮೂಲಕ ಚಿನ್ನದ ಗುರುಪ್ರತಿಮೆಯನ್ನು ಇರಿಸಿ ಕಲಶದಲ್ಲಿ ಆವಾಹನೆ ಮಾಡಿ ಪೂಜಿಸಿ, ಅಶ್ವತ್ಥಸಮಿತ್ತು-ಆಜ್ಯಸರ್ಪಿರ್ಮಿಶ್ರ ಪಾಯಸಗಳಿಂದಲೂ, ಆಜ್ಯ ಮಿಶ್ರಿತ ಯವ, ವ್ರೀಹಿ, ತಿಲಗಳಿಂದಲೂ, ಅಷ್ಟೋತ್ತರ ಶತಸಂಖ್ಯೆಯಿಂದ ಹೋಮಮಾಡಿಸಬೇಕು. ಪ್ರತಿಮೆಯಲ್ಲಿ ಷೋಡಶೋಪಚಾರ ಪೂಜೆ, ಪೀತವಸ್ತ್ರಯುಗ್ಮ ಪೀತೋಪವೀತ. ಪೀತಾಚ್ಛಾದನ (ಅರಿಶಿನಗಂಧ) ಪೀತಾ ಕ್ಷತ ಪೀತಪುಷ್ಪಗಳಿಂದಲೂ ಘೃತದೀಪ ದಧ್ಯನ್ನ ನೈವೇದ್ಯಗಳಿಂದ ಆರಾಧಿಸ ಬೇಕು, ( ಮಾಣಿಕ್ಯಸುವರ್ಣ ) ಅಥವಾ ದಕ್ಷಿಣೆಯನ್ನು ಕೊಟ್ಟು ನಂತರ ಪುಷ್ಪಮಿಶ್ರವಾಗಿ ಹೋಮಮಾಡಬೇಕು, ನಂತರ ಉತ್ತರಪೂಜೆ ಮಾಡಿ ತಾಮ್ರದ ಪಾತ್ರೆಯಲ್ಲಿ ಗಂಧಾಕ್ಷತೆ ಪುಷ್ಪಮಿಶ್ರವಾಗಿ ಅರ್ಘ್ಯವನ್ನು ಕೊಡ ಬೇಕು. ಅದಕ್ಕೆ ಬೇಕಾದ ಮಂತ್ರಗಳು.

ಗಂಭೀರ ದೃಢರೂಪಾಂಗ ದೇವೇಜ್ಯ ಸುಮತೇ ಪ್ರಭೋ ।
ನಮಸ್ತೇ ವಾಕ್ಪತೇ ಶಾಂತ, ಗೃಹಾಣಾರ್ಘ್ಯಂ ನಮೋಸ್ತುತೇ ॥

ಪ್ರಾರ್ಥನೆ – ಭಕ್ತ್ಯಾಯತ್ತೇ ಸುರಾಚಾರ್ಯ, ಹೋಮಪೂಜಾದಿ ಸತ್ಕೃತಂ ।
ತತ್ಸಂಗೃಹಾಣಶಾಂತ್ಯರ್ಥಂ ಬೃಹಸ್ಪತೇ ನಮೋನಮಃ ।
ಜೀವೋಬೃಹಸ್ಪತಿಃ ಸೂರಿಃ ಆಚಾರ್ಯೋ ಗುರು ರಂಗಿರಾಃ ।
ವಾಚಸ್ಪತಿರ್ದೇವಮಂತ್ರೀ ಶುಭಂಕುರ್ಯಾತ್ ಸದಾಮಮ ॥

ಇತಿವಿಸರ್ಜನಂ – ಪ್ರತಿಮಾದಾನಾಂತೇ ಕುಮಾರಾದಿಯುತಸ್ಯ ಯಜಮಾನಸ್ಯ ಅಭಿಷೇಕಃ. ತತ್ರಮಂತ್ರಾಃ –

ಓಂ ಅಪೋಹಿಷ್ಠೇತಿತಿಸ್ರಃ । ತತ್ಪಾಯಾಮಿ ೩ । ಸ್ವಾದಿಷ್ಠಯಾ ಸಮುದ್ರಜ್ಯೇಷ್ಠಾಃ ಇದಮಾಪಃ ೧ ತಾಮಗ್ನಿವರ್ಣಾಂ ೧ ಯಾಓಷಧೀಃ ೧

ಅಶ್ವಾವತೀ ಗೋಮತೀರ್ನ ೧, ಯದ್ದೇವಾದೇವ ಹೇಡನಂ ಇತ್ಯಾದ್ಯಾಃ। ಕೂಷ್ಮಾಂಡ ಮಂತ್ರಾಃ। ಪುನರ್ಮಾ ಪುನರಾಯುರಿತ್ಯಂತಾಃ ಏತೈರಭಿಷೇಕಂ ಕೃತ್ವಾ ವಿಪ್ರಾನ್ ಭೋಜಯೇತ್।

## ಬ್ರಾಹ್ಮ ವಿವಾಹಕ್ಕೆ ಹೇಳಿದ ಮಾಸಗಳು

ಮಾಘ, ಫಾಲ್ಗುಣ, ವೈಶಾಖ ಜ್ಯೇಷ್ಠಮಾಸಗಳು ಶುಭಕರವಾದವು, ಮಾರ್ಗಶೀರ್ಷ-ಮಾಸವು ಮಧ್ಯಮ, ಮಿಥುನರಾಶಿಯಲ್ಲಿ ಸೂರ್ಯನಿರುವ ಆಷಾಢ, ವೃಶ್ಚಿಕದಲ್ಲಿರುವ ಕಾರ್ತಿಕವೂ ದೇಶಾಚಾರಾನುಸಾರವಾಗಿ ಈ ಎರಡೂ ಗ್ರಾಹ್ಯವಾಗಿವೆ. ಸಮಸ್ತ ದೇಶಗಳಲ್ಲೂ ಗ್ರಾಹ್ಯವಲ್ಲ,

1 ಇದರಂತೆ ಮಕರದಲ್ಲಿರುವ ಪುಷ್ಯಮಾಸ, ಮೇಷದಲ್ಲಿರುವ ಚೈತ್ರವೂ ಗ್ರಾಹ್ಯ.

2 ಜ್ಯೇಷ್ಠಮಾಸದಲ್ಲಿ ಜ್ಯೇಷ್ಠ ವಧುವಿಗೂ ಜ್ಯೇಷ್ಠ ವರನಿಗೂ ಅನ್ಯೋನ್ಯ ವಿವಾಹವು ನಿಷಿದ್ಧ. ಬೇರೆ ಮಾಸದಲ್ಲಿ ಶುಭ ತ್ರಿಜ್ಯೇಷ್ಠ ಕೂಡದೆಂಬುವ ವಾಡಿಕೆಗೆ ಧರ್ಮಶಾಸ್ತ್ರವೇ ಆಧಾರ.

ನಜ್ಯೈಷ್ಠಯೋರ್ವಿವಾಹಃಸ್ಯಾತ್ ಜ್ಯೇಷ್ಠಮಾಸೇ ವಿಶೇಷತಃ।
ದ್ವೌಜ್ಯೇಷ್ಠೌ ಮದ್ಯಮೌಪ್ರೋಕ್ತೌ ಏಕಜ್ಯೇಷ್ಠಂ ಸುಖಾವಹಂ॥

ದ್ವಿಜ್ಯೇಷ್ಠ ಮದ್ಯಮ, ಏಕಜ್ಯೇಷ್ಠವೇ ಸುಖಕರವೆಂದು ಹೇಳಿದೆ.

3 "ಜ್ಯೇಷ್ಠತ್ರಯಂ ನಕುರ್ವೀತ ವಿವಾಹೇ ಸರ್ವಸಂಮತಮ್" ಎಂದು ತ್ರಿಜ್ಯೇಷ್ಠವು ವಿವಾಹಕ್ಕೆ ಎಂದಿಗೂ ಸಲ್ಲದೆಂಬುದು ಸರ್ವಋಷಿ ಸಂಮತವಾದದ್ದು. ಜ್ಯೇಷ್ಠಮಾಸವು ಜ್ಯೇಷ್ಠಗರ್ಭಕ್ಕೆ (ಅಂದರೆ ಮೊದಲು ಹುಟ್ಟಿದ ಮಗುವಿಗೆ ಹೆಣ್ಣಾಗಲೀ ಗಂಡಾಗಲೀ ಇದಕ್ಕೆ) ಮಂಗಳಕಾರ್ಯ ಯೊಗ್ಯವಲ್ಲ.

4 ಜನ್ಮಮಾಸ, ಜನ್ಮನಕ್ಷತ್ರಾದಿಗಳು ಜ್ಯೇಷ್ಠಾಪತ್ಯನಿಗೆ ಕೂಡದು. ಆರ್ದ್ರ್ರೆ ಮೊದಲಾದ ಹತ್ತು ನಕ್ಷತ್ರಗಳಲ್ಲಿ ಸೂರ್ಯನಿರುವಾಗ ವಿವಾಹ, ಮುಂಜಿ, ಮೊದಲಾದವುಕೂಡದೆಂದು ವಸಿಷ್ಠಾದಿಗಳು ನಿಷೇಧಿಸಿರುವರೆಂದೂ ಮಯೂಖಗ್ರಂಥದಲ್ಲಿ ಹೇಳುವರು.

ಸರ್ವದೇಶೇಷ್ವಿದಂ ಮುಖ್ಯಂ ಸರ್ವವರ್ಣೇಷು ಸರ್ವದಾ ।

ಸೂರ್ಯನಿರುವ ಲಗ್ನಕ್ಕೆ ನಾಲ್ಕನೇ ಲಗ್ನವು ಅಭಿಜಿತ್ತೆನಿಸುವುದು. ಸರ್ವ ದೇಶಗಳಲ್ಲೂ ಸರ್ವ ಜಾತಿಗಳಲ್ಲೂ ಮುಖ್ಯ ಮತ್ತು ಪ್ರಶಸ್ತವು. ಕೆಲವರು ಸೂರ್ಯನು ಸರಿಯಾಗಿ ಆಕಾಶದಲ್ಲಿ ಮಧ್ಯಕ್ಕೆಬಂದಾಗ **ಅಭಿಜಿನ್ ಮುಹೂರ್ತವೆಂದು ಹೇಳುವರು.** ಅದು ಒಂದು ಮುಹೂರ್ತಕಾಲ ಮಾತ್ರ ಶುಭ ಕಾಲ. ಇದು ಸಕಲ ದೋಷವನ್ನೂ ಪರಿಹರಿಸುವುದು. **ಉಪನಯನಬಿಟ್ಟು** ವಿವಾಹ, ಯಾತ್ರೆಉತ್ಸವಗಳಿಗೆ ಅಭಿಜಿತ್ತು ಪ್ರಶಸ್ತ ವೆಂದು ಹೇಳಿದ್ದಾರೆ. ಆದರೆ ಪಂಚಾಂಗಶುದ್ಧಿಯಿದ್ದು ಸೂರ್ಯಾಸ್ತವಾದ ಮೇಲೆ ಹಿಂದುಮುಂದಿನ ಅರ್ಧಗಳಿಗೆಮಾತ್ರ ಗೋಧೂಳಿ ಎಂದು ಹೇಳಿದೆ. ಇದು ಶೂದ್ರರಿಗೆ ಪ್ರಶಸ್ತ, ಬ್ರಾಹ್ಮಣರಿಗೆ ಕ್ರೂರಗ್ರಹಯುತವಾದ ಲಗ್ನ ಅಷ್ಟಮ ಕುಜ, ಗುರು, ಶನಿವಾರಗಳು, ವ್ಯತೀಪಾತ, ಸಂಕ್ರಾಂತಿ ಇವುಗಳನ್ನು ಬಿಟ್ಟು ಶುದ್ಧವಾದ ದಿನಗಳಲ್ಲಿ ಈ ಗೋಧೂಳಿ **ಲಗ್ನವು ಶ್ರೇಷ್ಠವೆಂದು** ತೀರ್ಮಾನಮಾಡಿದೆ.

ಕನ್ಯಾದಾನ ಮಾಡಿದಮೇಲೂ ಕನ್ಯೆಯು ಸಂತಾನವನ್ನು ಪಡೆಯುವ ವರೆಗೂ ತಂದೆ ತಾಯಿಗಳು ಕನ್ಯಾಗೃಹದಲ್ಲಿ ಭೋಜನ ಮಾಡಬಾರದು,

ಈಗಿನ ಕಾಲದಲ್ಲಿ ಯಾವ ನಿಯಮವುಇಲ್ಲದೆ ಭೋಜನ ಪ್ರತಿ ಭೋಜ ನಗಳನ್ನು ನೆಡೆಯಿಸುವರು. ಇದು ಧರ್ಮಕ್ಕೆ ಆದರ್ಶವಲ್ಲ,

## ವಧೂ ಗೃಹಪ್ರವೇಶ ಯಾವದಿನ ಮಾಡಿಕೊಳ್ಳಬೇಕು

ವಿವಾಹವಾದನಂತರ ಹದಿನಾರು ದಿನಗಳಲ್ಲಿ ಸಮದಿನಗಳಲ್ಲಿ ಅಥವಾ ಐದು, ಏಳು, ಒಂಭತ್ತು ಈ ವಿಷಮ ಬೆಸದಿನಗಳಲ್ಲಿ ರಾತ್ರಿಯ ಸ್ಥಿರಲಗ್ನದಲ್ಲಿ ವಧೂಪ್ರವೇಶವು ಶುಭ.

ನೂತನಗೃಹಪ್ರವೇಶವನ್ನು ರಾತ್ರಿಮಾಡಬಾರದು ಮೊದಲದಿನದಲ್ಲೂ ಆಗಬಹುದೆಂದು ಕೆಲವರು ಆರನೆಯದಿನ ಕೂಡದೆಂದು ಪ್ರಯೋಗರತ್ನದಲ್ಲಿ ಹೇಳಿದ್ದು ನಿರ್ಮೂಲ. ಹದಿನಾರುದಿನಗಳಲ್ಲಿ ಉತ್ತಮದಿನಗಳಲ್ಲಿ ಪ್ರವೇಶ ಮಾಡುವದಾದರೆ ಪ್ರವೇಶಕ್ಕೆ ಉತ್ತಮವಾದ ನಕ್ಷತ್ರ, ತಿಥಿ, ವಾರಗಳಲ್ಲಿ ಚಂದ್ರಬಲಾದಿಗಳು ಇಲ್ಲದಿದ್ದರೂ ಗುರುಶುಕ್ರಾಸ್ತಾದಿಗಳು ಇದ್ದರೂ ದೋಷ ವಿಲ್ಲ. **ಆದರೆ ವ್ಯತೀಪಾತ, ಕ್ಷಯತಿಥಿ,** ಗ್ರಹಣ, ಸಂಕ್ರಾಂತಿ. ವೈಧೃತಿ. ಅಮಾವಾಸ್ಯೆ ಸಂಕ್ರಾಂತಿವಿಷ್ಟಿ ಮೊದಲಾದ ದೋಷವಿರುವ ಕಾಲಗಳಲ್ಲಿ ಯಾವತ್ತೂ ಗೃಹಪ್ರವೇಶವು ಕೂಡದು. ಪ್ರಥಮದಿನ ನವ ವಧೂಪ್ರವೇ ಶಕ್ಕೆ ಮತ್ತೆ ವಿವಾಹಕ್ಕಾಗಿ ಪ್ರಯಾಣ ಮಾಡುವುದಕ್ಕೂ ಪ್ರತಿಶುಕ್ರದೋಷ ವಿಲ್ಲ. ಎರಡನೇಸಾರಿ ವಧುವು ಗೃಹಕ್ಕೆ ಬರುವಾಗಲೂ ಸಂಮುಖ ಶುಕ್ರ ದೋಷವಿದೆ.

ಹದಿನಾರು ದಿನಗಳು ಕಳೆದನಂತರ ಬೆಸಮಾಸಗಳಲ್ಲೂ ಒಂದು ವರ್ಷ ಕಳೆದಮೇಲೆ ಬೆಸವರ್ಷಗಳಲ್ಲೂ ವಧೂಪ್ರವೇಶವು ಶುಭವು. ಆದರೆ ಸಮದಿನ ಸಮಮಾಸ, ಸಮವರ್ಷಗಳಲ್ಲಿ ದೋಷಕಾರಿ. ವೈಧವ್ಯಾದಿ ದೋಷವನ್ನುಂಟು ಮಾಡುವುದು.

ಈಗಿನ ಕಾಲದಲ್ಲಿ ಒಂದೇದಿನ ಮದುವೆ ಶಾಸ್ತ್ರಮಾಡುವುದರಿಂದ ಆದಿನ ಅಥವಾ ಎರಡನೇದಿನ ವಧೂಪ್ರವೇಶವು ನಡೆಯುತ್ತಿರುವುದು. ಆದರೆ ವರ್ಜ್ಯಕಾಲವನ್ನು **ಅಮಾವಾಸ್ಯೆ** ಸಂಕ್ರಾಂತಿ ಗ್ರಹಣದಿನಗಳಲ್ಲಿ ನಿಷಿದ್ಧ. ನಕ್ಷತ್ರತಿಥ್ಯಾದಿಗಳನ್ನು ವರ್ಜಿಸಲೇಬೇಕು. ಹದಿನಾರು ದಿನಗಳನಂತರ ವಧೂ

ಪ್ರವೇಶಕ್ಕೆ ಯೋಗ್ಯವಾದ **ಶುಭನಕ್ಷತ್ರಗಳು** ಅಶ್ವಿನಿ. ರೋಹಿಣಿ, ಮೃಗಶಿರ ಪುಷ್ಯ, ಮಘೆ, ಉತ್ತರೆ, ಉತ್ತರಾಷಾಢ, ಉತ್ತರಾಭಾದ್ರೆ, ಹಸ್ತ, ಚಿತ್ತೆ ಸ್ವಾತಿ, ಅನೂರಾಧೆ. ಮೂಲ, ಶ್ರವಣ ಧನಿಷ್ಠೆ, ರೇವತಿ. ಇವುಗಳು.

ತಿಂಗಳು ಕಳೆದನಂತರ ವಧೂಪ್ರವೇಶಕ್ಕೆ ಮಾರ್ಗಶೀರ್ಷ, ಮಾಘ ಫಾಲ್ಗುಣ, ವೈಶಾಖ, ಜ್ಯೇಷ್ಠಮಾಸಗಳೂ, ನವಮಿ. ಚೌತಿ, ಚತುರ್ದಶಿ, ಹುಣ್ಣಿಮೆ, ಅಮಾವಾಸ್ಯೆ ಬಿಟ್ಟುಳಿದ ತಿಥಿಗಳೂ ಭಾನು, ಶನಿ, ಮಂಗಳವಾರ ಬಿಟ್ಟುಳಿದ ವಾರಗಳೂ ಪ್ರಶಸ್ತವಾಗಿವೆ.

ದ್ವಿರಾಗಮೋ ಷೋಡಶವಾಸರಾಂತರೇಕಾದಶಾಹೇ ಸಮವಾಸರೇಷು ।
ನಚಾತ್ರಶುಕ್ರಂ ನತಿಥಿರ್ನಯೋಗೋ ನವಾರಶುದ್ಧ್ಯಾದಿವಿಚಾರಣೀಯಂ॥

ಎಂಬ ವಚನದಂತೆ ವಧೂಪ್ರವೇಶವನ್ನು ಎರಡನೇ ಬಾರಿಗೆ ಹದಿನಾರು ದಿನಗಳೊಳಗೆ ಮಾಡುವುದಾದರೂ, ಪ್ರತಿ ಶುಕ್ರಾದಿ ದೋಷವು ತಿಥಿ ನಕ್ಷತ್ರ ವಾರಾದಿ ದೋಷಗಳನ್ನು ಚಿಂತಿಸಬೇಕಾಗಿಲ್ಲ.

ಆದರೆ ಸಮದಿನಗಳಲ್ಲಿ ಅಥವಾ ಹನ್ನೊಂದನೇ ದಿನಗಳಲ್ಲೂ ದೋಷ ಕಾರಿಯಲ್ಲ. ಹದಿನಾರು ದಿನಗಳು ಕಳೆದನಂತರ ಆದರೆ ಗುರುಶುಕ್ರಾಸ್ತಾದಿ ದೋಷವಿಲ್ಲದಿರುವ ಮಾಸಗಳಲ್ಲಿ ಮಾಘ, ಫಾಲ್ಗುಣ, ವೈಶಾಖ ಮಾಸ ಗಳಲ್ಲೂ, ಶುಕ್ಲಪಕ್ಷದಲ್ಲೂ, ಸೋಮ, ಬುಧ, ಗುರು, ಶುಕ್ರವಾರಗಳಲ್ಲೂ ಅಶ್ವಿನಿ, ರೋಹಿಣಿ, ಪುನರ್ವಸು, ಪುಷ್ಯ, ಉತ್ತರೆ, ಉತ್ತರಾಷಾಢ. ಉತ್ತರಾಭಾದ್ರ, ಅನೂರಾಧಾ, ಜ್ಯೇಷ್ಠ, ಹಸ್ತ, ಚಿತ್ತ, ಸ್ವಾತಿ, ಶ್ರವಣ ಶತತಾರೆ ನಕ್ಷತ್ರಗಳಲ್ಲೂ, ಸ್ಥಿರ ಲಗ್ನಾದಿ ಶುಭಕಾಲದಲ್ಲಿ ದ್ವಿತೀಯ ವಧೂ ಗೃಹಪ್ರವೇಶವು ಶ್ರೇಷ್ಠ, ಅಧಿಕಮಾಸ, ಕ್ಷಯಮಾಸ, ವಿಷ್ಣುಶಯನ ಮಾಸಗಳೂ ವರ್ಜ್ಯವಾಗಿವೆ,

ಈಗಿನ ಕಾಲದ ಜನರು ಇದು ಯಾವುದನ್ನೂ ಲಕ್ಷಿಸುವುದಿಲ್ಲ. ಸನಾ ತನ ಧರ್ಮಾಭಿಮಾನಿಗಳು ಶುಭಕಾಲವನ್ನು ನಿರೀಕ್ಷಿಸುವುದು ಒಳ್ಳೆಯದೆಂದು ನಮ್ಮ ಆಶಯವು.

ಆದರೂ ಮೂರನೇ ದಿನವೇ ಬಿಟ್ಟ ಶ್ರಾದ್ಧವನ್ನು ಮಾಡುವುದೂ ಸೂಕ್ತವಲ್ಲ. ನಾಂದಿ ವಿಸರ್ಜನೆ ಶಾಸ್ತ್ರೀಯವಾಗಿರದೆ, ಐಚ್ಛಿಕವಾಗಿ ತನ್ನ ಇಚ್ಛೆ ಬಂದಂತೆ ಮಾಡುವುದಾಗಿದೆ. ಆದರಿಂದ 4-5 ದಿನಗಳನ್ನು ಬಿಟ್ಟು ಮಾಡಬೇಕಾಗುವುದು. ಮೃತಾಹ ಶ್ರಾದ್ಧವನ್ನು ಆಶೌಚ ಬಿಟ್ಟುಳಿದ ಯಾವುದೇ ನಿಮಿತ್ತದಿಂದ ಬಿಟ್ಟರೆ, ಅಮಾವಾಸ್ಯೆ, ಶುಕ್ಲ ಏಕಾದಶಿ, ಕೃಷ್ಣ ಏಕಾದಶಿ ದಿನ ಮಾಡುವುದು ಶಾಸ್ತ್ರೀಯವಾಗಿದೆ, ಹಾಗೂ ಮಾಡ ಬಹುದು.

ಕೆಲವರು ವಿವಾಹವಾದ ಪಕ್ಷದಲ್ಲೇ ಮಾತಾ ಪಿತೃ ಮುಂತಾದವರ ಶ್ರಾದ್ಧವನ್ನು ಮಾಡಬಾರದೆಂದೂ- ಅದಕ್ಕಾಗಿ ಶ್ರಾದ್ಧವು ಕಳೆದ ಮೇಲೆ ಮುಹೂರ್ತ ಇಟ್ಟುಕೊಳ್ಳಬೇಕೆಂದೂ ಹೇಳುವರು, ಇದಕ್ಕೆ ಶಾಸ್ತ್ರದಲ್ಲಿ ಆಧಾರವಿಲ್ಲ.

## ಇದಕ್ಕೆ ಬದಲಾಗಿ ಅಪವಾದ ಶಾಸ್ತ್ರ

ಮಹಾಲಯೇ ಗಯಾ ಶ್ರಾದ್ಧೇ ಪಿತ್ರೋಃ ಪ್ರತ್ಯಾಬ್ದಿಕೇ ತಥಾ
ಸಪಿಂಡ್ಯಂತ ಪ್ರೇತಕರ್ಮ ಶ್ರಾದ್ಧ ಷೋಡಶಕೇಷ್ವಪಿ ।
ಕೃತೋದ್ವಾಹಾದಿಕಃ ಕುರ್ಯಾತ್ ಪಿಂಡದಾನಂಚ ತರ್ಪಣಂ
ಕೇಚಿತ್ ಭ್ರಾತೃ ಪಿತೃವ್ಯಾದೇ ರಾಬ್ದಿಕೇಽಪ್ಯೇವ ಮಾಚರೇತ್ ॥

ಅರ್ಥ–ವಿವಾಹ, ಉಪನಯನ ಮುಂತಾದುವನ್ನು ಮಾಡಿಕೊಂಡವನು ಮಹಾಲಯ, ಗಯಾಶ್ರಾದ್ಧ, ಮಾತಾಪಿತೃ ಪ್ರತಿಸಾಂವತ್ಸರಿಕ ಸಪಿಂಡ ಪರ್ಯಂತ ಪ್ರೇತಕರ್ಮ, ಷೋಡಶ ಶ್ರಾದ್ಧ ಇವುಗಳಲ್ಲೂ ಪಿಂಡದಾನ ವನ್ನೂ, ತರ್ಪಣವನ್ನೂ ಮಾಡಬಹುದೆಂದು ಸೋದರ, ಚಿಕ್ಕಪ್ಪ– ದೊಡ್ಡಪ್ಪ ಮೊದಲಾದವರ ಆಬ್ದಿಕ ಶ್ರಾದ್ಧಗಳಲ್ಲೂ ಮಾಡಬಹುದೆಂದು ಮತವಿರುವುದು,

## ಸಾಮಾನ್ಯವಾಗಿ ಮಂಟಪ ಉದ್ವಾಸನೆಯಾದ ಮೇಲೆ ಯಾವಯಾವುದನ್ನು ಮಾಡಬಾರದು ?

ಉತ್ಸವವು ಮುಗಿದ ಕೂಡಲೇ ಸ್ನಾನ ಮಾಡಬಾರದು. ಮಂಗಳ ಕಾರ್ಯವನ್ನು ಮುಗಿಸಿದ ಮೇಲೂ, ಮಿತ್ರರನ್ನೂ, ಬಂಧುಗಳನ್ನೂ ಹಿಂಬಾಲಿಸಿ ಹೋಗಿ ಬೀಳ್ಕೊಟ್ಟು ಬಂದು, ಕುಲದೇವತಾ ಅರ್ಚನೆ ಮಾಡಿದ ಮೇಲೂ ಸ್ನಾನ ಮಾಡಬಾರದು. ಸಚೈಲಸ್ನಾನ, ತಿಲಮಿಶ್ರಿತ ತರ್ಪಣದ ಕರ್ಮ, ಮೃತಪಟ್ಟವನನ್ನು ಹಿಂಬಾಲಿಸಿ ಸ್ಮಶಾನಯಾತ್ರೆ ಮಾಡುವುದು. ಕಲಶಪ್ರದಾನ, ಹೊಸದಾಗಿ ತೀರ್ಥಯಾತ್ರೆ ಮಾಡುವುದು ಇವುಗಳನ್ನು ಒಂದು ವರ್ಷದ ಪರ್ಯಂತವೂ ವಿಸರ್ಜಿಸಬೇಕು.

ಊರ್ಧ್ವಂ ವಿವಾಹಾತ್ ಪುತ್ರಸ್ಯ ತಥಾ ಚ ವ್ರತಬಂಧನಾತ್
ಆತ್ಮನೋ ಮುಂಡನಂ ನೈವ ವರ್ಷಂ ವರ್ಷಾರ್ಧಮೇವಚ ।
ಮಾಸಮನ್ಯತ್ರ ಸಂಸ್ಕಾರೇ ತ್ರಿಮಾಸಂ ಚೌಲಕರ್ಮಣಿ
ಪಿಂಡದಾನಂ ಮೃದಾಸ್ನಾನಂ ನ ಕುರ್ಯಾತ್ತಿಲತರ್ಪಣಂ ।

ಎಂದು ಹೇಳಿರುವಂತೆ ವಿವಾಹವು ನಡೆದ ಮೇಲೆ, ಪುತ್ರನಿಗೆ ವಿವಾಹ ನಡೆದ ಮೇಲೆ, ಮುಂಜಿಯಾದ ಮೇಲೂ ಕ್ಷೌರವು ಒಂದು ವರ್ಷ. ಅಥವಾ ಆರು ತಿಂಗಳು ಕಾಲ ಕೂಡದು. ಬೇರೆ ಸಂಸ್ಕಾರಗಳಲ್ಲಿ ಒಂದು ತಿಂಗಳು ಕೂಡದು. ಚೂಡಾಕರ್ಮವಾದರೆ ಮೂರು ತಿಂಗಳು ಕಾಲ ಕೂಡದು. ಅಲ್ಲದೇ ಪಿಂಡಪ್ರದಾನ, ಮೃತ್ತಿಕಾ ಸ್ನಾನ, ತಿಲತರ್ಪಣಗಳೂ ಕೂಡ ನಿಷಿದ್ಧವಾಗಿದೆ. ಈ ನಿಷೇಧಗಳು ತ್ರಿಪುರುಷರ ಜ್ಞಾತಿಗಳಿಗೆ ಮಾತ್ರ. ಬೇರೆ ಬಂಧುಗಳಿಗೆ ಅನ್ವಯಿಸುವುದಿಲ್ಲ.

ಈಗಿನ ಕಾಲದಲ್ಲಿ ಕ್ಷೌರವನ್ನು 15 ದಿನಕ್ಕೊಮ್ಮೆ ಮಾಡಿಸಿಕೊಳ್ಳುವ ರೂಢಿ ಬಂದಿದೆ. ಈ ಶಾಸ್ತ್ರವನ್ನು ಕೇಳುವವರೇ ಇಲ್ಲ.

**ಆದುದರಿಂದ ಮುಂಡನವೆಂಬ ಕ್ಷೌರವು ನಿಷಿದ್ಧವಾದರೂ ಕತ್ತರಿಯಿಂದ ಕತ್ತರಿಸಿಕೊಳ್ಳುವ ವಿಧಾನ ನಿಷಿದ್ಧವಲ್ಲ.**

ರಾಜಕಾರ್ಯೆ ನಿಯುಕ್ತಾನಾಂ ನರಾಣಾಂ ಭೂಪಜೀವಿನಾಂ
ಶ್ಮಶ್ರುಲೋಮ ನಖಚ್ಛೇದೇ ನಾಸ್ತಿಕಾಲ ವಿಶೋಧನಂ ।
ಕ್ಷೌರಂ ನೈಮಿತ್ತಿಕಂ ಕಾರ್ಯಂ ನಿಷೇಧೇ ಸತ್ಯಪಿ ಧ್ರುವಂ ॥

ಎಂದಂತೆ ರಾಜಕಾರ್ಯದಲ್ಲಿ ನಿಯುಕ್ತರಾದ ನೌಕರರಿಗೆ, ರಾಜ ಸೇವಕರಿಗೆ ಗಡ್ಡ ಮೀಸೆ ಉಗುರು ಕತ್ತರಿಸಿಕೊಳ್ಳುವುದಕ್ಕೆ ಕಾಲಶೋಧನೆ ಬೇಕಿಲ್ಲ. ನಿಷೇಧವಿದ್ದರೂ ಪ್ರಬಲವಾದ ನಿಮಿತ್ತ ಬಂದಾಗ ಕ್ಷೌರವು ಆಗಬಹುದು. ಆದರೆ ಯಜ್ಞದಲ್ಲೂ, ಮರಣ ನಿಮಿತ್ತವಾಗಿಯೂ, ಬಂಧದಿಂದ ಬಿಡುಗಡೆಯಾದರೂ, ರಾಜಾಜ್ಞೆ ವಿಪ್ರರ ಆಜ್ಞೆಯಂತೆ ಆಗಬಹುದು, ಆದರೆ, ತಂದೆತಾಯಿ ಇರುವ ಪೂರ್ವವಯಸ್ಸಿನವರು ಯಾವಾಗಲೂ ಮುಂಡನವನ್ನು ಮಾಡಿಸಬಾರದು. (ತಲೆ ಬೋಳಿಸುವುದೇ ಮುಂಡನ.) ಕತ್ತರಿಯಿಂದ ಕತ್ತರಿಸಿಕೊಳ್ಳುವುದೇ ಕರ್ತನ. ಇದು ಆಗಬಹುದು.

ಯಜ್ಞೇ ಮೃದಾ ಬಂಧಮೋಕ್ಷೇ ನೃಪವಿಪ್ರಾಜ್ಞಯಾಪಿಚ ।
ಪ್ರಾಗ್ವಯಸ್ಕೈಃ ಸಪಿತೃಕೈಃ ನ ಕಾರ್ಯಂ ಮುಂಡನಂ ಸದಾ ॥
ಮುಂಡನಸ್ಯ ನಿಷೇಧೇಪಿ ಕರ್ತನಂತು ವಿಧೀಯತೇ ॥

ಎಂದು ವಚನವು ಆಧಾರ.

## ಮಂಟಪ ದೇವತೋತ್ಥಾಪನೆ ಯಾವ ದಿನ ?

ಮಂಟಪ ದೇವತಾಸ್ಥಾಪನೆ ಮಾಡಿದ ದಿನದಿಂದ ಸಮ ದಿನಗಳಲ್ಲಿ ಅಂದರೆ, ೨, ೪, ೬ ಅಥವಾ ೫, ೭ ದಿನಗಳಲ್ಲಿಯೂ ಮಂಟಪ ದೇವತೆಯನ್ನು ಉತ್ಥಾಪನೆ ಮಾಡಬಹುದು. ಉಪನಯನ, ವಿವಾಹದಲ್ಲೂ ಇದು ಸಮಾನ.

ಚಾಲತಿಯಲ್ಲಿ ಈಗ ಮದುವೆ ದಿನವೇ ಕೆಲವರು ವಿಸರ್ಜಿಸುವರು. ಇದು ಸರಿಯಲ್ಲ, ೨ನೇ ದಿನ ವಿಸರ್ಜಿಸಬಹುದು. ಈ ರೀತಿ ಮಂಟಪ

ಉದ್ವಾಸನೆ ಮಾಡುವವರೆಗೂ ಅಂದರೆ ನಾಂದೀ ಇಟ್ಟಮೇಲೆ ವಿಸರ್ಜನೆ ಮಾಡುವವರೆಗೂ. ಅಮಾವಾಸ್ಯೆ ತರ್ಪಣ, ಶ್ರಾದ್ಧ, ಬ್ರಹ್ಮಯಜ್ಞ, ಮೃತಾಶ್ರಾದ್ಧ, ತಣ್ಣೀರು ಸ್ನಾನ, ಅಪಸವ್ಯ ಸ್ವಧಾಕಾರ,ನಿತ್ಯ ಶ್ರಾದ್ಧ, ವೈಶ್ವದೇವ, ವೇದಾಧ್ಯಯನ, ನದೀ ದಾಟುವುದು, ಉಪವಾಸ ವ್ರತ. ಶ್ರಾದ್ಧ ಭೋಜನ, ಇವುಗಳನ್ನು ತ್ರಿಪುರುಷರಲ್ಲಿ ಜ್ಞಾತಿಗಳೂ ಸಹ ಮಾಡಬಾರದು. ಉದ್ವಾಸನೆ ಮಾಡಿದ ನಂತರ ಮಾಡಬಹುದು.

ಅಲ್ಲದೆ ಗೋಪಿಚಂದನ, ವಿಭೂತಿಧಾರಣೆಯನ್ನು ಮಾಡಬಾರದು. ಆದರೆ ಮಂಗಳ ಕಾರ್ಯಗಳಲ್ಲಿ ಕುಂಕುಮವನ್ನೂ, ಗಂಧಾಕ್ಷತೆಯನ್ನೂ ಧರಿಸಬೇಕು.

ಅಭ್ಯಂಗೆ ಸೂತಕೇಚೈವ ವಿವಾಹೇ ಪುತ್ರಜನ್ಮನಿ ।
ಮಾಂಗಲ್ಯೇಷುಚ ಸರ್ವೇಷು ನಧಾರ್ಯಂ ಗೋಪಿಚಂದನಮ್ ॥

ಈ ವಚನದಂತೆ ಕರ್ನಾಟಕ ದೇಶದವರು ಈಗಲೂ ಮಂಗಳಕಾರ್ಯದಲ್ಲಿ ಕುಂಕುಮ ಅಥವಾ ಗಂಧಾಕ್ಷತೆ ಇಡುವರು. ಇದು ಯುಕ್ತವು.

## ವಧೂವರರಿಗೆ ಇರಬೇಕಾದ ಗುರು-ರವಿ ಬಲ.

ಮುಖ್ಯಂ ಗುರುಬಲಂ ವಧ್ವಾಃ, ವರಸ್ಯೇಷ್ಟಂ ರವೇಬಂಲಂ ॥
ಎಂದು ಹೇಳಿದಂತೆ ವಧುವಿಗೆ ಗುರುಬಲವೇ ಮುಖ್ಯ. ವರನಿಗೆ ರವಿ ಬಲವೇ ಮುಖ್ಯಎಂದು ನಿರ್ಣಯವಿದೆ. ರೂಢಿಯೂ ಹಾಗೆಯೇ ಇದೆ.

**ನಾಂದಿಯಿಟ್ಟಮೇಲೆ ಮಂಟಪೋದ್ವಾಸನೆ ಮಾಡುವ ತನಕ** ಶ್ರಾದ್ಧ ನಿಷೇಧ. ನಡುವೆ ಮಾತಾಪಿತೃಗಳ ಶ್ರಾದ್ಧವನ್ನು ಮಾಡಬಾರದು "ವೃತ್ತೇ ವಿವಾಹೇ ಪರತಸ್ತು ಕುರ್ಯಾತ್" ಎಂದು ಹೇಳುವುದರಿಂದ ತಿಳಿದೂ ತಿಳಿಯದೆಯೂ ಮಾತಾಪಿತೃಗಳ ಶ್ರಾದ್ಧದಿನವೂ ನಡುವೆ ಬಂದರೂ ತ್ರಿಪುರುಷರಲ್ಲಿ ಜ್ಞಾತಿಗಳೂ ಸಹ ವಿವಾಹ ಉಪನಯನಾದಿಗಳನ್ನು ಮಾಡಿದ

ನಂತರವೇ ಅಂದರೆ ೪ ದಿನಗಳು ೫ ದಿನಗಳು ಕಳೆದ ಮೇಲೆ ಬಿಟ್ಟ ಶ್ರಾದ್ಧ ವನ್ನು ಆಚರಿಸಬೇಕು. ಮುಂಜೀ, ವಿವಾಹಗಳಲ್ಲಿ ನಡುವೆ 4 ದಿನಗಳಲ್ಲಿ ಅಮಾವಾಸ್ಯೆ ಶ್ರಾದ್ಧವು ಬಾರದಂತೆಯೆ ಮುಹೂರ್ತಗಳನ್ನು ಇಟ್ಟುಕೊಳ್ಳ ಬೇಕು, ಕೃಷ್ಣಪಕ್ಷದ ದಶಮಿಯನ್ನು ಉಪನಯನ, ವಿವಾಹಗಳ ಮುಹೂರ್ತ ವನ್ನಾಗಿ ಮಾಡಿಕೊಂಡರೆ ಚತುರ್ದಶಿಗೆ ಮಂಗಳಕಾರ್ಯವು ಮುಗಿದು ಹೋಗುವುದರಿಂದ ಅಡ್ಡಿಯಿಲ್ಲ. ಮಧ್ಯೆ ಸಂಕ್ರಾಂತಿ ಮನ್ವಾದಿ ತಿಥಿಗಳು ಕದಾಚಿತ್ ಬಂದರೂ ಜ್ಞಾತಿಗಳೂ ಸಹ ಆಚರಿಸಬಾರದು. ಮುಂದೆ ಬಿಟ್ಟಿದ್ದಕ್ಕೆ ಹೇಳಿದ ಪ್ರಾಯಶ್ಚಿತ್ತ ಮಾತ್ರ ಮಾಡಿಕೊಂಡರೆ ಸಾಕು.

ಈಗಿನ ಕಾಲದಲ್ಲಿ ಒಂದೇದಿನ ಮುಂಜಿ, ಮದುವೆ ಮಾಡಿ ನಾಂದಿ ವಿಸರ್ಜನೆ ಮಾಡುವಪದ್ಧತಿ ಜನರಲ್ಲಿ ರೂಢಿಗೆ ಬಂದಿದೆ.

ಪ್ರತ್ಯುದ್ವಾಹೋನೈವಕಾರ್ಯೋ ನೈಕಸ್ಮೈದುಹಿತೃದ್ವಯಂ ।
ನ ಚೈಕಜನ್ಯಯೋಃ ಪುಂಸೋಃ ಏಕಜನ್ಯೇತುಕನ್ಯಕೇ ॥

ಅರ್ಥ ಇದೇ ನಿಷೇಧವಚನವು. **ಪ್ರತ್ಯುದ್ವಾಹವೆಂದರೆ** ತನ್ನ ಕನ್ನಿ ಕೆಯನ್ನು ಯಾರ ಮಗನಿಗೆ ಕೊಟ್ಟಿರುತ್ತಾನೋ ಆವನ ಕನ್ನಿಕೆಯನ್ನು (ಪುತ್ರಿ ಯನ್ನು) ತನ್ನ ಮಗನಿಗೆ ತಂದುಕೊಳ್ಳುವುದು, ಇದು ನಿಷಿದ್ಧ. ಒಂದು ಕೊಟ್ಟು ಒಂದು ತಂದುಕೊಳ್ಳುವುದೆಂಬುದು ಇದೆ. ಇದನ್ನು ಬಳ್ಳಿತಿರುಗಿಸು ವುದು ಎಂದು ವಾಡಿಕೆಯಲ್ಲಿ ಹೇಳುವರು. ಇದನ್ನು ಮಾಡಬಾರದು. ಒಬ್ಬ ನಿಗೆ ಇಬ್ಬರು ಹೆಣ್ಣುಮಗಳನ್ನು ದಾನಮಾಡಬಾರದು. ಒಬ್ಬತಂದೆಯ ಹೊಟ್ಟೆಯಲ್ಲಿ ಹುಟ್ಟಿದ ಸಹೋದರರಿಗೆ ಒಬ್ಬ ತಂದೆಯ ಹೆಣ್ಣುಮಕ್ಕಳ, ಸೋದರಿಯರನ್ನು ದಾನ ಮಾಡಕೂಡದು.

1 ಇದಕ್ಕೆ **ಅಪವಾದ ಶಾಸ್ತ್ರ** (ಆಪತ್ಕಾಲದಲ್ಲಿ ಮಾಡಬಹುದಾ ದದ್ದು) ಸೋದರರಿಗೂ ಸಮಾನ ಸಂಸ್ಕಾರಗಳಾದ ಉಪನಯನ, ಮತ್ತು ವಿವಾಹಗಳನ್ನು ಆಪತ್ಕಾಲದಲ್ಲಿ ವರ್ಷ ಭೇದವಿದ್ದು ಮಾಡಬಹುದು. ಅಂದರೆ ಈ ವರ್ಷ ಮಾಘದಲ್ಲಿ ಕನ್ನಿಕೆಗೆ ವಿವಾಹವನ್ನೂ ಮರುವರ್ಷ

ಚೈತ್ರಾದಿಮಾಸಗಳಲ್ಲಿ ಪುತ್ರನಿಗೆ ವಿವಾಹವನ್ನೂ ಮಾಡಬಹುದು, ದೋಷ ವಿಲ್ಲ, 4 ದಿನಗಳು ವ್ಯವಧಾನವಿದ್ದರೂ ಅತಿ ಆಪತ್ಕಾಲದಲ್ಲಿ ಮಾಡಬಹುದು. ಅತಿ ಅನಿವಾರ್ಯವಾದ ಆಪತ್ತಿರುವಲ್ಲಿ ಒಂದೇ ದಿನದಲ್ಲೂ ಭಿನ್ನ ಭಿನ್ನ ಕರ್ತೃಗಳು ಬೇರೆ ಬೇರೆ ಮಂಟಪಗಳಲ್ಲಿ ಮಾಡಬಹುದು.

ಇಬ್ಬರು ಕರ್ತೃಗಳು ಒಂದೇ ಲಗ್ನದಲ್ಲಿ ಒಂದೇ ಗೃಹದಲ್ಲಿ ಭಿನ್ನೋ ದರರಿಗೆ ವಿವಾಹವನ್ನು ಮಾಡಬಹುದು.

ಒಬ್ಬನಿಗೆ ಮೊದಲು ತಾನೇ ಕೊಟ್ಟ ಕನ್ಯೆಯು ಮೃತಪಟ್ಟಲ್ಲಿ ಮತ್ತೊಂದು ಕನ್ಯೆಯನ್ನು ಅವನಿಗೆ ಕೊಡಬಹುದು, ದೋಷವಿಲ್ಲ. **ಬದುಕಿರುವಾಗಲೆ ಎರಡನೇ ಕನ್ಯೆಯನ್ನು** ಅವನಿಗೆ ಕೊಡಬಾರದು ಅಷ್ಟೇ.

2 ಯಮಳರಿಗೆ ಅವಳ-ಜವಳಿಮಕ್ಕಳಿಗೆ ಏಕ ಕಾಲದಲ್ಲಿ ಒಂದೇ ಮಂಟಪದಲ್ಲಿ ಸಮಾನಸಂಸ್ಕಾರವಾದ ಉಪನಯನ-ವಿವಾಹಗಳನ್ನು ಮಾಡ ಬಹುದು, ದೋಷವಿಲ್ಲ. ತಾಯಂದಿರು ಭಿನ್ನವಾಗಿದ್ದು ಒಬ್ಬ ತಂದೆಯ ಉದರದಲ್ಲಿ ಹುಟ್ಟಿದ ಕನ್ನಿಕೆಯರಿಗೆ ಒಂದುದಿನ, ಒಂದೇಮಂಟಪದಲ್ಲಿ ವೇದಿಕೆ ಗಳನ್ನು ಬೇರೆ ಬೇರೆ ಹಾಕಿ, ವಿವಾಹ ಮಾಡಬಹುದು. ದೋಷವಿಲ್ಲ ವೆಂದು ಕೆಲವರು ಹೇಳುವರು.

## ವಿವಾಹ ನಿಶ್ಚಯವಾದ ನಂತರ ಕೆಲವು ಅಡ್ಡಿ ಬಂದರೆ ಹೇಗೆ ಮಾಡಬೇಕು

ವಿವಾಹ ನಿಶ್ಚಯವು ವರನಿಗಾಗಲಿ ಕನ್ಯೆಗಾಗಲಿ ಲೌಕಿಕವಾಗಿ ನಡೆಯು ದಿದ್ದರೂ ವೈದಿಕವಾಗಿ ಹೇಳಿದಂತೆ ವಾಗ್ದಾನವೆಂಬ ವಿಧಿಯಿಂದ ನಡೆದಿದ್ದರೂ ಅನಂತರ ತ್ರಿಪುರುಷಾತ್ಮಕ ಕುಲದಲ್ಲಿ (ಸಗೋತ್ರ) ಯಾರಾದರೂ ಮೃತ ಪಟ್ಟಲ್ಲಿ ಪ್ರತಿಕೂಲದೋಷ, ವಿವಾಹ ಮಾಡಲು ಅಡ್ಡಿಯಾದ ದೋಷವು, ಮಾಡಕೂಡದೆಂದು ಹೇಳುವರು. ಲೌಕಿಕವಾಗಿ ನಿಶ್ಚಯ ಮಾಡಿಕೊಳ್ಳುವು ದೆಂದರೆ ಲಗ್ನ, ತಿಥಿ ನಿಶ್ಚಯಮಾಡಿ ಪರಸ್ಪರ ವಚನಕೊಟ್ಟು ಫಲತಾಂಬೂ

ಲಗಳನ್ನು ಕೊಟ್ಟು ನಿಶ್ಚಯ ಮಾಡಿಕೊಳ್ಳುವುದೆಂದು ಅರ್ಥ. ಮೇಲ್ಕಂಡ ತ್ರಿಪುರುಷಾತ್ಮಕಕುಲದಲ್ಲಿ ಮೂರು ವರ್ಷಕ್ಕೆ ಹೆಚ್ಚಿನ ವಯಸ್ಕರು ಮೃತ ಪಟ್ಟವರೆಂದು ಇಟ್ಟು ಕೊಳ್ಳಬೇಕು, ವಿಶೇಷವಾಗಿ **ಪಿತಾ, ಮಾತಾ, ಪಿತಾಮಹ, ಪಿತಾಮಹಿ, ಪಿತೃವ್ಯ,** (ದೊಡ್ಡಪ್ಪ ಚಿಕ್ಕಪ್ಪ) **ವರನಹೆಂಡತಿಯು ಮಗ, ಸಹೋದರ, ಅವಿವಾಹಿತ ಭಗಿನಿಯರು** ಇವರಲ್ಲಿ ಯಾರಾದರೂ ಮೃತಪಟ್ಟರೆ ವಿಶೇಷ ದೋಷವಿರುವುದರಿಂದ ವಿವಾಹವಾಗಬಾರದು. ಇವರನ್ನು ಬಿಟ್ಟುಳಿದವರಲ್ಲಿ ತ್ರಿಪುರುಷರ ಜ್ಞಾತಿಗಳಲ್ಲಿ ಯಾರಾದರೂ ಮೃತ ಪಟ್ಟರೆ ಶ್ರೀಪೂಜನಾದಿ ಶಾಂತಿಯಿಂದ ದೋಷ ಪರಿಹಾರ ಮಾಡಿಕೊಂಡು ವಿವಾಹ ಮಾಡಬಹುದು. **ಆಪತ್ಕಾಲದಲ್ಲಿ ತಂದೆ ಮುಂತಾದವರೂ ಮೃತಪಟ್ಟರೂ ಕಾಲನಿರೀಕ್ಷೆ ಶಾಂತಿಗಳಿಂದ ದೋಷಪರಿಹಾರ ಮಾಡಿ ಶಾಂತಿ ಮಾಡಬಹುದು.** ಇದರಲ್ಲೂ ವ್ಯವಸ್ಥೆಯಿರುವುದು.

ಲಗ್ನ ನಿಶ್ಚಯ ಆದ ಮೇಲೆ ಮಾತಾಪಿತೃಗಳಿಬ್ಬರೂ ಮೃತಪಟ್ಟಲ್ಲಿ ಕಾಲ ಪ್ರತೀಕ್ಷೆ ಶಾಂತಿಗಳಿಂದಲೂ ದೋಷ ಪರಿಹಾರವಾಗುವುದಿಲ್ಲವಾದುದರಿಂದ ವಿವಾಹ ಮಾಡಕೂಡದು.

ಮಾತಾಪಿತೃಗಳಲ್ಲಿ ಯಾರಾದರೊಬ್ಬರು ಮಾತ್ರ ಮೃತಪಟ್ಟರೆ ಶಾಂತಿಯಿಂದ ವಿವಾಹ ಮಾಡಬಹುದು, ತಂದೆ ಹೋದರೆ **ಒಂದುವರ್ಷ** ಅಶುಚಿತ್ವವಿರುವುದರಿಂದ **ವಿವಾಹ ಮಾಡಬಾರದು.** ತಾಯಿಯು ಮೃತ ಪಟ್ಟರೆ ಆರು ತಿಂಗಳು ವಿವಾಹವಾಗಕೂಡದು. ತನ್ನ ಹೆಂಡತಿಯು ಮೃತ ಪಟ್ಟರೆ ಮೂರು ತಿಂಗಳು ಕೂಡದು. ಬೇರೆ ತಮ್ಮ ಜ್ಞಾತಿಗಳಲ್ಲಿ ಯಾರಾದರೂ ಮೃತಪಟ್ಟರೆ ಒಂದು ತಿಂಗಳು ಕೂಡದು. ತನ್ನ ಸಹೋದರರು ಅಥವಾ ಮಕ್ಕಳು ಮೃತಪಟ್ಟರೆ ಒಂದೂವರೆ ತಿಂಗಳು ವಿವಾಹ ಕೂಡದೆಂದು ನಿಯಮವಿರುವುದರಿಂದ ಈ ಅವಧಿಗಳು ಮುಗಿದ ನಂತರ ವಿನಾಯಕ **ಶಾಂತಿ, ಶ್ರೀಪೂಜನಾದಿ ಶಾಂತಿಯನ್ನು ಮಾಡಿಕೊಂಡೇ ವಿವಾಹ ಮಾಡಬೇಕು.**

ಮಹಾ ಆಪತ್ ಕಾಲದಲ್ಲಿ ಕನ್ಯೆಯು ಪ್ರೌಢವಯಸ್ಕಳಾಗಿದ್ದಲ್ಲಿ ಒಂದು ತಿಂಗಳ ನಂತರ ಶಾಂತಿಯನ್ನು ಮಾಡಿ ವಿವಾಹ ಮಾಡಬಹುದು. ಕಾಲ ನಿರೀಕ್ಷೆ ಮಾಡಲು ಅವಕಾಶವಿಲ್ಲದಿದ್ದಲ್ಲಿ ಮೂರು ತಿಂಗಳ ನಂತರವೂ ಶಾಂತಿ ಮಾಡಿ ವಿವಾಹ ಮಾಡಬಹುದು. ಪುತ್ರನಿಗೆ ಮಾತ್ರ ತಂದೆತಾಯಂದಿರು ಮೃತಪಟ್ಟಲ್ಲಿ ಒಂದು ವರ್ಷದ ನಂತರವೇ ವಿವಾಹ ಮಾಡಬೇಕು. ಹೆಣ್ಣು ಮಕ್ಕಳಿಗೆ ಅನಿವಾರ್ಯವಾದ್ದರಿಂದ ಶಾಂತಿ ಮಾಡಿ ಮಾಡಬಹುದು.

ಮೇಲೆ ಹೇಳಿದ ಪ್ರತಿಕೂಲ ದೋಷಪರಿಹಾರಕ್ಕಾಗಿ ವಿನಾಯಕ ಶಾಂತಿ ಅಥವಾ ಶ್ರೀ ಪೂಜನಾದಿ ಶಾಂತಿಯನ್ನು ಮಾಡಬೇಕು.

**ಅದರ ವಿಧಿಯ ಸಂಕ್ಷೇಪ.**—ಪುಣ್ಯಾಹ ಮಾಡಿ, ಅಗ್ನಿಮುಖ ಮಾಡಿಕೊಂಡು ಪ್ರಧಾನ ಹೋಮವನ್ನು ಈ ರೀತಿ ಮಾಡಬೇಕು —

'ಶ್ರಿಯೇಜಾತಃ ಇತಿ ಶ್ರಿಯಂ, ಇದಂ ವಿಷ್ಣುರಿತಿ ವಿಷ್ಣುಂ, ಗೌರೀ ರ್ಮಿಮಾಯೇತಿ ಗೌರೀಂ, ತ್ರ್ಯಂಬಕಮಿತಿ ರುದ್ರಂ, ಪರಂ ಮೃತ್ಯೋ ಇತಿ ಯಮಂಚ, ಸಂಪೂಜ್ಯ, ಅಷ್ಟೋತ್ತರ ಶತಂ ತಿಲಾಜ್ಯಂ ಜುಹುಯಾತ್. **ಓಂ ಭೂಃ ಸ್ವಾಹಾ ಮೃತ್ಯುರ್ನಶ್ಯತಾಂ ಸ್ನುಷಾಯೈ ಅಮುಕ ನಾಮ್ನ್ಯೈ ಸುಖಂ ವರ್ಧತಾಂ ಸ್ವಾಹಾ** ಇತಿ ಹೋಮಂ ಸ್ವಿಷ್ಟಕೃದಾದಿ ಸರ್ವಮಂತೇ ಕೃತ್ವಾ, ಗೋಮೂಲ್ಯ ದಕ್ಷಿಣೆಯನ್ನು (ಎರಡನ್ನು) ಕೊಡಬೇಕು.

## ಜ್ಯೇಷ್ಠನಿಗೆ ವಿವಾಹವಾಗದೇ ಕನಿಷ್ಠನಿಗೆ ವಿವಾಹ ಮಾಡಬಹುದೆ ?

ಜ್ಯೇಷ್ಠನು ಒಂದೇ ತಾಯಿಯಲ್ಲಿ ಹುಟ್ಟಿದವನಾಗಿದ್ದು ನಪುಂಸಕತ್ವ, ಮೂಕತ್ವ, ಕಿವುಡತನವಿದ್ದೂ ಅಂಗವಿಕಲನಾಗಿದ್ದು ವಿವಾಹವಾಗದೆಹೋದರೆ ಕನಿಷ್ಠನಿಗೆ ವಿವಾಹ ಮಾಡುವಲ್ಲಿ ದೋಷವಿಲ್ಲ. ಹಾಗೂ ಜ್ಯೇಷ್ಠನು ದೇಶಾಂತರಕ್ಕೆ ಹೋಗಿ ನೆಲಸಿದಾಗಲೂ, ವೇಶ್ಯಾಸಕ್ತನಾದರೂ, ಕರ್ಮ ಭ್ರಷ್ಠನಾಗಿ ಪತಿತನಾಗಿದ್ದರೂ, ಮಹಾರೋಗಿಯಾಗಿದ್ದರೂ, ಅತಿ ವೃದ್ಧ

ನಾಗಿದ್ದರೂ, ರಾಜಸೇವಾದಿಗಳಲ್ಲಿದ್ದರೂ, ವ್ಯಾಪಾರದಲ್ಲೇ ಆಸಕ್ತ ನಾಗಿದ್ದರೂ, ಹುಚ್ಚನಾಗಿದ್ದರೂ, ಅಪಸ್ಮಾರಾದಿ ದೋಷಗಳಿಂದ ವಿವಾಹಿತ ನಾಗದಿದ್ದಲ್ಲಿ ಕನಿಷ್ಠನು ವಿವಾಹ ಮಾಡಿಕೊಳ್ಳಬಹುದು. ತನಗೆ ವಿವಾಹದ ಇಚ್ಛೆಯಿಲ್ಲದಿರುವಾಗಲೂ, ಸನ್ಯಾಸಿಯಾದರೂ ಕನಿಷ್ಠನು ವಿವಾಹ ಮಾಡಿ ಕೊಳ್ಳಬಹುದು. ದೇಶಾಂತರಕ್ಕೆ ಹೋಗಿ ಬರುವ ನಿರೀಕ್ಷೆ ಇದ್ದಲ್ಲಿ ಕನಿಷ್ಠನು ನಿರೀಕ್ಷಿಸಬೇಕು. ಇದೇ ರೀತಿಯಾಗಿ ಜ್ಯೇಷ್ಠ ಕನ್ಯೆಗೆ ಮೇಲೆ ಹೇಳಿದ ದೋಷಗಳಿಂದ ವಿವಾಹವು ಆಗದಿದ್ದಲ್ಲಿ ಬೇರೆ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವಳಾಗಿದ್ದಲ್ಲೂ ಕನಿಷ್ಠಳಿಗೆ ವಿವಾಹವು ಆಗುವುದು ದೋಷವಲ್ಲ. ಆದರೆ ಈಗಿನ ಕಾಲದಲ್ಲಿ ಮೇಲ್ಕಂಡ ಯಾವ ದೋಷಗಳೂ ನಿಮಿತ್ತವೂ ಇಲ್ಲದೆ ವರನು ಲಭಿಸುವುದು ಬಹಳ ವಿಳಂಬವಾಗಿ ವಿವಾಹವು ನಿಂತರೆ ಕನಿಷ್ಠಳಿಗೆ ವಿವಾಹವು ದೋಷಕರವಲ್ಲ. ಅನ್ಯಥಾ ದೋಷವಿರುವುದು.

ದಾರಾಗ್ನಿಹೋಮ ಸಂಯೋಗಂ ಕುರುತೇ ಯೋಗ್ರಜೇ ಸ್ಥಿತೇ ।
ಸ ಕನಿಷ್ಠಃ ಪರಿವೇತ್ತಾ ಜ್ಯೇಷ್ಠಃ ಪರಿವಿತ್ತಿಃ ॥ ಎಂದು ಹೆಸರು.

ಈ ರೀತಿಯಾಗಿ ಜ್ಯೇಷ್ಠಳು ವಿವಾಹವಾಗದೆ ಕನಿಷ್ಠಳಿಗೆ ವಿವಾಹ ಮಾಡಿದಲ್ಲಿ ಜ್ಯೇಷ್ಠಕನ್ಯೆಗೆ **ದಿಧಿಷು,** ಕನಿಷ್ಠಳಿಗೆ **ಅಗ್ರೇದಿಧಿಷು** ಎಂದು ಹೇಳಿದ ಇಬ್ಬರಿಗೂ ಅಜ್ಞಾನದಿಂದ ತಂದೆಯು ವಿವಾಹ ಮಾಡಿಸಿದಲ್ಲಿ ಪ್ರಾಯಶ್ಚಿತ್ತವುಂಟು. ಜ್ಞಾನವಿದ್ದು ವಿವಾಹ ಮಾಡಿದವರಿಗೂ, ಮಾಡಿಸಿ ಕೊಂಡವರಿಗೂ ಪ್ರಾಯಶ್ಚಿತ್ತವುಂಟು.

ಜ್ಯೇಷ್ಠಪುತ್ರನು ದತ್ತುಪುತ್ರನಾಗಿದ್ದರೂ, ಮಲತಾಯಿಯ ಮಗ ನಾಗಿದ್ದರೂ ಕನಿಷ್ಠನು ವಿವಾಹ ಮಾಡಿಕೊಳ್ಳುವಲ್ಲಿ ದೋಷವಿಲ್ಲ. ಹೀಗೆಯೇ ಪ್ರತ್ಯೇಕವಾಗಿ ಅಗ್ನಿಹೋತ್ರವಿದ್ದರೂ ದೋಷವಿಲ್ಲ.

## ಬ್ರಾಹ್ಮಣರಿಗೆ ಯಾವ ವಿವಾಹವು ಶ್ರೇಷ್ಠ ?

ಯೋಗ್ಯರಾದ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದ ವರನಿಗೆ ಋತುಮತಿ ಯಾಗದ ಅಲಂಕೃತ್ಯ ಕನ್ಯಾದಾನ ಶಾಸ್ತ್ರೋಕ್ತರೀತಿಯಲ್ಲಿ ಮಾಡುವುದು ಶ್ರೇಷ್ಠ. ಇದೇ ಬ್ರಾಹ್ಮವಿವಾಹವೆಂದು ಅರ್ಥವಾದ ಹೆಸರು. ಇದೇ ಬಹು ಕಾಲದಿಂದ ಚಾಲ್ತಿಗೆ ಬಂದ ಪದ್ಧತಿ. ವಧೂವರರು ತಮ್ಮ ಇಚ್ಛೆ ಯಿಂದ ಮಾಡಿಕೊಳ್ಳುವ ಸಂಬಂಧವು **ಗಾಂಧರ್ವ ವಿವಾಹ.** ಇದು ಕ್ಷತ್ರಿಯರಿಗೆ ಮಾತ್ರ ಹೇಳಿದ್ದು. ಬ್ರಾಹ್ಮಣರಿಗೆ ಯೋಗ್ಯವಲ್ಲ. ಇದು ಧಾರ್ಮಿಕ ವಿವಾಹವಾಗುವುದಿಲ್ಲ.

**ಋತುಮತೀ ವಿವಾಹವು** ಕಾಲಕ್ರಮದಲ್ಲಿ ಎಲ್ಲ ಜನರಲ್ಲೂ ಚಾಲ್ತಿಗೆ ಬಂದಿದೆ. ಅದು ನಿಷಿದ್ಧವೆಂದು ಶಾಸ್ತ್ರವು ಸಾರಿದರೂ ಕೇಳುವವರೇ ಇಲ್ಲ. ಆದ ಕಾರಣ ಅನಿವಾರ್ಯವಾದ ಈ ಪ್ರೌಢವಿವಾಹದಲ್ಲಿ ಬಂದ ದೋಷ ಪರಿಹಾರಕ್ಕಾಗಿ ಕೆಲವು ಶಾಸ್ತ್ರೋಕ್ತ ವಿಧಿಯು ಅವಶ್ಯ ಕರ್ತವ್ಯವಾಗಿದೆ.

೧ ವಿವಾಹಕ್ಕೆ ಮೊದಲೇ ಋತುಮತಿಯಾಗಿದ್ದಲ್ಲಿ ಕನ್ಯಾದಾನ ಮಾಡುವವನು ಋತುಸಂಖ್ಯೆಯನ್ನು ಗಣನೆಮಾಡಿಕೊಂಡು ಗೋದಾನಗಳನ್ನು ಅಥವಾ ಅದಕ್ಕೆ ಬದಲು ಯಥಾಶಕ್ತಿ ದಕ್ಷಿಣೆಯನ್ನೋ, ಬ್ರಾಹ್ಮಣ ಭೋಜನ ವನ್ನೋ ಮಾಡಿಸಬೇಕು. ಆಗ ಅವನು ಕನ್ಯಾದಾನಕ್ಕೆ ಅರ್ಹನಾಗುವನು.

೨ ಕನ್ಯಾಮಣಿಯು ಮೂರು ದಿನ ಉಪವಾಸ ಮಾಡಿ ಹಸುವಿನ ಹಾಲನ್ನು ಕುಡಿದುಕೊಂಡಿದ್ದು ಬ್ರಾಹ್ಮಣ ಕುಮಾರಿಗೆ ಯಥಾಶಕ್ತಿ ಆಭರಣ ದಾನ ಮಾಡಿದಲ್ಲಿ ವಿವಾಹಕ್ಕೆ ಯೋಗ್ಯಳಾಗುವಳು. ಈಗಿನ ಕಾಲದಲ್ಲಿ ಚಿನ್ನದ ಆಭರಣ ಕೊಡಲು ಶಕ್ಯವಿಲ್ಲವಾದ್ದರಿಂದ ಯಥಾಶಕ್ತಿ ತೃಪ್ತಿಕರವಾದ ದಕ್ಷಿಣಾದಾನ ಮಾಡಬೇಕು.

ವರನೂ ಕೂಡ ಕೂಷ್ಮಾಂಡ ಹೋಮ ಮಾಡಿಕೊಂಡಲ್ಲಿ ಈ ಕನ್ಯಾ ವಿವಾಹ ಮಾಡಿಕೊಂಡರೂ ದೋಷಿಯಾಗುವುದಿಲ್ಲ. ವಿವಾಹ ಹೋಮ

ಕಾಲದಲ್ಲೇ ರಜಸ್ವಲೆಯಾದಲ್ಲಿ ಆ ವಧುವನ್ನು ಸ್ನಾನಮಾಡಿಸಿ 'ಯುಂಜಾನಃ ಪ್ರಥಮಂ' ಎಂಬ ತೈತ್ತಿರೀಯ ಮಂತ್ರದಿಂದ ಪ್ರಾಯಶ್ಚಿತ್ತ ಹೋಮ ಮಾಡಿ ಹೋಮತಂತ್ರವನ್ನು ಮುಗಿಸಬೇಕು.

ಯಾರೂ ದಾತೃಗಳು ಇಲ್ಲದ ವಧು ಋತುಮತಿಯಾಗಿದ್ದಲ್ಲಿ ಮೂರು ವರ್ಷ ನಿರೀಕ್ಷಿಸಿ ಸ್ವಯಂ ತಾನೇ ಯೋಗ್ಯ ವರನನ್ನು ವರಿಸಬಹುದು. ಇಂತಹ ಸಂದರ್ಭದಲ್ಲಿ ವರನಿಗೂ ದೋಷವಿಲ್ಲ.

ಈಗಿನ ಕಾಲದಲ್ಲಿ ಪ್ರೌಢವಿವಾಹವು ಹೆಚ್ಚಾಗಿರುವುದರಿಂದ ಕನ್ಯಾದಾತೃ ವರ, ಕನ್ಯೆ ಈ ಮೂರು ಜನರೂ ದೋಷಪರಿಹಾರ ಮಾಡಿಕೊಳ್ಳುವುದು ಸೂಕ್ತವೆಂದು ತೋರುತ್ತದೆ.

## ಕನ್ಯಾದಾನ ಮಾಡುವ ಹಕ್ಕು ಯಾರಿಗೆ ?

ತಂದೆ. ಪಿತಾಮಹ (ಅಜ್ಜ), ಸಹೋದರ (ಜ್ಯೇಷ್ಠಭ್ರಾತೃ). ಪಿತೃ ಕುಲಕ್ಕೆ ಸೇರಿದ ದೊಡ್ಡಪ್ಪ, ಚಿಕ್ಕಪ್ಪ, ಇತ್ಯಾದಿ. ಮಾತೃಕುಲಕ್ಕೆ ಸೇರಿದ ಮಾತಾಮಹ (ತಾಯಿಯ ತಂದೆ), ಸೋದರಮಾವ ಮೊದಲಾದವವರು. ಈ ರೀತಿಯಾಗಿ ಹಿಂದೆ ಹಿಂದಿನ ದಾತೃವು ಇಲ್ಲದಿದ್ದರೆ ಮುಂದು ಮುಂದಿನ ದಾತೃವು ಗ್ರಾಹ್ಯ, ಕನ್ಯಾದಾನ ಮಾಡಲು ಅಧಿಕಾರಿಯಾಗುವರು. ಮೇಲೆ ಹೇಳಿದ ಪಿತಾ, ಪಿತಾಮಹಾದಿಗಳು ಯಾರೂ ಇಲ್ಲದಿದ್ದರೆ ತಾಯಿಯೇ ಧಾರೆ ಎರೆಯಬಹುದು. 'ಪೂರ್ವಾಭಾವೇ ಪರಃ ಪರಃ' ಎಂಬುದೇ ಶಾಸ್ತ್ರ.

ಸಹೋದರರು ಉಪನಯನವಾದವರೆ ಕನ್ಯಾದಾನ ಮಾಡಲು ನಿಲ್ಲ ಬಹುದು. ಉಪನಯನವಾಗದೇ ಇರುವ ಸಹೋದರನಿದ್ದರೂ ತಾಯಿಯೇ ಕನ್ಯಾ ಧಾರೆಯೆರೆಯಬೇಕು. ಈತನಿಗೆ ಅಧಿಕಾರವಿಲ್ಲ. ತಂದೆ ತಾಯಿಯೂ ಇಲ್ಲವಾದರೆ ಸ್ವಯಂ ತಾನೇ ವರನನ್ನು ವರಿಸಬೇಕು.

ಕನ್ಯೆಯು ವರಿಸುವಾಗ ತಾಯಿಯು ಧಾರೆ ಎರೆಯುವುದಾದರೆ ನಾಂದಿಯನ್ನು ತಾಯಿಯೇ ಮಾಡಬೇಕು. ಆದರೆ ಈ ರೀತಿ ಮಾಡಲು ತಾಯಿ ಒಪ್ಪುವುದಿಲ್ಲ. ಆಗ ಕನ್ಯೆಯು ಮಾಡಬಹುದು. ಹೀಗೆ ಮಾಡುವಾಗ ಪ್ರಧಾನ ಸಂಕಲ್ಪವನ್ನು ಮಾತ್ರ ಮಾಡಿ ಬಾಕಿ ಕಾರ್ಯವನ್ನು ಬ್ರಾಹ್ಮಣ ಪುರೋಹಿತರ ಮೂಲಕ ಮಾಡಬೇಕು.

ವರನಿಗೆ ಉಪನಯನವಾಗಿದ್ದ ಸಹೋದರರು ಯಾರೂ ಇಲ್ಲದಿರುವಾಗ ನಾಂದಿಯನ್ನು ತಾನೇ ಮಾಡಬೇಕು. ವರನ ತಾಯಿಯೇ ಮಾಡಬಾರದು. ವರನಿಗೆ ಉಪನಯನವಾಗಿರುವುದರಿಂದ ಕರ್ಮಾಧಿಕಾರವು ಹುಟ್ಟಿಕೊಂಡಿದೆ ಎಂಬುದೇ ಕಾರಣ. **ದ್ವಿತೀಯ ತೃತೀಯ ವಿವಾಹ ಮಾಡಿಕೊಳ್ಳುವಾಗ ವರನೇ ನಾಂದಿ ಮಾಡಬೇಕು.**

ಮತ್ತೊಬ್ಬರ ಕನ್ಯೆಯನ್ನು ದಾನ ಮಾಡುವಾಗ ಒಂದು ವಿಶೇಷವಿದೆ–

ಆತ್ಮೀಕೃತ್ಯ ಸುವರ್ಣೇನ ಪರಕೀಯಾಂ ತು ಕನ್ಯಕಾಂ ।
ಧರ್ಮೇಣ ವಿಧಿನಾ ದಾನಂ ಅಸಗೋತ್ರೇಽಪಿ ಯುಜ್ಯತೇ ॥

ಇನ್ನೊಬ್ಬರ ಕನ್ನಿಕೆಯನ್ನು ದುಡ್ಡುಕೊಟ್ಟು ಕೊಂಡು ತನ್ನದಾಗಿ ಮಾಡಿಕೊಂಡು ಶಾಸ್ತ್ರೋಕ್ತ ರೀತಿಯಲ್ಲಿ ಧರ್ಮಬುದ್ಧಿಯಿಂದ ದಾನ ಮಾಡಬಹುದು. ಇದು ಸಗೋತ್ರವಲ್ಲದಿದ್ದರೂ ಆಗಬಹುದು.

## ವಿವಾಹ ಉಪನಯನ ಮಾಡುವವನ ಹೆಂಡತಿಯು ರಜಸ್ವಲೆಯಾದರೆ ಹೇಗೆ ಮಾಡಬೇಕು ?

**ತಾಯಿಯು ಬಹಿಷ್ಠೆಯಾದರೆ ಮುಂಜಿ, ವಿವಾಹಗಳನ್ನು ಮಾಡಕೂಡದು.** ತಂದೆಯು ಹತ್ತಿರದಲ್ಲಿ ಇಲ್ಲದಿರುವಾಗ ಸೋದರ ಮಾವ ಅಥವಾ ಜ್ಯೇಷ್ಠಭ್ರಾತಾ (ಹಿರಿಯ ಅಣ್ಣ) ಮುಂತಾದವರು ಮುಂಜಿ, ವಿವಾಹಗಳನ್ನು ಮಾಡಲು ನಿಂತರೂ ಅವರ ಹೆಂಡತಿಯರು ಹೊರಗಾದಲ್ಲಿ

ಮುಂಜಿ ವಿವಾಹಗಳನ್ನು ಮಾಡಕೂಡದು. ಆದರೆ ನಾಂದಿಯನ್ನು ಮಾಡಿದ ನಂತರ ತಾಯಿಯು ಹೊರಗಾದರೆ ಸಹೋದರ ಮೊದಲಾದವರು ಮಾಡ ತಕ್ಕವರು ಇದ್ದರೂ ಹತ್ತಿರದಲ್ಲಿ ಬೇರೆ ಮುಹೂರ್ತವು ಸಿಕ್ಕದಿರುವಾಗ ಶಾಂತಿಯನ್ನು ಮಾಡಬೇಕು. ಬೇರೆ ಮುಹೂರ್ತ ಸಿಕ್ಕಿದರೆ ಆವಾಗಲೇ ಮಾಡಬೇಕು. ನಾಂದಿಯಾದ ನಂತರ ಸೋದರಮಾವ ಮೊದಲಾದವರ ಹೆಂಡತಿಯರು ಹೊರಗಾದರೆ ಉಪನಯನ, ವಿವಾಹಾದಿಗಳು ನಾಂದಿಯಿಂದಲೆ ಆರಂಭವಾಗಿರುವುದರಿಂದ ಶಾಂತಿಯಿಲ್ಲದೆಯೂ ಮಾಡಬಹುದು.

ಕೆಲವರ ಮತದಲ್ಲಿ ಮುಂಜಿ ವಿವಾಹಗಳನ್ನು ನಡೆಸಿದ ಮೇಲೂ ಮಂಟಪವಿಸರ್ಜನೆ ಮಾಡುವ ಮುಂಚೆಯೇ ತಾಯಿಯು ಹೊರಗಾದರೆ ಶಾಂತಿಯನ್ನು ಮಾಡಬೇಕು. ಮಂಗಳಕಾರ್ಯವು ಮುಗಿದಿಲ್ಲವೆಂಬ ಕಾರಣ ವನ್ನು ಕೊಟ್ಟು ಮುಹೂರ್ತ ಚಿಂತಾಮಣಿಯ ಟೀಕೆಯಲ್ಲಿ ಕರ್ತವ್ಯವೆಂತ ಹೇಳಿದೆ.

ಪ್ರಾರಂಭಕ್ಕಿಂತ ಮುಂಚೆಯೂ ಹೊರಗಾದರೆ ಬೇರೆ ಮುಹೂರ್ತವು ಲಭಿಸದಿರುವಾಗ ಇಂತಹ ಆಪತ್ತಿನಲ್ಲಿ ಶಾಂತಿಯನ್ನು ಮಾಡಿಯೇ ಮುಂಜಿ, ವಿವಾಹಗಳನ್ನು ಆಚರಿಸಬೇಕು.

## ಶಾಂತಿ ಮಾಡುವ ವಿಧಿ

" ಮಮ ಕುಮಾರಸ್ಯ, ಕುಮಾರ್ಯಾವಾ ಅಸ್ಮಿನ್ ಉಪನಯನ ಮಂಗಳ ಕಾರ್ಯೇ (ವಿವಾಹ ಮಂಗಳಕಾರ್ಯೆ) ಸಂಸ್ಕಾರ್ಯ ಜನನೀರಜೋದೋಷ ಜನಿತ ಸೂಚಿತಾಶುಭಫಲ ನಿರಾಸಾರ್ಥಂ ಶುಭಫಲಾವಾಪ್ತ್ಯರ್ಥಂ ಶ್ರೀ ಪೂಜನಾದಿ ಶಾಂತಿಂ ಕರಿಷ್ಯೇ " ಎಂದು ಸಂಕಲ್ಪಮಾಡಿ ಲಕ್ಷ್ಮೀದೇವಿಯನ್ನು ಶ್ರೀಸೂಕ್ತದಿಂದ ಷೋಡಶೋಪಚಾರ ಪೂಜೆಮಾಡಿ, ಸ್ವಗೃಹ್ಯೋಕ್ತ ವಿಧಿ ಯಿಂದ ಶ್ರೀಸೂಕ್ತದ ಪ್ರತಿಋಕ್ಕುಗಳಿಂದ ಪಾಯಸ ಹೋಮಮಾಡಿ, ಕಲ ಶೋದಕದಿಂದ ಅಭಿಷೇಕಮಾಡಿ, ವಿಷ್ಣು ಸ್ಮರಣೆಮಾಡಿ ಮುಗಿಸಬೇಕು.

## ಪ್ರೇತ ಸಂಸ್ಕಾರಗಳನ್ನು ಮಾಸಿಕಗಳನ್ನು ಮುಗಿಸದೆ ವಿವಾಹ ಉಪನಯನಗಳನ್ನು ಮಾಡಬಾರದು

ಪ್ರೇತಕರ್ಮಾಣ್ಯ ನಿರ್ವರ್ತ್ಯ ಚರೇನ್ನಾಭ್ಯುದಯಕ್ರಿಯಾಂ ।
ಆ ಚತುರ್ಥಂ ತತಃ ಪುಂಸಿ ಪಂಚಮೇ ಶುಭದಂ ಭವೇತ್ ॥

**ಪ್ರೇತಕರ್ಮವೆಂದರೆ** ಮೃತನಿಗೆ ಮಾಡುವ ಉತ್ತರ ಕ್ರಿಯೆಗಳೂ ಏಕೋದ್ದಿಷ್ಟ ಮತ್ತು ಸಪಿಂಡೀಕರಣ ತದನಂತರ ವರ್ಷ ಪರ್ಯಂತರ ಮಾಡುವ ಮಾಸಿಕಾನುಮಾಸಿಕಗಳು, **ಹದಿನಾರು ಮಾಸಿಕಗಳು** ಇವುಗಳನ್ನು ಪೂರೈಸದೆ ನಾಂದೀಯುಕ್ತವಾದ ಮಂಗಳಕಾರ್ಯವನ್ನು ಆಚರಿಸಬಾರದು. ಕೆಲವರು ವಿವಾಹ ಉಪನಯನಾದಿಗಳನ್ನು ಅಭ್ಯುದಯ ಕ್ರಿಯಾ ಎಂದು ಹೇಳುವರು. ಅದನ್ನೂ ಮಾಡಬಾರದು.

ಈ ಅಪಕರ್ಷಕರ್ಮವು ಕೇವಲ ಮಾಸಿಕಗಳಿಗೆ ಮಾತ್ರವೆಂದು ನಿರ್ಣಯಸಿಂಧು, ಧರ್ಮಸಿಂಧು, ಮುಂತಾದ ನಿಬಂಧಗಳಿದ್ದರೂ ಧರ್ಮಪ್ರವೃತ್ತಿಯಲ್ಲಿ ಮಾತ್ರ ಮಾಸಿಕಾಪಕರ್ಷದಂತೆ ಅಬ್ದವಿಮೋಕವನ್ನು ಅಪಕರ್ಷಮಾಡಬೇಕೆಂದು ಹೇಳಿದೆ. ಆದರೆ ಇದಕ್ಕೆ ಆಧಾರವು ಸಿಕ್ಕಿಲ್ಲ.

ಹನ್ನೆರಡನೆದಿನ ಸಪಿಂಡೀಕರಣಮಾಡಿ ಅದಕ್ಕಾಗಿ ಒಂದಾವರ್ತಿ ಷೋಡಶ ಮಾಸಿಕಗಳನ್ನು ಅಪಕರ್ಷ ಮಾಡಿದ್ದರೂ ಸಪಿಂಡಿಯಾದ ಮೇಲೂ ವರ್ಷಪರ್ಯಂತರ ಪುನಃ ಪ್ರತಿ ಮಾಸದಲ್ಲೂ ಕ್ರಮವಾಗಿ ಮಾಡಬೇಕು. ಮೊದಲು ಸಪಿಂಡೀಕರಣಕ್ಕಾಗಿಯೇ ಮಾಡಿದ ಅಪಕರ್ಷವಿದು. ಮಂಗಳಕಾರ್ಯವನ್ನು ಮಾಡಬೇಕಾದ ಸಂದರ್ಭ ಇದ್ದಲ್ಲಿ ಪುನಃ ಮಂಗಳಕಾರ್ಯ ಮಾಡುವ ತಿಂಗಳಿನ ಹಿಂದೆಯೆ ಒಂದು ಮಾಸದಲ್ಲಿ ಉಳಿದ ಎಲ್ಲಾ ಮಾಸಿಕಗಳನ್ನು ಅಪಕರ್ಷಮಾಡಿ ಪೂರೈಸಬೇಕು. ಅನಂತರ ಉಪನಯನಗಳನ್ನು ಮತ್ತು ವಿವಾಹಗಳನ್ನು ಮಾಡಬಹುದು. ಈ ಮಂಗಳಕಾರ್ಯವಾದ ನಂತರ ಪುನಃ ಮಾಸಿಕಗಳನ್ನು ಮಾಡಬಾರದು. ವೃದ್ಧ್ಯುತ್ತರ ನಿಷೇಧನ್ನಾತ್ ! ಎಂಬುದಾಗಿ ನಿಷೇಧಮಾಡಿದೆ.

**'ಪೇತಾ ಭದ್ರಂ ಕೃಣವಾನ್ನಿಸ್ವಧಾಭಿಃ'** ಎಂಬ ವೇದ ವಾಕ್ಯವನ್ನು ಧರ್ಮ ಸಿಂಧುಕಾರರು ಈ ನಿಷೇಧಕ್ಕೆ ಉದಾಹರಣೆ ಕೊಟ್ಟಿರುವರು. ಇದು **ಧರ್ಮ ಸಿಂಧೂಕಾರರ ಮತವು.**

## ವೈದ್ಯನಾಥೀಯ ವಿಶೇಷ ಶಾಸ್ತ್ರ

ಹೀಗಿದ್ದರೂ ವೈದ್ಯನಾಥೀಯದಲ್ಲಿ ವೈದ್ಯನಾಥರು ಮಾತಾ ಪಿತೃ ವಿಷಯದಲ್ಲಿ ಶುಭವು ಬಂದಲ್ಲಿ ಅಪಕರ್ಷಮಾಡಿ ಪುನಃ ಮಾಡಿದ್ದರೂ ಪುನಃ ಸ್ವಸ್ವಕಾಲದಲ್ಲಿ ಮೂರನೆ ಆವೃತ್ತಿ ಮಾಸಿಕವಮಾಡಬೇಕೆಂದು ಹೇಳಿ ಪುತ್ರನಿಗೆ ವಿಧಿಸಿದ್ದಾರೆ. ಇದಕ್ಕೆ ಪ್ರಯೋಗ ಪಾರಿಜಾತವನ್ನು ಉದಾಹರಿಸಿ ದ್ದಾರೆ.

ಮಾಸಿಕಾನ್ಯಸಮಾಪ್ಯೈವ ನಾಂದೀಶ್ರಾದ್ಧಂ ನಕಾರಯೇತ್ ।
ಸಮಾಪ್ಯಚ ಪುನಃ ಕಾಲೇ ಪಿತ್ರೋರ್ಮಾಸಿಕಮಾಚರೇತ್ ॥

## ಗೋತ್ರಪ್ರವರವಿಚಾರ

1 ಸಪಿಂಡ ಅಥವಾ ಸಗೋತ್ರವಿವಾಹವೂ ಸಮಾನಪ್ರವರವಿರುವ ವಿವಾಹಗಳೂ ಶಾಸ್ತ್ರೀಯವಲ್ಲ. ಅಂಥಾ ವಿವಾಹವು ನಡೆದರೂ ಪಾಪಕರ, ಧಾರ್ಮಿಕ ವಿವಾಹವಾಗಲಾರದು, ಸನಾತನ ಧರ್ಮಾಭಿಮಾನಿಗಳು ಈ ಬಗೆಯ ವಿವಾಹವನ್ನು ಅಗತ್ಯ ದೂರಿಕರಿಸಬೇಕು,

2 ಅನನ್ಯಪೂರ್ವಿಕಾಂತಾಂ ತಾಂ ಅಸಪಿಂಡಾಂ ಯವೀಯಸೀಂ ।
ಅರೋಗಿಣೀಂ ಭ್ರಾತೃಮತೀಮ ಸಮಾನಾರ್ಷಗೋತ್ರಜಾಂ ॥

ಎಂದು ಯಾಜ್ಞವಲ್ಕ್ಯಾದಿಗಳು ಹೇಳಿದಂತೆ ಹಿಂದೆ ಇನ್ನೊಬ್ಬ ಪುರಷನೊಂದಿಗೆ ವಿವಾಹವಾಗದಿರುವ ಸಪಿಂಡರಲ್ಲದ ಸಮಾನಗೋತ್ರ ಸಮಾನಪ್ರವರವಲ್ಲದೆ, ರೋಗವಿಲ್ಲದ, ಸಹೋದರರಿರುವ ತನಗೆ ಚಿಕ್ಕವಳಾಗಿರುವಂಥ ವಧುವನ್ನೆ ವಿವಾಹ ಮಾಡಿಕೊಳ್ಳಬೇಕು. ಸವರ್ಣವಿವಾಹವನ್ನು ಮಾಡಿಕೊಳ್ಳಬೇಕು,

ಅನನ್ಯಪೂರ್ವಿಕ ಎಂಬುದಕ್ಕೆ ಅರ್ಥವಿದು. ಅನನ್ಯಪೂರ್ವಕಳಾಗಿರಬಾರದು, ಅನ್ಯಪೂರ್ವಿಕ ಎಂದರೆ ಬೇರೆ ಪುರುಷನು ಮೊದಲೇ ಪತಿಯಾಗಿ ವರಿಸಲ್ಪಟ್ಟಿರುವವಳು, ಮನೋದತ್ತಾ, ವಾಚಾದತ್ತಾ, ಅಗ್ನಿಪರಿಗತಾ. ಸಪ್ತಪದಿಯಾಗಿರುವವಳು, ಮತ್ತೊಬ್ಬನಿಂದ ಭೋಗಿಸಲ್ಪಟ್ಟವಳೂ, ಗರ್ಭವನ್ನು ಧರಿಸಿಡವಳೂ, ಮಗುವನ್ನು ಹೆತ್ತವಳೆಂದು ಎಂಟು ಬಗೆಯಾಗಿರುವವರು, ಹೀಗೆ ಆಗದವಳು ಅನನ್ಯ ಪೂರ್ವಿಕಾ—ಎಂದು ಮೇಲಿನ ಸ್ಮೃತಿಯ ಪದದ ಅರ್ಥ.

## ವಿವಾಹಕ್ಕೆ ಪ್ರತಿಕೂಲವಾದ ಸಾಪಿಂಡ್ಯನಿರ್ಣಯ

1 ಸಪಿಂಡವೆಂದರೆ ಒಂದೇ ಸಮಾನವಾದ ಪಿಂಡದಾನವು, ಅಥವಾ ಸಮಾನವಾದ ಮೂಲಪುರುಷ ಶರೀರವೂ ಉಳ್ಳವಳು ಸಪಿಂಡಳು, ಹಾಗಿಲ್ಲದವಳು ಅಸಪಿಂಡಳೆಂದು, ಮೇಲಿನ 'ಅಸಪಿಂಡಾಮ್' ಎಂಬ ಸ್ಮೃತಿವಾಕದಲ್ಲಿರುವ ಪದದ ಅರ್ಥ.

ಲೇಪಭಾಜಶ್ಚತುರ್ಥಾದ್ಯಾಃ ಪಿತ್ರಾದ್ಯಾ ಪಿಂಡಭಾಗಿನಃ ।
ಪಿಂಡದಃ ಸಪ್ತಮಸ್ತೇಷಾಂ ಸಾಪಿಂಡ್ಯಂ ಸಾಪ್ತಪೌರುಷಂ ॥

ಎಂದು ಮತ್ಸ್ಯಪುರಾಣ ವಚನವಿದೆ. ಇದರಿಂದ ಪಿಂಡಪ್ರದಾನ ಮಾಡುವ ಕರ್ಮದಲ್ಲಿ ಪಿಂಡದಾನ ಮಾಡುವ ದಾತೃತ್ವವೂ, ಪಿಂಡಕ್ಕೆ ಭಾಗಿಗಳಾಗುವುದೂ, ಲೇಪಭಾಗಿಗಳಾಗುವುದೂ ಈ ಮೂರರಲ್ಲಿ ಯಾವುದೇ ಒಂದು ನಿಮಿತ್ತವಿದ್ದರೂ ಸಾಪಿಂಡ್ಯವಿರುವುದು. (ಅಂದರೆ ಅವನು ಸಪಿಂಡನಾಗುವನು, ಎಂಬುದು ಕೆಲವರ ಮತವಿದೆ,

2 ಸ್ತ್ರೀಯರಿಗೂ ತಮ್ಮ ಪತಿಯರೊಂದಿಗೆ ಕರ್ಮದಲ್ಲಿ ಸಹಭಾಗವಿರುವುದರಿಂದ ಸಾಪಿಂಡ್ಯವಿರುವುದು. ಮೂಲಪುರುಷನ ಸೂಕ್ಷ್ಮಾವಯವಗಳು (ಸೂಕ್ಷ್ಮ ಕಣಗಳು) ಬಂದು ಸೇರುವುದರಿಂದ ಸಾಪಿಂಡ್ಯವೆಂದು ಮತ್ತೊಬ್ಬರ ಮತವೂ ಇದೆ. ಆದರೆ ಸಹೋದರರ ಹೆಂಡರಲ್ಲಿ ಮೂಲ

ಪುರುಷನ ಶರೀರಾವಯವಗಳು ಸಂಭವಿಸುವಂತೆ ಕಾಣುವುದಿಲ್ಲ. ಆದರೂ ಪುತ್ರನ ಮೂಲಕ ಆವರ ಹೆಂಡರಲ್ಲೂ ಅವು ಸೇರಿಕೊಳ್ಳಬಹುದು, ಪುತ್ರನ ವೀರ್ಯಾಣುಗಳು ಹೆಂಡರಲ್ಲಿ ಸೇರುವ ಅವಕಾಶವಿದೆ. ಆದರೆ ಈ ಕೊನೆಯ ಮತವು ಸಾಪಿಂಡ್ಯ ನಿರ್ಣಯಕ್ಕೆ ಯೋಗ್ಯವಲ್ಲ. ಇಂತಹ ಸೂಕ್ಷ್ಮ ಕಣಗಳು ಏಳನೇ ತಲೆಮಾರಿನಿಂದ ಆಚೆಗೂ ಒಂದು ನೂರು ತಲೆಮಾರಿನ ವರೆಗೂ ಸೇರಿಕೊಳ್ಳಬಹುದು. ಅದು ಸಾಪಿಂಡ್ಯ ನಿರ್ಣಯಕ್ಕೆ ಕಾರಣವಲ್ಲ. ನೂರು ತಲೆಮಾರಿನ ವರೆಗೂ ಎಲ್ಲರೂ ಸಪಿಂಡರೆಂಬುದನ್ನು ಸ್ಮೃತಿಕಾರರು ಯಾರೂ ಒಪ್ಪುವುದಿಲ್ಲ.

ಗಯಾದಿಕ್ಷೇತ್ರ ಶ್ರಾದ್ಧಮಾಡುವಾಗ ಸಪಿಂಡರಲ್ಲದ ಮಿತ್ರರಿಗೂ ಆಪ್ತರಿಗೂ ತನ್ನಗುರು ಆಚಾರ್ಯಮೊದಲಾದವರಿಗೂ ಪಿಂಡದಾನ ಮಾಡುವುದು ವಿಧಿಯಂತೆ ಆಚರಣೆಯಲ್ಲಿರುವುದು. ಅದರಿಂದ ಮೊದಲು ಹೇಳಿದ್ದೆ ಸರಿ.

ವಧ್ವಾವರಸ್ಯವಾ ತಾತಃ ಕೂಟಸ್ಥಾದ್ಯದಿ ಸಪ್ತಮಃ ।
ಪಂಚಮೀಚೇತ್ತಯೋರ್ಮಾತಾ ತತ್ಸಾಪಿಂಡ್ಯಂನಿವರ್ತತೇ ॥

ವಧುವಿನ ಅಥವಾ ವರನತಂದೆಯು ಮೂಲಪುರುಷನಿಂದ ಏಳನೆಯವನಾದರೆ ವರನಿಗೆ ಸಾಪಿಂಡ್ಯವು ಹೋಗುವುದು. ಹಾಗೂ ತಾಯಿಯ ಮೂಲಪುರುಷನಿಂದ ಐದನೆಯವಳಾದರೂ ಸಾಪಿಂಡ್ಯವು ಹೋಗುವುದು. ಈ ಮೇಲಿನ ವಚನದಂತೆ ಕೊನೆಯ ಮತವನ್ನು ಕೈಬಿಡಬೇಕು.

## ಸಾಪಿಂಡ್ಯದ ನಿರ್ಣಯ

ತಾಯಿಯ ಸಂಬಂಧವಾಗಲಿ, ತಂದೆಯ ಸಂಬಂಧವಾಗಲಿ ಇದ್ದರೆ ಮಾತ್ರ ಐದನೆ ತಲೆಯವರೆಗೂ ಮಾತೃಮೂಲಕ ಸಾಪಿಂಡ್ಯವು ಇರುವುದು, ಏಳನೆಯ ತಲೆಪರ್ಯಂತ ಪಿತೃಮೂಲಕ ಸಾಪಿಂಡ್ಯವು ಇರುವುದು. ಪಿತೃಮೂಲಕ ಸಾಪಿಂಡ್ಯವು ಏಳನೆ ತಲೆಯಿಂದಾಚೆಗೆ ನಿವೃತ್ತವಾಗುವುದು. ಮಾತೃಮೂಲಕವಾದರೆ ಐದುತಲೆಯಮೇಲೆ ನಿವೃತ್ತವಾಗುವುದು, ಅಲ್ಲಿಂದ ಆಚೆಗೆ ಅವರು ಸಪಿಂಡರಲ್ಲವೆಂದರ್ಥ. ಉದಾಹರಣೆಯಲ್ಲಿ ತಿಳಿಯಬಹುದು.

ಮೂಲಪುರುಷ

1 ವಿಷ್ಣುಶರ್ಮ

| | |
|---|---|
| 2 ಶಾಂತಾ | 2 ಗೌರೀ |
| 3 ಸುರೇಶ | 3 ಮಹೇಶ |
| 4 ರಮೇಶ | 4 ಗಣೇಶ |
| 5 ಸುಬ್ರಹ್ಮಣ್ಯ | 5 ವೆಂಕಟೇಶ |
| 6 ಕುಮಾರ | 6 ನಾಗೇಂದ್ರ |
| 7 ಪಾರ್ಥ | 7 ಕೃಷ್ಣ |
| 8 ಅಚ್ಯುತ | 8 ರಮಾ |

ಈ ಉದಾಹರಣೆಯಲ್ಲಿ ನೋಡಿ, ಎಂಟನೆಯ ಅಚ್ಯುತ ಎಂಬ ವರನಿಗೆ ಎಂಟನೆ ರಮಾಎಂಬ ವಧುವಿನೊಡನೆ ಸಾಪಿಂಡ್ಯವಿಲ್ಲದ್ದರಿಂದ ವಿವಾಹ ಆಗಬಹುದು. ಇಬ್ಬರಿಗೂ ತಮ್ಮ ತಮ್ಮ ಪಿತೃ ತಂದೆಯ ಮೂಲಕ ಸಾಪಿಂಡ್ಯ ವಿಚಾರವನ್ನು ಮಾಡುವಾಗ ಪಾರ್ಥ, ಕೃಷ್ಣ ಎಂಬುವವರು ಮೂಲಪುರುಷ ನಿಂದ ಏಳನೆಯವರೆ ಆಗುತ್ತಾರೆ. ವಧೂವರರು ಮಾತ್ರ ಎರಡನೆಯವರು.

ಮೂಲಪುರುಷ

1 ರಘುನಾಥ

| | |
|---|---|
| 2 ದತ್ತ | 2 ಸೋಮ |
| 3 ಚಂದ್ರಶೇಖರ | 3 ಸೋಮಶೇಖರ |
| 4 ಚಂದ್ರಮೌಳಿ | 4 ಪದ್ಮನಾಭ |
| 5 ಲಲಿತಾಂಬ | 5 ಶಾರದಾಂಬ |
| 6 ಜನಾರ್ದನ | 6 ಕೇಶವ |
| 7 ಮಾಧವ | 7 ಲಕ್ಷ್ಮಿ |

ಇಲ್ಲಿ ಏಳನೆತಲೆಯ ಮಾಧವನಿಗೂ ಲಕ್ಷ್ಮಿಯೆಂಬ ವಧುವಿಗೂ ಸಾಪಿಂಡ್ಯವು ಹರಿದಿಲ್ಲ, ಸಾಪಿಂಡ್ಯವು 5ನೇ ಹೆಣ್ಣುಸಂತತಿಯಾದರೂ ಸಾಪಿಂಡ್ಯವು 7ನೇ ತಲೆ ಮೀರಿದವರಿಗೆ ಅನುವರ್ತಿಸಿದೆ, ಆದರಿಂದ ಇವರಿಗೆ ವಿವಾಹವು ಕೂಡದು.

## ಮಾತೃಮೂಲಕವಾದ ಸಾಪಿಂಡ್ಯ ೫ ರವರೆಗೆ. ನಂತರವಿಲ್ಲ

ಉದಾಹರಣೆ —

ಮೂಲಪುರುಷ —1 ವಿರೂಪಾಕ್ಷಶರ್ಮ

| | | | |
|---|---|---|---|
| 2 | ವಿಶ್ವನಾಥ | 2 | ವಿಶ್ವೇಶ್ವರ |
| 3 | ಶ್ರೀಕಂಠ | 3 | ಶಿತಿಕಂಠ |
| 4 | ಶ್ರೀನಿವಾಸ | 4 | ವೆಂಕಟೇಶ್ವರ |
| 5 | ರಮಾಮಣಿ | 5 | ಪದ್ಮಾವತಿ |
| 6 | ಪ್ರದ್ಯುಮ್ನ | 6 | ಶ್ರೀಮತಿ |

ಇಲ್ಲಿ 6ನೇ ವಧೂವರರಿಗೆ ವಿವಾಹವಾಗಬಹುದು. 5ನೆ ತಲೆಮಾರಿನ ತಾಯಂದರು ಬೇರ್ಪಟ್ಟರು, ಮಾತೃಮೂಲಕ ಸಾಪಿಂಡ್ಯವು ನಿವೃತ್ತಿಯಾಗಿರುವುದರಿಂದ 6ನೇ ತಲೆ ವಧೂವರರಿಗೆ ವಿವಾಹವಾಗಬಹುದು.

ಮಾತೃಮೂಲಕ ಸಾಪಿಂಡ್ಯವು ಒಂದು ಕಡೆಮಾತ್ರ ನಿವೃತ್ತಿಯಾಗಿದ್ದಲ್ಲಿ 6ನೇ ಆ ವಧೂವರರಿಗೆ ವಿವಾಹವಾಗಕೂಡದು.

ಉದಾಹರಣೆ —

ಮೂಲಪುರುಷ 1 ಕೇಶವ

| | | | |
|---|---|---|---|
| 2 | ಮಾಧವ | 2 | ನಾರಾಯಣ |
| 3 | ಗೋವಿಂದ | 3 | ಮಧುಸೂದನ |
| 4 | ತ್ರಿವಿಕ್ರಮ | 4 | ವಾಮನ |
| 5 | ಪದ್ಮಾವತಿ | 5 | ಶ್ರೀಧರ |
| 6 | ಉಮಾ | 6 | ದಾಮೋದರ |

ಇಲ್ಲಿ ಉಮಾ ಎಂಬ ಆರನೆವಧುವಿಗೆ ಸಾಪಿಂಡ್ಯ ನಿವೃತ್ತಿಯಾದರೂ 6ನೇ ದಾಮೋದರನೊಡನೆ ನಿವೃತ್ತಿಯಾಗಿಲ್ಲ, ಪಿತೃಮೂಲಕ ಸಾಪಿಂಡ್ಯ ಈತನಿಗೆ ಇದೆ. ಅದರಿಂದ ಇವರ ವಿವಾಹಕೂಡದು.

ಈ ಬಗೆಯಾಗಿ ಮೂಲಪುರುಷನನ್ನು ಇಟ್ಟು ಲೆಖ್ಖಾಚಾರವಾಗಿ ಸಾಪಿಂಡ್ಯವಿದೆಯೆ ಇಲ್ಲವೆ ಎಂಬುದನ್ನು ವಿವಾಹವಾಗುವ ವಧೂವರರ ವಂಶ ಪರೀಕ್ಷೆಯು ಆಗಬೇಕು. ಈಗಿನ ಕಾಲದಲ್ಲಿ ಮೇಲ್ಕಂಡಂತೆ ಏಳು ತಲೆಯು ಪರ್ಯಂತರ ಜ್ಞಾತಿಗಳ ಹೆಸರುಗಳು ಅಥವಾ ಅನುಕ್ರಮವು ಸರ್ವಥಾ ತಿಳಿಯದೆ ಹೋದರೂ ಸಂಶಯಾಸ್ಪದವಾದ್ದರಿಂದ ಸಗೋತ್ರವಾಗಿದ್ದರೂ, ಸಮಾನ ಪ್ರವರವಾಗಿದ್ದರೂ ಸಪಿಂಡರಾದರೂ ಪರಸ್ಪರ ವಿವಾಹವು ಕೂಡ ದೆಂದು ತಿಳಿಯಿರಿ.

## ಗೋತ್ರ ಪ್ರವರಗಳ ಕೋಷ್ಟಕ

ಗೋತ್ರ ಭೃಗುಗಣ ಪ್ರವರ

1 ವತ್ಸಗೋತ್ರರು ಇವರಿಗೆ ಭಾರ್ಗವ ಚ್ಯಾವನ ಆಪ್ನವಾನ ಔರ್ವ ಜಾಮದಗ್ನ್ಯ ಪಂಚಾರ್ಷೇಯ ಅಥವಾ ಭಾರ್ಗವ ಔರ್ವ ಜಾಮ ದಗ್ನ್ಯ ಅಥವಾ ಭಾರ್ಗವ ಚ್ಯಾವನ ಆಪ್ನವಾನ ತ್ರ್ಯಾರ್ಷೇಯಪ್ರವರ.

2 ಬಿದಗೋತ್ರರು — ಇವರಿಗೆ ಭಾರ್ಗವ ಚ್ಯಾವನ ಆಪ್ನವಾನ ಆರ್ಷ್ಟಿಷೇಣ ಅನೂಪ ಪಂಚಾರ್ಷೇಯ ಅಥವಾ ಭಾರ್ಗವಾರ್ಷ್ಟಿಷೇಣ ಅನೂಪ ತ್ರ್ಯಾರ್ಷೇಯ.

3 ಆರ್ಷ್ಟಿಷೇಣಗೋತ್ರರು — ಭಾರ್ಗವ ಚ್ಯಾವನ ಆಪ್ನವಾನ ಆರ್ಷ್ಟಿಷೇಣ ಅನೂಪೇತಿ ಪಂಚಾರ್ಷೇಯಪ್ರವರ ಭಾರ್ಗವ ಆರ್ಷ್ಟಿಷೇಣ ಅನೂಪೇತಿ ತ್ರ್ಯಾರ್ಷೇಯ

ಈ ಮೇಲ್ಕಂಡ ಮೂರು ಗೋತ್ರದವರಿಗೂ ಪ್ರವರಸಾಮ್ಯವಿರುವುದರಿಂದ ಪರಸ್ಪರ ವಿವಾಹವಾಗಕೂಡದು. ಪಂಚಾರ್ಷೇಯಪ್ರವರದಲ್ಲಿ ಮೂರು ಸಮಾನವಾಗಿಯೂ, ತ್ರ್ಯಾರ್ಷೇಯದಲ್ಲಿ ಎರಡು ಸಮಾನವಾಗಿಯೂ ಇರುವುದು. ಆದರಿಂದಲೂ ಮೊದಲಿನ ಇಬ್ಬರಿಗೂ ಜಾಮದಗ್ನ್ಯ ಗೋತ್ರ ವೊಂದಾಗಿರುವುದರಿಂದ ವಿವಾಹ ನಿಷೇಧವು.

4 ವಾತ್ಸ್ಯಗೋತ್ರರು — ಭಾರ್ಗವ - ಚ್ಯಾವನ - ಆಪ್ನವಾನೇತಿ ತ್ರ್ಯಾರ್ಷೇಯ.

5 ವತ್ಸ ಪುರೋಧಸರು — ಈ ಇಬ್ಬರಿಗೂ - ಭಾರ್ಗವ - ಚ್ಯಾವನ ಆಪ್ನವಾನ - ವಾತ್ಸ್ಯ - ಪೌರೋಧಸೇತಿ ಪಂಚಾರ್ಷೇಯ.

6 ಬೈಜ ಮಥಿತ — ಈ ಇಬ್ಬರಿಗೂ ಭಾರ್ಗವ-ಚ್ಯಾವನ-ಆಪ್ನವಾನ-ಬೈಜ-ಮಥಿತೇತಿ ಪಂಚಾರ್ಷೇಯ.

ಇವರಲ್ಲಿ ಪರಸ್ಪರ ವಿವಾಹವು ನಿಷಿದ್ಧ, ಮತ್ತು ಮೇಲಿನ ಮೂರು ಗೋತ್ರಪವರೊಂದಿಗೂ ವಿವಾಹವು ನಿಷಿದ್ಧವು, ಮೂರು ಪ್ರವರಸಾಮ್ಯವಿರುವುದೇ ಇದಕ್ಕೆ ಕಾರಣ.

7 ಯಾಸ್ಕರು — ಇವರಿಗೆ ಭಾರ್ಗವ–ವೈತಹವ್ಯ–ಸಾವೇತಸೇತಿ ತ್ರ್ಯಾರ್ಷೇಯಪ್ರವರ.

8 ಮಿತ್ರಯುವರು— ಇವರಿಗೆ ಭಾರ್ಗವ - ವಾಧ್ರ್ಯಶ್ವ - ದೈವೋದಾಸೇತಿ ಅಥವಾ ಭಾರ್ಗವ-ಚ್ಯಾವನ-ದೈವೋದಾಸೇತಿ ತ್ರ್ಯಾರ್ಷೇಯ

9 ವೈನ್ಯರು—ಇವರಿಗೆ ಭಾರ್ಗವ – ವೈನ್ಯ – ಪಾರ್ಥೇತಿ.

10 ಶುನಕರು— ಶೌನಕೇತ್ಯೇಕಃ। ಗಾರ್ತ್ಸಮದ ಅಥವಾ ಭಾರ್ಗವ - ಗಾರ್ತ್ಸಮದೇತಿ ದ್ವ್ಯಾರ್ಷೇಯ, ಭಾರ್ಗವ - ಶೌನಹೊತ್ರ - ಗಾರ್ತ್ಸಮದೇತಿ ತ್ರ್ಯಾರ್ಷೇಯ ಪ್ರವರ.

11 ವೇದ ವಿಶ್ವಜ್ಯೋತಿಷಃ— ಭಾರ್ಗವ – ವೇದವೈಶ್ವ - ಜ್ಯೋತಿಷೇತಿ ತ್ರ್ಯಾರ್ಷೇಯ.

12 ಶಾಠರು ಮಾಠರರು - ಇವರಿಗೆ ಭಾರ್ಗವ - ಶಾಠರ - ಮಾಠರೇತಿ ತ್ರ್ಯಾರ್ಷೇಯ.

ಯಾಸ್ಕಾದಿ ನಾಲ್ಕು ಗೋತ್ರದವರಿಗೆ ತಮ್ಮ ತಮ್ಮ ಗುಂಪಿನಲ್ಲಿ ವಿವಾಹವು ನಿಷಿದ್ಧವು; ಆದರೆ ಇವರಿಗೆ ಹಿಂದೆ ಇರುವ ಜಾಮದಗ್ನ್ಯ ವತ್ಸ ಮುಂತಾದವರೊಡನೆ ವಿವಾಹವು ಆಗಬಹುದು. ಏಕೆಂದರೆ ? ಒಂದು ಪ್ರವರಸಾಮ್ಯವಿದ್ದರೂ ಎರಡು ಮೂರು ಪ್ರವರ ಸಾಮ್ಯವಿಲ್ಲದ್ದರಿಂದ ಆಗಬಹುದು. ಭೃಗುಗಣದಲ್ಲಿ ಏಕಪ್ರವರ ಸಾಮ್ಯವಿರುವುದು ದೋಷ ವಿಲ್ಲ, ಜಾಮದಗ್ನಿ ವಂಶವಲ್ಲದ್ದರಿಂದ ಸಗೋತ್ರವಾಗಲಿಲ್ಲವೆಂಬುದೇ ಕಾರಣ. ಮತ್ತು ಕೊನೆಯಲ್ಲಿರುವ ೧೧, ೧೨ನೇ ಗಣದಲ್ಲಿರುವವರಿಗೆ ಪರಸ್ಪರ ವಿವಾಹವು ಆಗಬಹುದು. ಮತ್ತು ಹಿಂದಿನ ಗಣಗಳೊಡನೆಯೂ ವಿವಾಹವಾಗಬಹುದು.

## ಗೌತಮಾಂಗಿರಸಗಣಗಳು

ಗೋತ್ರ ಪ್ರವರ

1 ಆಯಾಸ್ಯರು— ಆಂಗಿರಸ – ಆಯಾಸ್ಯ – ಗೌತಮೇತಿ ತ್ರ್ಯಾರ್ಷೇಯ

2 ಶಾರದ್ವತರು— ಅಂಗಿರಸ ಗೌತಮ ಶಾರದ್ವತೇತಿ

3 ಕೌಮಂಡಪು ಅಂಗಿರಸ ಔತಥ್ಯ ಕಾಕ್ಷೀವತ ಗೌತಮ ಕೌಮಂಡೇತಿ ಪಂಚಾರ್ಷೇಯ ಪ್ರವರ, ಅಥವಾ ಅಂಗಿರಸ ಔತಥ್ಯ ಗೌತಮ ಔಶಿಜ ಕಾಕ್ಷೀವತೇತಿ. ಆಂಗಿರಸ ಆಯಾಸ್ಯ ಔಶಿಜ ಗೌತಮ ಕಾಕ್ಷೀವತೇತಿ ಅಂಗಿರಸ ಔಶಿಜ ಕಾಕ್ಷೀವತೇತಿ ಅಂಗಿರಸ ಔತಥ್ಯ ಕಾಕ್ಷೀವ ತೇತಿ. ಔತಥ್ಯ ಗೌತಮ ಕೌಮಂಡೇತಿ.

4 ದೀರ್ಘತಮಸರು 5 ಕರೇಣುಪಾಲಿಗಳು 6 ದಾವದೇವರು 7 ಔಶನಸರು 8 ರಹೂಗಣರು

9 ಸೋಮರಾಜಕರು— ಇವರಿಗೆ ಅಂಗಿರಸ ಸೌಮರಾಜ್ಯ ಗೌತ ಮೇತಿ ತ್ರ್ಯಾರ್ಷೇಯ

10 ಬೃಹದುಕ್ಥರು— ಅಂಗಿರಸ ಬಾರ್ಹದುಕ್ಥ್ಯ ಗೌತಮೇತಿ

11 ಉತಥ್ಯರು— ಅಂಗಿರಸ ಔತಥ್ಯ ಗೌತಮೇತಿ

12 ರಾಘುವರು— ಅಂಗಿರಸ ರಾಘುವ ಗೌತಮೇತಿ

ಮೇಲೆ ಕಂಡ ಗೌತಮ ವಂಶದವರಿಗೆ ಎಲ್ಲರಿಗೂ ಪರಸ್ಪರ ವಿವಾಹವು ನಿಷಿದ್ಧವು. ಸಗೋತ್ರವಾಗಿರುವುದರಿಂದ ಎರಡು ಮೂರು ಪ್ರವರ ಸಾಮ್ಯ ವಿರುವುದರಿಂದಲೂ ನಿಷಿದ್ಧವು.

ಭಾರದ್ವಾಜಾಂಗಿರಸಗಣ

1 ಭರದ್ವಾಜರು— ಅಂಗಿರಸ ಬಾರ್ಹಸ್ಪತ್ಯ ಭಾರದ್ವಾಜೇತಿ

2 ಗರ್ಗರು— ಅಂಗಿರಸ ಬಾರ್ಹಸ್ಪತ್ಯ ಭಾರದ್ವಾಜ ಶೈನ್ಯ ಗಾರ್ಗ್ಯೇತಿ, ಪಂಚಾರ್ಷೇಯ, ಅಥವಾ ಅಂಗಿರಸ ಶೈನ್ಯ ಗಾರ್ಗ್ಯೇತಿ, ತ್ರ್ಯಾರ್ಷೇಯ, ಇದರಲ್ಲಿ ಕೊನೆಯ, ಎರಡು ವ್ಯತ್ಯಸ್ತವಾಗಿಯೂ ಇರುವುದು ಭಾರದ್ವಾಜ ಗಾರ್ಗ್ಯ ಶೈನ್ಯೇತಿಯೆಂದೂ ಇರುವುದು.

3 ಋಕ್ಷರು— ಆಂಗಿರಸ ಬಾರ್ಹಸ್ಪತ್ಯ ಭಾರದ್ವಾಜ ವಾಂದನ ಮಾತವಚಸೇತಿ ಪಂಚಾರ್ಷೇಯ, ಅಥವಾ ಅಂಗಿರಸ ವಾಂದನ ಮಾತವಚಸ.

4 ಕಪಿಗೋತ್ರದವರು— ಅಂಗಿರಸ ಅಮಹಯ್ಯ ಔರಕ್ಷಯ್ಯ ತ್ರ್ಯಾರ್ಷೆಯ.

ಆಂಗಿರಸ ಅಮಹೀಯುವ ಔರಕ್ಷಯಸ ಎಂದು ಆಶ್ವಲಾಯನರು ಹೇಳುವ ಪಾಠವಿದೆ.

5 ಆತ್ಮಭೂವರು— ಆಂಗಿರಸ ಭಾರದ್ವಾಜ ಬಾರ್ಹಸ್ಪತ್ಯ ವರಾತ್ಮಭುವೇತಿ ಪಂಚಾರ್ಷೇಯ.

ಋಕ್ಷವಂಶದವರಲ್ಲಿ ಕಪಿಲರೂ ಸೇರಿಕೊಂಡಿರುವುದರಿಂದ ಈ ಕಪಿಲರಿಗೂ ವಿಶ್ವಾಮಿತ್ರ ಗೋತ್ರದವರಿಗೂ ಪರಸ್ಪರ ವಿವಾಹವು ನಿಷಿದ್ಧವಾಗಿದೆ. ಮತ್ತು ಗರ್ಗರೆಂಬುವರ ಒಳಭೇದವಿರುವವರಿಗೂ ಅಂಗಿರಸ ತೈತ್ತಿರಿ ಕಾಪಿಭುವ ಎಂದು ತ್ರ್ಯಾರ್ಷೇಯ ಪ್ರವರವು,

ಮೇಲ್ಕಂಡ ಭರದ್ವಾಜ ಅಂಗಿರಸದ ಗುಂಪಿನವರಿಗೆ ಅನ್ಯೋನ್ಯ ವಿವಾಹವು ನಿಷಿದ್ಧವು.

1 ಕಪಿಗೋತ್ರದ ವಿಚಾರ ಮುಂದೆ ಬರುವುದು. ಇವರಲ್ಲಿ ಪರಸ್ಪರ ವಿವಾಹವಿಲ್ಲದಿದ್ದರೂ ಭರದ್ವಾಜ ಕುಲದಲ್ಲಿ ಸ್ವತಂತ್ರ ಕಪಿಗೋತ್ರದವರಿಗೆ ಮಾತ್ರ ವಿವಾಹವಾಗಬಹುದು. ಮುಂದೆ ನೋಡಿರಿ.

## ಕೇವಲಾಂಗಿರಸಗಣ

1 ಹರಿತಗೋತ್ರದವರು— ಆಂಗಿರಸ ಅಂಬರೀಷ ಯೌವ್ವನಾಶ್ವ ಅಥವಾ ಮಾಂಧಾತಾ ಎಂದು.

2 ಕುತ್ಸ— ಅಂಗಿರಸ ಮಾಂಧಾತ್ರ ಕೌತ್ಸೇತಿ ತ್ರ್ಯಾರ್ಷೇಯ.

3 ಕಣ್ವ— ಅಂಗಿರಸ ಆಜಮೀಢ ಕಾಣ್ವೇತಿ ಅಥವಾ ಅಂಗಿರಸ ಧೌರ ಕಾಣ್ವ.

4 ರಥೀತರ— ಅಂಗಿರಸ ವೈರೂಪ ರಾಥೀತರೇತಿ. ಅಂಗಿರಸ ವೈರೂಪ ಪಾರ್ಷದಶ್ವ ಅಷ್ಟಾದಂಷ್ಟ್ರ ವೈರೂಪ ಪಾರ್ಷದಶ್ವ.

5 ವಿಷ್ಣುವೃದ್ಧರು— ಅಂಗಿರಸ ಪೌರುಕುತ್ಸ ತ್ರಾಸದಸ್ಯವ.

6 ಮುದ್ಗಲರು – ಅಂಗಿರಸ ಭಾರ್ಮ್ಯಶ್ವ ಮೌದ್ಗಲ್ಯ ಅಥವಾ ತಾರ್ಕ್ಷ್ಯ. ಅಂಗಿರಸ ತಾರ್ಕ್ಷ್ಯ ಮೌದ್ಗಲ್ಯೇತಿ.

ಹರಿತ-ಕುತ್ಸ ಗೋತ್ರದವರಿಗೆ ವಿವಾಹ ಕೂಡದು. ಎರಡು ಪ್ರವರ ಸಾಮ್ಯವು ಒಂದು ಪಕ್ಷದಲ್ಲಿದೆ. ಅಶ್ವಲಾಯನ ಸೂತ್ರದಲ್ಲಿ ಹರಿತ ಗೋತ್ರದ ಪ್ರವರವೇ ಕುತ್ಸ ಗೋತ್ರದವರಿಗೆಂದು ಹೇಳಿದೆ. ಅದರಿಂದ ವಿವಾಹವು ಪರಸ್ಪರ ಕೂಡದು.

## ಅತ್ರಿಗಣ

1 ಅತ್ರಿಗೋತ್ರದವರು – ಇವರಿಗೆ ಆತ್ರೇಯ ಆರ್ಚನಾನಸ ಶ್ಯಾವಾಶ್ವೇತಿ ತ್ರ್ಯಾರ್ಷೇಯ ಪ್ರವರ.

2 ಗವಿಷ್ಠಿರರು— ಇವರಿಗೆ ಆತ್ರೇಯ ಆರ್ಚನಾನಸ ಗಾವಿಷ್ಠಿರಿತಿ ಅಥವಾ ಆತ್ರೇಯ ಗಾವಿಷ್ಠರ ಪೌರ್ವಾತಿಥೇತಿ.

3 ವಾದ್ಭತಕರು – ಆತ್ರೇಯ ಆರ್ಚನಾನಸ ವಾದ್ಭುತಕೇತಿ ತ್ರ್ಯಾರ್ಷೇಯ.

4 ಮುದ್ಗಲರು – ಆತ್ರೇಯ ಆರ್ಚನಾನಸ ಪೌರ್ವಾತಿಥೇತಿ.

5 ಅತಿಥಿಗಳು – ಆತ್ರೇಯ ಆರ್ಚನಾನಸ ಅತಿಥೇತಿ. ಆತ್ರೇಯ ಆರ್ಚನಾನಸ ಗಾವಿಷ್ಠರೇತಿ.

6 ವಾಮರಥ್ಯರು. " "

7 ಸುಮಂಗಲರು – ಅತ್ರಿಸುಮಂಗಲ ಶ್ಯಾವಾಶ್ವೇತಿ.

8 ಬೀಜವಾಪರು — ಆತ್ರೇಯ ಆರ್ಚನಾನಸ ಆತಿಥೇತಿ. ಅಥವಾ ಆತ್ರೇಯ ಆರ್ಚನಾನಸ ಗಾವಿಷ್ಠಿರೇತಿ.

9 ಧನಂಜಯರು — ಅತ್ರೇಯ ಅರ್ಚನಾನಸ ಧಾನಂಜಯೇತಿ.

ವಾಲೇಯ ಕೌಂದ್ರೇಯ ಶೌಭ್ರೇಯ ವಾಮರಥ್ಯ ಇತ್ಯಾದಿಗಳು ಅತ್ರಿ ಮುನಿಯ ಪುತ್ರಿಕಾ ಪುತ್ರರು ಅವರಿಗೆ ಆತ್ರೇಯ ವಾಮರಥ್ಯ ಪೌತ್ರಿಕೇತಿ ಎಂದು ಪ್ರವರ. ಈ ಎಲ್ಲಾ ಅತ್ರಿಗೋತ್ರದವರಿಗೂ ಪರಸ್ಪರ ವಿವಾಹವು ನಿಷಿದ್ಧವು. ಅತ್ರಿಯ ಪುತ್ರಿಕಾ ಪುತ್ರರಿಗೂ ವಾಮರಥ್ಯಾದಿಗಳಿಗೂ ವಸಿಷ್ಠ ವಿಶ್ವಾಮಿತ್ರ ಗೋತ್ರದವರಿಗೂ ವಿವಾಹ ಕೂಡದು.

## ಭರದ್ವಾಜ–ಗರ್ಗ ಗೋತ್ರ ವಿಚಾರ

1 ಭರದ್ವಾಜ ಗೋತ್ರ, ಕಪಿಗೋತ್ರ, ಗರ್ಗ, ರೌಕ್ಷಾಯಣ. ಈ ನಾಲ್ಕು ವರ್ಗದವರಿಗೂ ಭರದ್ವಾಜ ಗೋತ್ರವು ಒಂದಾದ್ದರಿಂದ ಪರಸ್ಪರ ವಿವಾಹವು ನಿಷಿದ್ಧವಾಗಿದೆ.

2 ಭರದ್ವಾಜದವರಿಗೂ ಗೌತಮಗೋತ್ರದವರಿಗೂ, ದ್ವಿತ್ರಿಪ್ರವರ ಸಾಮ್ಯವಿಲ್ಲವಾದ್ದರಿಂದಲ್ಲೂ, ಸಗೋತ್ರವಲ್ಲದ್ದರಿಂದಲೂ ವಿವಾಹವು ಆಗ ಬಹುದು.

## ಕೇವಲಾಂಗಿರಸಗಣ

3 ಇದರಲ್ಲಿ ಐದು ಬಗೆಯಿದೆ – ಹರಿತ, ಕಣ್ವ, ರಥೀತರ ಮುದ್ಗಲ ವಿಷ್ಣುವರ್ಧನ ಎಂದು. ಇವರಲ್ಲಿ ತಮ್ಮ ತಮ್ಮ ಗಣ (ಕೋಷ್ಟಕ) ದವರನ್ನು ಬಿಟ್ಟು ಉಳಿದವರಲ್ಲಿ ಸರ್ವರಿಗೂ ಪರಸ್ಪರ ವಿವಾಹವಾಗಬಹುದೆಂದು ಪ್ರವರ ದರ್ಪಣದ ಸಿದ್ಧಾಂತ.

4 ಹರಿತಗೋತ್ರ, ಕುತ್ಸಗೋತ್ರದವರಿಗೆ ದ್ವಿಪ್ರವರ ಸಾಮ್ಯವಿರು ವುದರಿಂದ ವಿವಾಹವು ಕೂಡದು.

5 ವಿಷ್ಣುವರ್ಧನ ಗೋತ್ರದವರಿಗೂ ಕುತ್ಸಗೋತ್ರದವರಿಗೂ ವಿವಾಹವು ನಿಷಿದ್ಧವಾಗಿದೆ.

## ತನ್ನಗೋತ್ರ ಪ್ರವರಗಳು ಸರಿಯಾಗಿ ತಿಳಿಯದವರಿಗೂ ಪ್ರವರವೂ ವಿವಾಹವೂ ಹೇಗೆ?

ಅಥ ಅಸಂಪ್ರಜ್ಞಾತ ಬಂಧುಃ ಆಚಾರ್ಯ-ಆಮುಷ್ಯಾಯಣಮ್ ಅನು ಪ್ರಬ್ರುವೀತ್ ಆಚಾರ್ಯ ಪ್ರವರಂ ವೃಣೀತ.

ಇದರ ಅರ್ಥ ತನ್ನ ಬಂಧುವಾಗಲಿ ಗೋತ್ರವಾಗಲಿ, ಪ್ರವರವಾಗಲಿ ಗೊತ್ತಿಲ್ಲವಾಗಿದ್ದರೆ ಆಚಾರ್ಯನ ಗೋತ್ರಪ್ರವರಗಳನ್ನು ಹೇಳಬೇಕೆಂದರ್ಥ.

ಶಿಷ್ಯರಿಗೆ ಆಚಾರ್ಯ ಗೋತ್ರದವರೊಂದಿಗೆ ವಿವಾಹವುಕೂಡದು ಗೋತ್ರವೂ ಪ್ರವರವೂ ಒಂದಾಯಿತೆಂಬುದೇ ಕಾರಣ.

## ಭರದ್ವಾಜಗಣ ಮತ್ತು ಕಪಿಗೋತ್ರದ ಗಣಗಳ ವಿಶೇಷ ವಿಚಾರ

ಕಪಿಗಣಕ್ಕೆ ಸೇರಿದವರು ಭರದ್ವಾಜ ಗೋತ್ರದ ಗುಂಪಿಗೆ ಸೇರಿದವರು. ಇವರು ೧೭ಜನ ಭರದ್ವಾಜ ಗೋತ್ರದ ಗುಂಪಿನವರೆಂದೂ ಇವರಿಗೆ ಎರಡು ಪ್ರವರ ಋಷಿಗಳ ಸಾಮ್ಯವಿರುವುದರಿಂದ ವಿವಾಹವು ನಿಷಿದ್ಧವಾಗಿದೆ. ಆದರೂ ಕಪಿಗಣದಲ್ಲಿ ಎಂಟು ಜನರು ಪುತ್ರರಿದ್ದಾರೆ

ತರ ಸ್ಥಿತಿತರಶ್ಚಾಪಿ ಬಿಂದು ಶಲ್ಕಃ ಪತಂಜಲಿಃ ।<br>ಭೂಯಸೀಥಾರ್ಣಕಶ್ಚೈವ ಜಲಂಧಿರಿತಿಚಾಷ್ಟಧಾ ॥

ಈ ರೀತಿಯಾಗಿ ಕಪಿ ಪುತ್ರರಿಗೆ ಪರಸ್ಪರ ವಿವಾಹವಿಲ್ಲ, ಆದರೂ ಭರದ್ವಾಜ ಗುಂಪಿನವರೊಡನೆ ವಿವಾಹವು ಆಗಬಹುದು. ಕಪಿಗಣದಲ್ಲಿ ಸ್ವತಂತ್ರ ಕಪಿ ಕುಲ, ಅಸ್ವತಂತ್ರ ಕಪಿಕುಲವೆಂಬುದಾಗಿ ಎರಡು ಬಗೆಯಿದೆ. ಆದರಲ್ಲಿ ಸ್ವತಂತ್ರ ಕಪಿಕುಲದವರಿಗೆ ಭರದ್ವಾಜ ಕುಲದಲ್ಲಿ ವಿವಾಹವಾಗಬಹುದು.

ಈ ಕಪಿಗಣದಲ್ಲಿ ಮಹೀಯುವ ಉರುಕ್ಷಯಸವೆಂಬುವ ಕಪಿಕುಲ ದವರಿಗೆ ಭಾರದ್ವಾಜ ಗೋತ್ರದ ಕುಲದೊಡನೆ ವಿವಾಹವಾಗಬಹುದೆಂದು

ಅಶ್ವಲಾಯನ ಗೃಹ್ಯಪರಿಶಿಷ್ಟದಲ್ಲಿ ಹೇಳಿದೆ. ಇವರಿಗೆ ತ್ರ್ಯಾರ್ಷೇಯ ಪ್ರವರ ಆಂಗಿರಸ ಮಹೀಯುವ ಉರುಕ್ಷಯಸ ಎಂದು ಹೇಳುವುದು.

ಕಪೀಪ್ರಸಿದ್ಧೌ ವುದಿತಾ ವಿಹದ್ವೌ ಸ್ವತಂತ್ರ ಏಕಸ್ತ್ವಪರೋಽಸ್ವತಂತ್ರಃ ।
ತತ್ರ ಸ್ವತಂತ್ರಸ್ಯ ಕಪೇರ್ವಿವಾಹಂ ಮಿಥೋ ಭರದ್ವಾಜ ಕುಲೇನ ಚಾಹುಃ ॥

ಎಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ.

## ದ್ವಿಗೋತ್ರಗಣ

1 ದೇವರಾತರು— ವೈಶ್ವಾಮಿತ್ರ ದೇವರಾತ ಔದಲೇತಿ ತ್ರ್ಯಾರ್ಷೇಯ.

2 ಧನಂಜಯುರು— ವಿಶ್ವಾಮಿತ್ರ ಮಾಧುಚ್ಛಂದಸ ಧಾನಂಜಯೇತಿ

3 ಜಾತೂಕರ್ಣ್ಯರು— ವಾಸಿಷ್ಠ ಜಾತೂಕರ್ಣ್ಯೇತಿ.

4 ವಾಮರಾಥ್ಯದಿಗಳು 5 ಕಪಿಲರು 6 ಕತರು

1 ಈ ದೇವರಾತರಿಗೂ ಎಲ್ಲ ಜಮದಗ್ನಿಗೋತ್ರದವರಿಗೂ ವಿಶ್ವಾಮಿತ್ರ ಗೋತ್ರದವರಿಗೂ ವಿವಾಹ ಕೂಡದು.

2 ಈ ಧನಂಜಯ ಗೋತ್ರದವರಿಗೂ ವಿಶ್ವಾಮಿತ್ರ ಗೋತ್ರದವರಿಗೂ ಅತ್ರಿಗೋತ್ರದವರಿಗೂ ಅನ್ಯೋನ್ಯ ವಿವಾಹವಿಲ್ಲ, ಕೂಡದು.

3 ಜಾತೂಕರ್ಣ್ಯರೆಂಬುವರಿಗೆ ವಾಸಿಷ್ಠ ಗೋತ್ರದವರೊಂದಿಗೂ ಅತ್ರಿಗೋತ್ರದವರೊಂದಿಗೂ ವಿವಾಹ ಕೂಡದು.

4 ವಾಮರಾಥ್ಯರಿಗೂ ವಸಿಷ್ಠಗೋತ್ರ ಅತ್ರಿ ಗೋತ್ರದವರಿಗೂ ವಿವಾಹವು ಕೂಡದು,

5 ಕಪಿಲರಿಗೂ ವಿಶ್ವಾಮಿತ್ರ ಭರದ್ವಾಜ ಗೋತ್ರದವರೊಂದಿಗೆ ವಿವಾಹವು ನಿಷಿದ್ಧ.

## ವಿಶೇಷ ವಿಷಯ

ಹಿಂದೆ ಹೇಳಿದ ದ್ವಿಗೋತ್ರದ ಸಂತೃತಿಗಳಿಗೆ ಪೂತಿಮಾಷಾದಿ ಸಕಲ ವಸಿಷ್ಠ ಗಣ (ಗುಂಪಿಗೆ) ಸೇರಿದವರೊಂದಿಗೆ ವಿವಾಹವಿಲ್ಲ. ಹಾಗೂ ಹಗಲು ವಸಿಷ್ಠರೆಂದು ಹೆಸರಾದ ಲೌಗಾಕ್ಷಿಕೂಟದೊಂದಿಗೂ ವಿವಾಹವಿಲ್ಲ, ಕೇವಲ ಅಂಗಿರಸ ಕೂಟದೊಡನೆ ಮಾತ್ರ ವಿವಾಹವು ಆಗಬಹುದು. ಲೌಗಾಕ್ಷಿಗಳು ಹಗಲು ವಸಿಷ್ಠರು, ರಾತ್ರಿ ಕಶ್ಯಪರು. ಲೌಗಾಕ್ಷಿಯೆಂಬವನು ಕಶ್ಯಪ ಸಂತಾನಕ್ಕೆ ಸೇರಿದವನು. ವಷಿಷ್ಠರಿಂದ ಉಪನಯನ ಮಾಡಲ್ಪಟ್ಟವನು. ಉಪನಯನವು ಹಗಲು ಮಾಡತಕ್ಕದ್ದಾದ್ದರಿಂದಲೂ ಅದು ದ್ವಿತೀಯ ಜನ್ಮವಾದ್ದರಿಂದಲೂ ಹಗಲು ವಸಿಷ್ಠಗೋತ್ರದವನಾದನು. ಲೌಗಾಕ್ಷಿ, ನಿಷೇಕವು ಪ್ರಥಮ ಜನ್ಮ. ಇದು ರಾತ್ರಿಯಲ್ಲೇ ವಿಹಿತವಾದದ್ದು. ಆದ ರಿಂದ ರಾತ್ರಿಯಲ್ಲಿ ಕಾಶ್ಯಪ ಸಂತತಿಯಾಗಿ ಕಶ್ಯಪ ಗೋತ್ರದವನಾದನು. ಆದರಿಂದ ಇವರ ಸಂತಾನದವರಿಗೆ ವಷಿಷ್ಠಗೋತ್ರ ಕಶ್ಯಪ ಗೋತ್ರದವ ರೊಂದಿಗೂ ವಿವಾಹವು ನಿಷಿದ್ಧ. ಹೀಗೆಂದು ಗೋತ್ರಪ್ರವರ ನಿರ್ಣಯ ಗ್ರಂಥದಲ್ಲಿದೆ.

ಆದರೆ ದ್ವ್ಯಾಮುಷ್ಯಾಯಣರು, ಕಾಶ್ಯಪಾವತ್ಸರ ವಾಸಿಷ್ಠ ಎಂದೂ ವಾಸಿಷ್ಠ ಕಾಶ್ಯಪಾವತ್ಸಾರ ಎಂದು ಪ್ರವರವಿರುವುದು. ಭಿನ್ನಗೋತ್ರದಲ್ಲಿ ಉಪನೀತನಾದವನು ಹಗಲು ಉಪದೇಶಕರಾದ ವಸಿಷ್ಠರಿಗೂ, ರಾತ್ರಿಯಲ್ಲಿ ನಿಷೇಕ ಮಾಡಿದ ಕಶ್ಯಪರಿಗೂ ಇವನು ಸೇರಿದವನಾದನು. ಆದರಿಂದ ನಿಧ್ರುವ, ರೇಭ, ಶಂಡಿಲ. ಲೌಗಾಕ್ಷಿ ವಂಶದವರಿಗೆ ಅನ್ಯೋನ್ಯ ವಿವಾಹವು ನಿಷಿದ್ಧವಾಯಿತು.

### ಅಗಸ್ತ್ಯಗಣ

ಅಗಸ್ತಿ, ಅಗಸ್ತ್ಯ, ದಾಲ್ಭ್ಯ, ಚ್ಯುತ, ಇಧ್ಮವಾಹ, ಸೋಮವಾಹ, ಸಾರವಾಹ, ಇವರಿಗೆ ಪರಸ್ಪರ ವಿವಾಹವು ನಿಷಿದ್ಧ ಎಂದು ಧರ್ಮಪ್ರವೃತ್ತಿ ಕಾರನ ಮತ.

1 ಇಧ್ಮವಾಹನರು — ಅಗಸ್ತ್ಯ, ದಾಲ್ಭ್ಯಚ್ಯುತ, ಇಧ್ಮವಾಹೇತಿ ತ್ರ್ಯಾರ್ಷೇಯಃ.

2 ಸಾಂಭವಾಹರು — ಅಗಸ್ತ್ಯ, ದಾಲ್ಭ್ಯಚ್ಯುತ, ಸಾಂಭವಾಹೇತಿ
3 ಸೋಮವಾಹರು — ,, ,, ಸೋಮವಾಹೇತಿ
4 ಯಜ್ಞವಾಹರು ,, ,, ಯಜ್ಞವಾಹೇತಿ
5 ಧರ್ಭವಾಹರು ,, ,, ಧರ್ಭವಾಹೇತಿ
6 ಸಾರವಾಹರು ,, ,, ಸಾರವಾಹೇತಿ
7 ಆಗಸ್ತ್ಯರರು ,, ಮಹೇಂದ್ರ, ಮಾಯೋಭುವೇತಿ
8 ಪೂರ್ಣಮಾಸರು ,, ಪೌರ್ಣಮಾಸ ಪಾರಣೇತಿ
9 ಹಿಮೋದಕರು ,, ಹೈಮವರ್ಚ, ಹೈಮೋದಕೇತಿ
10 ಪಾಣಿಕರು ,, ಪೈನಾಯತ ಪಾಣಿಕೇತಿ
ಎಂದು ಪ್ರವರ.

## ಕಣ್ವಗಣ

ಆಂಗಿರಸ, ಅಜಾಮಿಳ, ಕಣ್ವ ಎಂಬ ಮೂರು ಜನರು ಪರಸ್ಪರ ವಿವಾಹ ಮಾಡಿಕೊಳ್ಳಲು ಅವಕಾಶವಿಲ್ಲ. ಏಕೆಂದರೆ ಒಂದೇ ಸಮನಾದ ಪ್ರವರವಿರುವುದೇ ಕಾರಣ. ಕೆಲವರು ಆಂಗಿರಸ, ಘೋರ, ಕಣ್ವ ಎಂದು ಭಿನ್ನ ಪ್ರವರವೆಂದು ಹೇಳುತ್ತಾರೆ. (ಇದು ಧರ್ಮಪ್ರವೃತ್ತಿಗ್ರಂಥದಲ್ಲಿದೆ).

## ಮುದ್ಗಲಗಣ

ಮುದ್ಗಲ ಗಣದ ಋಷಿಗಳು – ಮುದ್ಗಲ, ತ್ರಿವೇದಿ, ತಾರ್ಕ್ಷ್ಯ, ಭಾರ್ಮ್ಯಶ್ವ, ಮೌದ್ಗಲ ಎಂಬ ಐದು ಜನರು. ಇವರಿಗೆ ಆಂಗಿರಸ, ಭಾರ್ಮ್ಯಶ್ವ, ಮೌದ್ಗಲ ಎಂದು ತ್ರ್ಯಾರ್ಷೇಯ ಪ್ರವರ. ಪ್ರವರೈಕ್ಯವಿರುವುದರಿಂದ ಈ ಐದು ಜನರಿಗೂ ವಿವಾಹ ಸಂಬಂಧವಿರುವುದಿಲ್ಲ.

## ವಿರೂಪಗಣ

ವಿರೂಪ, ಪೃಷದಶ್ವ, ಪಾರ್ಷದಶ್ವ, ರಥೀತರ, ಅಂಗುಷ್ಠ, ಅಷ್ಟ ದಂಡ ಎಂದು ವಿರೂಪರ ಗಣಋಷಿಗಳು. ಇವರಿಗೆ ತ್ರ್ಯಾರ್ಷೇಯ ಪ್ರವರ. ಆಂಗಿರಸ, ಪಾರ್ಷದಶ್ವ, ವೈರೂಪ್ಯ ಎಂದು ಪ್ರವರೈಕ್ಯವಿರುವುದರಿಂದ ಪರಸ್ಪರ ವಿವಾಹ ಕೂಡದು.

## ಹಾರೀತಗಣ

ಹಾರೀತ, ಆಂಬರೀಷ, ಮಾಂಧಾತಾ, ಯೌವನಾಶ್ವ. ಕೌತ್ಸ ಪೌಂಗ್ಯ ಶಂಖ, ದರ್ಭ, ಹೈಮಗವ, ಕೌಮಾರ ಎಂಬ ಹಾರೀತ ಗಣಋಷಿಗಳು. ಇವರ ಮೂರು ಪ್ರವರ - ಆಂಗಿರಸ-ಅಂಬರೀಷ-ಹಾರೀತ. ಅಥವಾ ಅಂಗಿರಸ ಅಂಬರೀಷ-ಯೌವನಾಶ್ವ ಎಂದೋ ಏಕಪ್ರವರಸಾಮ್ಯವಿರುವುದರಿಂದ ಪರಸ್ಪರ ವಿವಾಹವಿಲ್ಲ.

## ವಿಷ್ಣುವರ್ಧನಗಣ

ವಿಷ್ಣುವರ್ಧನ, ಶಠ, ಮರ್ಷಣ, ಭದ್ರಣ, ನಿತುಂದಿ, ಮುದ್ರಣ, ಬಾದರಾಯಣ, ಸಾತ್ಯಕಿ, ಸಾತ್ಯಕಾಮ್ಯ, ಉಪಮಿತಿ, ಆರುಣಿ, ಪುರುಕುತ್ಸ ತ್ರಸದಸ್ಯು, ಜಾಪಗವಿ, ಎಂದು ಹದಿನಾಲ್ಕು ವಿಷ್ಣುವರ್ಧನಗಣದ ಋಷಿಗಳು. ಇವರಿಗೆ ಅಂಗಿರಸ-ವಿಷ್ಣುವೃದ್ಧ-ಬಾದರಾಯಣ ಎಂದು ಅಥವಾ ಅಂಗಿರಸ-ಪೌರುಕುತ್ಸ-ತ್ರಾಸದಸ್ಯವ ಎಂದು ಏಕಪ್ರವರ ಸಾಮ್ಯವಿರುವುದರಿಂಧ ಪರಸ್ಪರ ವಿವಾಹವಾಗುವಂತಿಲ್ಲ,

## ವಿಶೇಷ ವಿಷಯ

ಪಂಚಾರ್ಷೇಯ ಪ್ರವರದಲ್ಲಿ ಮೂರು, ತ್ರ್ಯಾರ್ಷೇಯದಲ್ಲಿ ಎರಡು ಪ್ರವರ ಸಾಮ್ಯವಿರುವುದರಿಂದ ಭೃಗುಗಣ, ಅಂಗಿರೋಗಣದಲ್ಲಿ ವಿವಾಹವು ನಿಷಿದ್ಧವು. ಉಳಿದ ಕಶ್ಯಪಾದಿ ಗಣಗಳಲ್ಲಿ ಏಕಪ್ರವರವೂ ಕೂಡದೆಂದು ವಿಶೇಷವು.

## ವಿಶ್ವಾಮಿತ್ರಗಣ

ಕುಶಿಕರು ಇವರಿಗೆ ವೈಶ್ವಾಮಿತ್ರ, ದೇವರಾತ, ಔದಲೇತಿ ತ್ರ್ಯಾರ್ಷೇಯ.

ಲೋಹಿತರು ವೈಶ್ವಾಮಿತ್ರ ಅಷ್ಟಕ ಲೌಹಿತೇತಿ ಅಥವಾ ಕೊನೆಯಲ್ಲಿ ಎರಡನ್ನು ಬದಲಾಯಿಸಿ ಹೇಳುವುದು ವೈಶ್ವಾಮಿತ್ರ ಮಧುಚ್ಛಂದಸ ಅಷ್ಟಕೇತಿ ವೈಶ್ವಮಿತ್ರಾಷ್ಟಕ ಎಂದು ಎರಡೇ ಪ್ರವರ.

ರೌಕ್ಷಕರು ವೈಶ್ವಾಮಿತ್ರ ಗಾಥಿನ ರೈವಣೇತಿ ವೈಶ್ವಾಮಿತ್ರ ರೌಕ್ಷಕ ರೈವಣೇತಿ ವಾ

ಕಾಮಕಾಯನರು ವೈಶಾಮಿತ್ರ ದೇವಶ್ರವಸ ದೈವತರಸೇತಿ

ಆಜರು ,, ಮಾಧುಚ್ಛಂದಸ ಅಜೇತಿ

ಕತರು ,, ಕಾತ್ಯಾತ್ಕೀಲೇತಿ

ಧನಂಜಯರು ,, ಮಧುಚ್ಛಂದಸ ಧಾನಂಜಯೇತಿ ಅಥವಾ ವೈಶ್ವಾಮಿತ್ರ ಮಧುಚ್ಛಂದಸಾಘಮರ್ಷಣೇತಿ

ಅಘಮರ್ಷಣರು ವೈಶಾಮಿತ್ರ ಅಘಮರ್ಷಣ ಕೌಶಿಕೇತಿ

ಪೂರಣರು ವೈಶ್ವಾಮಿತ್ರ ಪೂರಣೇತಿ ದ್ವಾರ್ಷೇಯ ಅಥವಾ ವೈಶ್ವಾಮಿತ್ರ ದೇವರಾತ ಪೌರಣೇತಿ ತ್ರ್ಯಾರ್ಷೇಯ

ಇಂದ್ರಕೌಶಿಕರು ವೈಶ್ವಾಮಿತ್ರ ಇಂದ್ರಕೌಶಿಕೇತಿ ದ್ವಾರ್ಷೇಯ

ಅಶ್ಮರಥ್ಯರು ವೈಶ್ವಾಮಿತ್ರಾಶ್ಮರಥ್ಯ ವಾಧುಲೇತಿ

ಸಾಹುಲರು ವೈಶ್ವಾಮಿತ್ರ ಸಾಹುಲ ಮಾಹುಲೇತಿ

ಗಾಥಿನರು ,, ಗಾಥಿನ ರೈವಣೇತಿ (ವೇಣವೇತಿ) (ರೇಣವ ಇತಿ, ಉದವೇಣವ ಇತಿ, ವಾ ಎಂದು ಅನೇಕ ಒಗೆಯಾಗಿ ಕೊನೆಯದನ್ನು ಹೇಳುವರು.)

| | | | |
|---|---|---|---|
| ವೈಣವರು | ವೈಶ್ವಾಮಿತ್ರ ಗಾಥಿನ ವೈಣವೇತಿ ತ್ರ್ಯಾರ್ಷೇಯ | | |
| ಹಿರಣ್ಯರೇತಸರು | ವೈಶ್ವಾಮಿತ್ರ ಹೈರಣ್ಯರೇತಸೇತಿ ದ್ವ್ಯಾರ್ಷೇಯ | | |
| ಸುವರ್ಣರೇತಸರು | ವೈಶ್ವಾಮಿತ್ರ | ಸೌವರ್ಣರೇತಸೇತಿ | ,, |
| ಕಪೋತರೇತಸರು | ,, | ಕಾಪೋತರೇತಸೇತಿ | ,, |
| ಶಾಲಂಕಾಯನರು | ,, | ಶಾಲಂಕಾಯನ ಕೌಶಿಕೇತಿ | |

ತ್ರ್ಯಾರ್ಷೇಯ ಇವರೇ ಕೌಶಿಕರೆಂದೂ, ಜತ್ರುಗಳೆಂದೂ ಹೇಳಲ್ಪಡುವರು.

| | | | |
|---|---|---|---|
| ಘೃತಕೌಶಿಕರು | ವೈಶ್ವಾಮಿತ್ರ | ಘೃತಕೌಶಿಕೇತಿ | ದ್ವ್ಯಾರ್ಷೇಯ |
| ಕಥಕರು | ,, | ಕಾಥಕೇತಿ | ,, |
| ರೌಹಿಣರು | ,, | ಮಾಧುಚ್ಛಂದಸ ರೌಹಿಣೇತಿ ತ್ರ್ಯಾರ್ಷೇಯ | |

ಕಶ್ಯಪಗಣ

| | | | |
|---|---|---|---|
| ಕಶ್ಯಪರು | ಕಾಶ್ಯಪಾವತ್ಸಾರ | ಅಸಿತೇತಿ | ತ್ರ್ಯಾರ್ಷೇಯ |
| ನಿಧ್ರುವರು | ,, | ನೈಧ್ರುವೇತಿ | ,, |
| ರೇಭರು | ,, | ರೈಭ್ಯೇತಿ | ,, |
| ಶಂಡಿಲರು | ,, | ಶಾಂಡಿಲ್ಯೇತಿ (ದೇವತೇತಿ) | |

ವಾ, ಅಸಿತೇತಿ ಎಂದೂ ಕೊನೆಗೆ ಹೇಳುವರು, ಅಥವಾ ಕಾಶ್ಯಪಾಸಿತ ದೇವಲೇತಿ ಅಥವಾ ವ್ಯತ್ಯಾಸ ಮಾಡಿಯೂ ಹೇಳುವುದು. ಅಥವಾ ದೇವಲಾಸಿತೇತಿ ದ್ವ್ಯಾರ್ಷೇಯ.

ವಸಿಷ್ಠಗಣ

1 ವಸಿಷ್ಠರು ಇವರಿಗೆ ವಾಸಿಷ್ಠ ಇಂದ್ರಪ್ರಮದ ಭರದ್ವಸು ಎಂದೂ, ವಾಸಿಷ್ಠ ಎಂದು ಒಂದೇ ಪ್ರವರವು ಇದೆ.

2 ವಾಸಿಷ್ಠ ಮೈತ್ರಾವರುಣ ಕೌಂಡಿನ್ಯೇತಿತ್ರ್ಯಾರ್ಷೇಯ.

3 ಉಪಮನ್ಯಗಳು ವಾಸಿಷ್ಠ ಇಂದ್ರಪ್ರಮದ ಅಭರದ್ವಸು ಇತಿ ಅಥವಾ ಅಭರದ್ವಸವ್ಯ ಎಂದು ಪಾಠಾಂತರ ಅಥವಾ ವಾಸಿಷ್ಠ ಅಭರ ದ್ವಸು ಇಂದ್ರ ಪ್ರಮದೇತಿ

ಹೀಗೆಯೇ ಮೊದಲಿನ ಎರಡನ್ನು ವ್ಯತ್ಯಾಸವಾಗಿಯೂ ಇಡಬಹುದು.

4 ಪರಾಶರರು ವಾಸಿಷ್ಠ್ಯ ಶಾಕ್ತ್ಯ ಪಾರಾಶರ್ಯೇತಿ

ದ್ವಿಗೋತ್ರಗಣ

1 ಶೌಂಗಶೈಶಿರಯಃ ಇವರಿಗೆ ಪಂಚಾರ್ಷೇಯ ಪ್ರವರ ಅಂಗಿರಸ ಬಾರ್ಹಸ್ಪತ್ಯ ಭಾರದ್ವಾಜ ಶೌಂಗಶೈಶಿರ ಅಥವಾ ಆಂಗಿರಸ ಕಾತ್ಯಾತ್ಕೀಲೇತಿ ಅಂಗಿರಸ ಕಾತ್ಯಾತ್ಕೀಲ ಎಂತಲೂ ಮೊದಲು ಭಾರದ್ವಾಜ ಎಂದೂ ಹೇಳುವುದು.

2 ಸಂಕೃತಿಗಳು ಆಂಗಿರಸ ಗೌರವೀತಿ ಸಾಂಕೃತ್ಯೇತಿ ತ್ರ್ಯಾರ್ಷೆಯ ಅಥವಾ ಶಾಕ್ತ ಗೌರವೀತಿ ಸಾಂಕ್ರತ್ಯೇತಿ

3 ಲೌಗಾಕ್ಷಿಗಳು ಕಾಶ್ಯಪಾವತ್ಸಾರ ವಾಸಿಷ್ಠ ಅಥವಾ ಕಾಶ್ಯಪಾವತ್ಸಾರ ಅಸಿತೇತಿ ತ್ರ್ಯಾರ್ಷೇಯ

ಈ ಮೊದಲನೆ ಗಣದವರಿಗೆ ಎಲ್ಲಾ ಭಾರದ್ವಾಜಗೋತ್ರದವರೊಂದಿಗೂ ಎಲ್ಲಾವಿಶ್ವಾಮಿತ್ರ ಗೋತ್ರದವರೊಂದಿಗೂ ವಿವಾಹ ನಿಷಿದ್ಧವು

## ವಿವಾಹದ ಉಪಯುಕ್ತ ಪದಾರ್ಥಗಳು ಮತ್ತು ಪ್ರಯೋಗದ ಸಂಕ್ಷಿಪ್ತ ವಿಷಯಗಳು

1 **ಗೌರೀಹರಪೂಜಾ** (ಉಮಾಮಹೇಶ್ವರ ಪೂಜೆ) ಇದನ್ನು ಕನ್ಯೆಯೂ ಕನ್ಯೆಯ ತಂದೆಯೂ ಲಗ್ನದದಿನ ಮಾಡಬೇಕು. ಕಾತ್ಯಾಯಿನೀ ಮಹಾಲಕ್ಷ್ಮೀ, ಶಚೀದೇವಿಯೊಂದಿಗೆ ಉಮಾಮಹೇಶ್ವರ ಪೂಜೆ ಮಾಡಬೇಕು

ಇದನ್ನು ಗೌರೀಪೂಜೆಯೆಂದು ಈಗಿನವರು ಹೇಳುವರು. ಧ್ಯಾನ ಶ್ಲೋಕವನ್ನು ಹೇಳಿಕೊಂಡು ದೇವಿಯನ್ನು ಚಿಂತಿಸಿ ಪೂಜಿಸಬೇಕು.

2 ವಿಷ್ಟರ ಇದು ಮಧುಪರ್ಕಕ್ಕೆ ಬೇಕಾದ ದರ್ಭಾಸನ, ೨೫ದರ್ಭೆಗಳಿಂದ ಜಡೆಯಂತೆ ಹೆಣೆದ ಮೇಲೆ ಒಂದು ಪವಿತ್ರಗ್ರಂಥಿಯನ್ನು ಹಾಕಿ ತುದಿಯು ಲಂಬಿಸುವಂತಿರಬೇಕು, ಹೀಗೆ ರಚಿಸಿದ್ದೇ ವಿಷ್ಟರವೆಂಬುವುದು.

3 **ಮಧುಪರ್ಕ ವಿಚಾರ** ವರನ ಶಾಖೆಯನ್ನು ಅನುಸರಿಸಿ ಅವರವರ ಗೃಹ್ಯಸೂತ್ರದಲ್ಲಿ ಹೇಳಿದಂತೆ ಮಧುಪರ್ಕಪೂಜೆ ಮಾಡಬೇಕು. ದಾತೃವು ಬೇರೆ ಶಾಖೆಯಾದವರಾದರೂ ವರನಶಾಖೆಯಿಂದ ಪೂಜಿಸಬೇಕು, ಜೇನುತುಪ್ಪದಿಂದ ಮಿಶ್ರಮಾಡಿದ ಮೊಸರು, ಅಥವಾ ಹಾಲು ಹನಿಯಿಲ್ಲದಿದ್ದರೆ ತುಪ್ಪ, ಬೆಲ್ಲಗಳನ್ನು ಬದಲಿಯಾಗಿ ಉಪಯೋಗಿಸಬೇಕು.

4 ಕನ್ಯಾದಾನ ಮಾಡುವವನು, ಉಪವಾಸವಿದ್ದು ಭೋಜನಮಾಡಿದ ವರನಿಗೆ ಕನ್ಯಾದಾನ ಮಾಡಬೇಕು.

5 **ಲಗ್ನ ಘಟಿಕಾಪೂಜೆ** ಸೂರ್ಯಮಂಡಲವು ಅರ್ಧಉದಯವಾದ ಮೇಲೆ ಅರ್ಧ ಅಸ್ತವಾದ ಮೇಲೆ ಜಲದಿಂದ ತುಂಬಿದ ತಾಮ್ರಪಾತ್ರೆಯಲ್ಲಿ ಘಟಿಕಾಯಂತ್ರವನ್ನಿಟ್ಟು ಪೂಜಿಸಬೇಕು. ಇದರ ಮಂತ್ರ

ಮುಖಂ ತ್ವಮಸಿ ಯಂತ್ರಾಣಾಂ ಬ್ರಹ್ಮಣಾ ನಿರ್ಮಿತಂಪುರಾ ।
ದೋಷಾಭಾವಾಯ ದಂಪತ್ಯೋಃ ಕಾಲಸಾಧನ ಕಾರಣಂ ॥

ಈ ಮಂತ್ರದಿಂದ ಗಣೇಶಪೂಜೆ, ವರುಣಪೂಜೆಯ ಮೂಲಕ ಘಟೀಯಂತ್ರವನ್ನು ಸ್ಥಾಪಿಸಬೇಕು..

ಈ ರೀತಿ ಸ್ಥಾಪನೆ ಮಾಡಿದ ಘಟಿಕೆಯು ಆಗ್ನೇಯ ಯಾಮ್ಯ, ನೈಋತ್ಯ, ವಾಯುವ್ಯ ದಿಕ್ಕುಗಳಲ್ಲಿದ್ದರೆ. ಅಶುಭ, ಮಧ್ಯದಲ್ಲಿದ್ದರೆ ಶುಭಕರವು, ಬೇರೆ ದಿಕ್ಕಿನಲ್ಲಿದ್ದರೂ ಶುಭ. ಆಗ್ನೇಯಾದಿ ದಿಕ್ಕುಗಳಲ್ಲಿ ಪೂರ್ಣವಾದರೆ ಅಶುಭವೆಂಬುದಾಗಿ ಘಟಿಕಾ ವಿಚಾರವು.

6 ಸ್ವಸ್ತಿಕವನ್ನು ಕುಂಕುಮದಲ್ಲಿ ಬರೆದ ಅಂತಃಪಟವನ್ನು ಹಿಡಿದು ಮಂಗಳಾಷ್ಟಕವನ್ನು ಜೋಯಿಸರು ಹೇಳಿದ ಮೇಲೆ ಸುಮುಹೂರ್ತದಲ್ಲಿ ವರನು ಪೂರ್ವದಿಕ್ಕಿನ ಅಕ್ಕಿಯ ರಾಶಿಯಲ್ಲಿ ನಿಂತು. ಪಶ್ಚಿಮದಿಕ್ಕಿಗೆ ಮುಖ ಮಾಡಿಕೊಂಡು. ಪಶ್ಚಿಮ ದಿಕ್ಕಿನ ರಾಶಿಯಲ್ಲಿ ನಿಂತು ಪೂರ್ವದಿಕ್ಕಿಗೆ ಮುಖ ಮಾಡಿಕೊಂಡು ಇರುವ ಕನ್ನಿಕೆಯನ್ನು ನಿರೀಕ್ಷಿಸಬೇಕು. ನಿರೀಕ್ಷಣಕಾಲದಲ್ಲಿ ಅಂತಃ ಪಟವನ್ನು ದಕ್ಷಿಣದಿಂದ ಉತ್ತರಕ್ಕೆ ಎಳೆದು ತೆಗೆಯಬೇಕು. ಇದು ಪದ್ಧತಿಯಲ್ಲಿದೆ.

ಸಿಂಧುಕಾರರು ಇದೇ ವಿಧಾನವೆಂತ ಹೇಳಿರುವರು. ಅನ್ಯೋನ್ಯವಾಗಿ ಮಂತ್ರಾಕ್ಷತೆಯನ್ನು ವಧೂವರರು ಶಿರಸ್ಸಿನಲ್ಲಿ ಹಾಕಬೇಕು, ಹಾಗೂ ಅನ್ಯೋನ್ಯ ಮುಖದರ್ಶನ ಮಾಡಬೇಕು. ಆಕಾಲದಲ್ಲಿ ವೈದಿಕರು ಬ್ರಾಹ್ಮಣ ವಾಕ್ಯವನ್ನು ಹೇಳಬೇಕು.

ವರನು ವಧುವಿನ ಹುಬ್ಬುಗಳ ನಡುವೆ ದರ್ಭೆ ತುದಿಯಿಂದ ವ್ಯಾಹೃತಿ ಮಂತ್ರವನ್ನು ಹೇಳುತ್ತಾ ಪರಿಮಾರ್ಜನೆ ಮಾಡಬೇಕು. ಆ ದರ್ಭೆಯನ್ನು ಎಸೆದು ಕೈ ತೊಳೆದುಕೊಳ್ಳಬೇಕು.

7 **ಕನ್ಯಾದಾನ** ವರನು ಪೂರ್ವಮುಖನಾಗಿಯೂ, ಕನ್ಯೆಯು ಪಶ್ಚಿಮ ಮುಖಳಾಗಿಯೂ ಇರಬೇಕು. ಪ್ರಯೋಗದಲ್ಲಿ ಹೇಳಿದಂತೆ ಕನ್ಯಾ ದಾನವನ್ನು ಮಾಡಬೇಕು. ಕನ್ಯಾದಾನ ಸಂಕಲ್ಪವನ್ನು ಮಹಾಸಂಕಲ್ಪದ ವಿಧಿಯಂತೆ ಮಾಡಬೇಕು. ಇದು ಹಿಂದಿನಿಂದ ರೂಢಿಯಲ್ಲಿರುವುದು. ಇದನ್ನು ಕಾಲೋಚಿತವಾಗಿ ಹೇಳಬೇಕು.

ಕಾಲವಿಲ್ಲದಿದ್ದರೆ ಸಂಕ್ಷೇಪವಾಗಿ ಸಂಕಲ್ಪ ಮಾಡಬೇಕು. ಮಹಾಸಂಕ ಲ್ಪವು ಕಡ್ಡಾಯವೆಂದು ಸಿಂಧುಕಾರನು ಹೇಳಿಲ್ಲ.

8 ಕನ್ಯಾದಾನ ಮಾಡುವಾಗ ವರನ ಕಡೆಯವರು ಮತ್ತು ವಧೂ ಕಡೆಯವರು ತಮ್ಮ ತಮ್ಮ ತ್ರಿಪುರುಷರ ಗೋತ್ರ ಪ್ರವರಗಳನ್ನು ಮೂರು ಸಲ ಹೇಳಬೇಕು.

ಕಂಚಿನ ಪಾತ್ರೆಯಲ್ಲಿ ಕನ್ಯೆಯ ಅಂಜಲಿಯನ್ನೂ ಅದರ ಮೇಲೆ ವರನ ಅಂಜಲಿಯನ್ನೂ ಇರಿಸಿ ದಾತೃವಿನ ಬಲಭಾಗದಲ್ಲಿ ನಿಂತಿರುವ ಧರ್ಮಪತ್ನಿಯಿಂದ ಚಿನ್ನವನ್ನು ಕೈಯಲ್ಲಿ ಇಟ್ಟು ಗಂಗಾಜಲವನ್ನು ಧಾರೆಯಾಗಿ ಸುರಿಸಬೇಕು. 'ಕನ್ಯಾತಾರಯತು' ಇತ್ಯಾದಿ ನಾಲ್ಕು ಮಂತ್ರಗಳನ್ನು ಹೇಳಿ. "ಶ್ರೀಧರರೂಪಿಣೇ ವರಾಯ ಶ್ರೀರೂಪಿಣೀಂ ಕನ್ಯಾಂ ಪ್ರಜಾಪತಿ ದೈವತ್ಯಾಂ ಧರ್ಮಪ್ರಜಾಸಂಪತ್ತ್ಯರ್ಥಂ ತುಭ್ಯಮಹಮಿಷಾಂ ಸಂಪ್ರದದೇ" ಎಂದು ಉಚ್ಚರಿಸಿ ವರನ ಕೈಯಲ್ಲಿ ಅಕ್ಷತೆ ನೀರನ್ನು ಬಿಡಿಸಬೇಕು, ಉಳಿದ ಪ್ರಯೋಗವನ್ನು ಸೂತ್ರ ಕ್ರಮದಂತೆ ಮಾಡಬೇಕು.

ಕನ್ಯಾದಾನ ಪ್ರತಿಷ್ಠಾಸಿದ್ಧ್ಯರ್ಥಂ ಸುವರ್ಣದಾನ, ಅಥವಾ ಯಥಾ ಶಕ್ತಿ ದಕ್ಷಿಣಾದಾನ ಮಾಡಬೇಕು.

10 **ಅನುದಾನಗಳು** ಕನ್ಯಾದಾನಾಂಗ ಗೋದಾನ, ಅಂಗುಲೀಯ ದಾನ, ಕುಂಡಲದಾನ, ಚಿನ್ನದ ಕಡಗದಾನ, ತಾಮ್ರಜಲಪಾತ್ರೆ, ಕಂಚಿನ ಪಾತ್ರೆ (ಭೋಜನಾರ್ಥ) ಇವುಗಳ ದಾನವನ್ನು ಮಾಡಬೇಕು. ಅಲ್ಲದೆ ನೀರು ಕುಡಿಯುವ ಜಲಪಾತ್ರ (ಬೆಳ್ಳಿಲೋಟ) ತಾಂಬೂಲಕರಂಡ (ಕರಡಿಗೆ) ಇತ್ಯಾದಿಗಳನ್ನು ವಿಭವಾನುಸಾರವಾಗಿ ದಾಸೀದಾಸ ಸಮೇತ ಗಜ, ಅಶ್ವ, ಭೂಮಿ ಸ್ವರ್ಣಪಾತ್ರೆ, ಪುಸ್ತಕ, ಶಯ್ಯಾ, ಗೃಹ, ರಜತ, ವೃಷಭ ಇವುಗಳ ದಾನವನ್ನು ಮಂತ್ರಗಳನ್ನು ಹೇಳಿ ವರನಿಗೆ ದಾನಮಾಡಬೇಕು.

ಈ ಮೇಲೆ ಹೇಳಿದ ಅಂತಃಪಟಧಾರಣೆ, ನಿರೀಕ್ಷಣೆ ಕನ್ಯಾದಾನಾಂತ ಪ್ರಯೋಗವನ್ನು ಅಗ್ನಿಪ್ರತಿಷ್ಠೆ ಮಾಡಿಕೊಂಡು, ಕೆಲವರು ಮಾಡುತ್ತಾರೆ. ಇನ್ನು ಕೆಲವರು ಪೂರ್ವಾಂಗ ಹೋಮಮಾಡಿದ ನಂತರ ಮಾಡುತ್ತಾರೆ. ಕೆಲವರು ಆಜ್ಯಸಂಸ್ಕಾರವಾದ ನಂತರ ಮಾಡುವರು. ಈ ರೀತಿ ಅನೇಕ ಪಕ್ಷಗಳಿವೆ. ಆದರೂ ತಮ್ಮ ತಮ್ಮ ಗೃಹ್ಯಸೂತ್ರದಲ್ಲಿ ಹೇಳಿದಂತೆ ಮಾಡುವುದು ಯುಕ್ತ, ಶಾಸ್ತ್ರೀಯವು.

11 ಅನಂತರ **ಕಂಕಣಬಂಧನ** ಅಕ್ಷತಾರೋಪಣ, ಅನ್ಯೋನ್ಯ ತಿಲಕಧಾರಣ, ಮಾಲೆಗಳನ್ನು ಹಾಕುವುದು, ಮಾಂಗಲ್ಯ ಧಾರಣೆ ಉತ್ತರೀಯ

ವಸ್ತ್ರದ ಗ್ರಂಥಿಯನ್ನು ಬಿಚ್ಚುವುದು, ಇತ್ಯಾದಿಗಳನ್ನು ಗೃಹ್ಯ ಸೂತ್ರದಂತೆ ಆಚರಿಸಬೇಕು.

12 ವಿವಾಹಹೋಮ ವಧೂವಿನ ಪ್ರತಿಗ್ರಹ ಮಾಡಿದ ನಂತರ ವಧೂವಿಗೆ ಭಾರ್ಯಾತ್ವ ಸಿದ್ಧಿಸಲು ಅತ್ಯವಶ್ಯ ಕರ್ತವ್ಯ ವಿವಾಹಾಗ್ನಿಯನ್ನು ರಕ್ಷಿಸಬೇಕು. ನಾಲ್ಕನೆದಿನ ಪರ್ಯಂತ ರಕ್ಷಿಸಲು ಆಗದಿದ್ದರೆ, ಪ್ರವೇಶನೀಯ ಹೋಮಕ್ಕೂ ಮೊದಲೇ ಹೋದರೆ ವಿವಾಹಹೋಮವನ್ನು ಪುನಃ ಆಚರಿಸಬೇಕು. ಪ್ರವೇಶಹೋಮವಾದನಂತರ ಅಗ್ನಿಯುಹೋದರೆ ವಿವಾಹಹೋಮ ಪ್ರವೇಶಹೋಮ ಈ ಎರಡನ್ನು ಪುನಃ ಆಚರಿಸಬೇಕೆಂದು ಶಾಸ್ತ್ರವಿದೆ.

ಪ್ರವೇಶನೀಯ ಹೋಮವನ್ನು ಪತಿಯು ವಧೂವಿನೊಡನೆ ಗೃಹ ಪ್ರವೇಶ ಮಾಡಿದನಂತರವೇ ಮಾಡಬೇಕಾದದ್ದು. ಆದರೂ ಶ್ವಶುರ ಗೃಹ ದಲ್ಲೇ ಶಿಷ್ಟರೂ ಆಚರಿಸುತ್ತಾ ಇದ್ದಾರೆ. ಈಗ ಒಂದೇ ದಿನದ ಲಗ್ನವಾದ್ದ ರಿಂದ ಶ್ವಶುರನು ಕೊಟ್ಟ ಮಂಟಪ ಗೃಹದಲ್ಲೆ ನಡೆಯುತ್ತಾ ಇದೆ.

### ವಿಶೇಷ ವಿಷಯ

ಅರ್ಧರಾತ್ರಿಗಿಂತ ಮುಂಚೆ ವಿವಾಹಹೋಮವಾಗಿದ್ದರೆ ಆಗಲೆ ಪುನಃ ಸಂಕಲ್ಪಮಾಡಿ ರಾತ್ರಿಯಲ್ಲೂ ಗೃಹಪ್ರವೇಶದ ಹೋಮವನ್ನು ಮಾಡುವುದ ರಲ್ಲಿ ದೋಷವಿಲ್ಲ. ಈ ಎರಡು ಹೋಮವನ್ನು ಏಕತಂತ್ರೇಣ ಅನುಷ್ಠಾನ ಮಾಡುವುದು ಯುಕ್ತವಲ್ಲ. ವಿವಾಹಾಗ್ನಿಯೇ ಪ್ರವೇಶಹೋಮವಾದ ನಂತರವೇ ಗೃಹ್ಯಾಗ್ನಿಯಾಗುವುದೆಂದು ಆಶ್ವಲಾಯನರಿಗೂ ತೈತ್ತರೀಯಾದಿ ಶಾಖೆಯವರಿಗೂ ಹೇಳಿದೆ. ಧಾರಾಗ್ನಿಯನ್ನು ಇಟ್ಟುಕೊಳ್ಳುವ ಗೃಹಸ್ಥನು ಪ್ರವೇಶಹೋಮವಿಲ್ಲದೆಯೂ ರಾತ್ರಿಯಲ್ಲೆ 6 ಘಳಿಗೆಯೊಳಗೆ ಅಗ್ನಿಯನ್ನು ಸಾಧಿಸಿಕೊಂಡು ವ್ಯತೀಪಾತಾದಿ ದೋಷವಿದ್ದರೂ ಔಪಾಸನಾರಂಭಮಾಡ ಬಹುದು. ಪ್ರವೇಶ ಹೋಮವಾದ ನಂತರ ಮಾಡುವುದಾದರೆ ಮಾರನೆ ಸಾಯಂಕಾಲದಲ್ಲೆ ಔಪಾಸನವನ್ನು ಆರಂಭಿಸಬೇಕು.

ಈಗಿನ ಕಾಲದಲ್ಲಿ ಯಾವಧರ್ಮ ಶಾಸ್ತ್ರವೂ ನಡೆಯಲು ಅವಕಾಶವಿಲ್ಲ ಶ ದ್ಧೆಯೂ ಇಲ್ಲವಾದ್ದರಿಂದ ಒಂದೇದಿನದ ಲಗ್ನವಾದ ಕಾರಣ ಸಾಯಂಕಾಲ ಪ್ರಾತಃಕಾಲಗಳ ಎರಡು ಔಪಾಸನಗಳನ್ನು ಸೇರಿಸಿ ಮಾಡುವುದು ಒಳಿತು. ಜನ್ಮದಲ್ಲಿ ಒಂದು ದಿನವಾದರೂ ಔಪಾಸನವಾದಂತೆ ಆದೀತೆಂದು ನಮ್ಮ ಅಭಿಪ್ರಾಯ.

## ವಧೂವಿಗೆ 1ನೆವರ್ಷ ಪತಿ ಗೃಹವಾಸ ನಿಷಿದ್ಧಕಾಲ

1 **ವಿವಾಹವಾದ ವರ್ಷ ವಧೂವಿಗೆ ಪತಿಗೃಹದಲ್ಲಿ ಆಷಾಢ ಮಾಸದಲ್ಲಿ ವಾಸಕೂಡದು.** ಆಕೆಯು ತವರು ಮನೆಯಲ್ಲಿ ವಾಸಮಾಡ ಬೇಕು. ಒಂದುವೇಳೆ ವಾಸಮಾಡಿದರೆ ಪತಿಯ ತಾಯಿ ಅತ್ತೆಗೆ ಒಳಿತಲ್ಲ. ಅತ್ತೆಯ ಸಾವಿಗೆ ಕಾರಣವಾಗುವುದು. ಕ್ಷಯಮಾಸ, ಅಧಿಕಮಾಸಗಳಾಗಿದ್ದರೆ ತನಗೂ ಒಳಿತಲ್ಲ, ಜ್ಯೇಷ್ಠ ಮಾಸದಲ್ಲಿ ವಾಸಮಾಡಿದರೆ ಪತಿಯ ಜ್ಯೇಷ್ಠ ಪುತ್ರನಿಗೆ ಒಳಿತಲ್ಲ, ಚೈತ್ರದಲ್ಲಿ ತನ್ನ ತಂದೆಯ ಮನೆಯಲ್ಲಿ ವಾಸಮಾಡಿದರೆ ತನ್ನ ತಂದೆಗೂ ಒಳಿತಲ್ಲ.

2 **ವಿಶೇಷ ಶಾಸ್ತ್ರ** ಅತ್ತೆಯಾಗಲಿ, ಪತಿಯ ಜ್ಯೇಷ್ಠಭ್ರಾತ (ಅಣ್ಣನು) ನಾಗಲಿ, ತಂದೆಯಾಗಲಿ ಯಾರೂ ಇಲ್ಲದಿದ್ದರೆ ವಧೂವು ಆಷಾಢ, ಜ್ಯೇಷ್ಠ, ಪುಷ್ಯ, ಚೈತ್ರಗಳಲ್ಲಿ ಪತಿಗೃಹ, ತಂದೆಯಗೃಹದಲ್ಲಿ ವಾಸ ಮಾಡಬಹುದು.

## ವರನಿಗೆ ಎರಡನೆ ವಿವಾಹ ಕಾಲ

3 ಮೊದಲಿನ ಹೆಂಡತಿಯು ಮೃತಪಟ್ಟ ದಿನದಿಂದ ಬೆಸವರ್ಷ ಅಂದರೆ 3ನೆ ವರ್ಷದಲ್ಲಿ ದ್ವಿತೀಯ ವಿವಾಹ ಮಾಡಿಕೊಳ್ಳಬೇಕು. ಇದಿ ಸಮವರ್ಷದಲ್ಲಿ ಮಾಡಿಕೊಂಡರೆ ಆವಿವಾಹವು ಮರಣಕ್ಕೆ ಕಾರಣವಾಗುವುದು.

ಆಪತ್ಕಾಲದಲ್ಲಿ ಮೊದಲನೆಯ ವರ್ಷವೆ ಮಹಾರುದ್ರಾಭಿಷೇಕ ಮೃತ್ಯುಂಜಯ ಮಂತ್ರ ಜಪವನ್ನು ಮಾಡಿ ವಿವಾಹವನ್ನು ಮಾಡಿಕೊಳ್ಳಬಹುದು.

## ವರನಿಗೆ ಮೂರನೆ ವಿವಾಹ ಮಾಡಿಕೊಳ್ಳುವ ವಿಧಾನ

4 ವರನು ಮೂರನೆ ಹೆಂಡತಿಯನ್ನು ವಿವಾಹ ಮಾಡಿಕೊಳ್ಳುವ ಸಂದರ್ಭದಲ್ಲಿ ಅರ್ಕ ವಿವಾಹವನ್ನು ಮಾಡಿ ನಂತರ ಮಾಡಿಕೊಳ್ಳಬೇಕು. ಹೀಗೆ ಮಾಡದಿದ್ದಲ್ಲಿ ಮೂರನೆ. ಹಂಡತಿಯು ವಿಧವೆಯಾಗುತ್ತಾಳೆ.

## ಅರ್ಕ ವಿವಾಹದ ವಿಧಿ

ಭಾನುವಾರ, ಅಥವಾ ಶನಿವಾರದಲ್ಲಿ ಹಸ್ತನಕ್ಷತ್ರವಿರುವಾಗ ಎಕ್ಕದ ಗಿಡದ ಹತ್ತಿರ ಪೂಜಾದ್ರವ್ಯಗಳನ್ನು ಸಂಭಾರವನ್ನು ತೆಗೆದುಕೊಂಡು ಹೋಗಿ ಕನ್ಯಾದಾನ ಮಾಡುವವನನ್ನೂ ಆಚಾರ್ಯನನ್ನಾಗಿ ಮಾಡಿಕೊಂಡು ವಿಧಿವತ್ತಾಗಿ ಅರ್ಕದಗಿಡಕ್ಕೆ ಕನ್ಯಾದಾನ ಮಾಡಿಸಿ ನಂತರ ತಾನು ಮಾಡಿಕೊಂಡಲ್ಲಿ ದೋಷವಿರುವುದಿಲ್ಲ. ಇದರ ವಿವಾಹ ವಿಧಿಯನ್ನು ವಿವಾಹ ಪ್ರಯೋಗವನ್ನು ನೋಡಿ ಮಾಡಿಸಬೇಕು.

## ಮಂಡಪದ ಉದ್ವಾಸನೆ ಮಾಡಿದನಂತರ ಕರ್ತವ್ಯ–ಅಕರ್ತವ್ಯಗಳು

1 ಸಾಮಾನ್ಯಶಾಸ್ತ್ರ ಉಪನಯನ ವಿವಾಹ ಮೊದಲಾದ ಮಂಗಳ ಕಾರ್ಯವು ನಡೆದ ನಂತರ ಉತ್ಸವವು ನಡೆದಮೇಲೂ ಕೂಡ್ಲೆ ಸ್ನಾನ ಮಾಡ ಬಾರದು, ಮತ್ತು ಸ್ನೇಹಿತರನ್ನು ಬಂಧುಗಳನ್ನು ಬೀಳ್ಕೊಟ್ಟನಂತರವೂ, ಇಷ್ಟದೇವತೆಯನ್ನು ಪೂಜಿಸಿದ ಮೇಲೂ ಸ್ನಾನ ಮಾಡಬಾರದು,

2 ಒಂದು ವರ್ಷ ಪರ್ಯಂತರ ಸಚೈಲಸ್ನಾನ, ತಿಲಮಿಶ್ರವಾದ ಕರ್ಮ (ಶ್ರಾದ್ಧ) ತರ್ಪಣ, ಇತ್ಯಾದಿ. ಶವವನ್ನು ಹಿಂಬಾಲಿಸುವುದು,

ಹೊಸ ತೀರ್ಥಕ್ಷೇತ್ರದರ್ಶನ, ಇತರ ದೇವತಾದರ್ಶನ ಹೊಸದಾಗಿ ಮಂಗಳ ಕಾರ್ಯ ನಡದ ಮೇಲೆ ಆಚರಿಸಬಾರದು.

ಮಾಸಷಟ್ಕಂ ವಿವಾಹಾದೌ ವ್ರತಪ್ರಾರಂಭಣೇsಪಿಚ ।
ಜೀರ್ಣಭಾಂಡಾದಿ ನತ್ಯಾಜ್ಯಂ ಗೃಹಸಂಮಾರ್ಜನಂತಥಾ ।
ಊರ್ಧ್ವಂ ವಿವಾಹಾತ್ ಪುತ್ರಸ್ಯ ತಥಾಚವ್ರತಬಂಧನಾತ್ ।
ಆತ್ಮನೋ ಮುಂಡನಂ ನೈವ ವರ್ಷಂ ವರ್ಷಾರ್ಧಮೇವಚ ।
ಮಾಸಮನ್ಯತ್ರಸಂಸ್ಕಾರೇ, ತ್ರಿಮಾಸಂ ಚೌಲಕರ್ಮಣಿ ।
ಪಿಂಡದಾನಂ ಮೃದಾಸ್ನಾನಂ ನಕುರ್ಯಾತ್ತಿಲತರ್ಪಣಂ ॥

ಎಂದು ಹೇಳಿದ ವಚನದಂತೆ, ವಿವಾಹ ವ್ರತಬಂಧ (ಉಪನಯನಾದಿ) ನಡೆದಮೇಲೆ ಆರುತಿಂಗಳುಕಾಲ, ಚೌಲವಾದ ಮೇಲೆ ಮೂರುತಿಂಗಳು ಕಾಲ, ಇತರ ನಾಂದೀಯುಕ್ತವಾದ ಸಂಸ್ಕಾರಗಳ ನಂತರ ಒಂದು ತಿಂಗಳು, ಪಿಂಡ ಪ್ರದಾನ, ತಿಲತರ್ಪಣ, ಮೃತ್ತಿಕಾಸ್ನಾನ ಇವುಗಳನ್ನು ಮಾಡಬಾರದೆಂದು ತ್ರಿಪುರುಷ ಕುಲದವರಿಗೂ ಜ್ಞಾತಿಗಳಿಗೂ ಹೇಳಿದೆ. ಹಾಗೂ ಕ್ಷೌರವನ್ನು ಮಾಡಿಸಬಾರದೆಂದು ಹೇಳಿದೆ. ವ್ರತ ವಿವಾಹಗಳು ಮಂಗಳವೆಂದು ಹೇಳು ವಾಗ್ದಾಮುಂಜಿಯಾದ ಮೇಲೆ ಮುಂಡನವನ್ನು ಮಾಡಿಸಬಾರದು. ಕರ್ಮಾಂಗ ವಾಗಿ ಬಂದಿರುವ ಮುಂಡನವನ್ನು, ಇಚ್ಛಾನುಸಾರವಾದ ಮುಂಡನವನ್ನು ನಿಷೇಧಿಸಿದೆ.

## ಇದಕ್ಕೆ–ಅಪವಾದಶಾಸ್ತ್ರ

ಗಂಗಾನದಿಯಲ್ಲೂ, ಭಾಸ್ಕರಕ್ಷೇತ್ರದಲ್ಲೂ, ಮಾತಾಪಿತೃಗಳು ಮೃತ ಪಟ್ಟಕಾಲದಲ್ಲೂ, ಆಧಾನ, ಸೋಮಯಾಗಾದಿಗಳಲ್ಲೂ ದರ್ಶಾದಿ ಇಷ್ಟಿ ಗಳಲ್ಲೂ ಕ್ಷೌರವನ್ನು ಮಾಡಿಕೊಳ್ಳಬಹುದು. ಮಹಾಲಯಶ್ರಾದ್ಧ, ಗಯಾಶ್ರಾದ್ಧ, ಮಾತಾಪಿತೃಗಳ ಪ್ರತಿಸಾಂವತ್ಸರಿಕ ಶ್ರಾದ್ಧ ಸಪಿಂಡೀಕರಣಾಂತ ಪ್ರೇತಶ್ರಾದ್ಧ, ಷೋಡಶಿ ಶ್ರಾದ್ಧಗಳೂ ವಿವಾಹ ಮಾಡಿಕೊಂಡ

ವನೂ ಸಹ ಪಿಂಡಪ್ರದಾನ, ತಿಲತರ್ಪಣ, ಮಾಡಬಹುದು. ಕೆಲವರು ಸಹೋದರ, ದೊಡ್ಡಪ್ಪ ಚಿಕ್ಕಪ್ಪ ಮುಂತಾದವರ ಕರ್ತವ್ಯ ಶ್ರಾದ್ಧಗಳಲ್ಲೂ ಪಿಂಡಪ್ರದಾನಾದಿಗಳನ್ನು ಮಾಡಬಹುದೆಂದು ಹೇಳುವರು. ಹೀಗೆಯೇ ಪಿಂಡ ಪಿತೃಯಜ್ಞ, ಅಷ್ಟಕಾ ಅನ್ವಷ್ಟಕಾದಿಗಳಲ್ಲಿ ಹಿಂದೆಯೂ ಹೇಳಿದ ಶ್ರಾದ್ಧಗಳಲ್ಲಿ ಪಿಂಡದಾನ ನಿಷೇಧವಿಲ್ಲ, ದರ್ಶಶ್ರಾದ್ಧಮಾತ್ರ ಪಿಂಡ ರಹಿತವೇ ಆಗಿದೆ.

## ನೂತನ ವಧೂಪ್ರವೇಶದ ಕಾಲ

1 ವಿವಾಹವಾದಮೇಲೆ ಹದಿನಾರು ದಿನಗಳೊಳಗೆ ಸಮದಿವಸಗಳಲ್ಲಿ ಅಥವಾ ೫, ೭, ೯ ನೆ ವಿಷಮ (ಬೆಸ) ದಿವಸಗಳಲ್ಲಿ ರಾತ್ರಿಯಲ್ಲಿ ಸ್ಥಿರಲಗ್ನ ದಲ್ಲಿ ವಧೂವಿಗೆ ಗೃಹಪ್ರವೇಶವು ಶುಭಕರವು. ಮೊದಲನೆ ದಿನದಲ್ಲೂ ಆಗಬಹುದುದೆಂದು ಕೆಲವರ ಮತ. ೬ನೇ ದಿನ ಕೂಡದೆಂದು ಪ್ರಯೋಗ ರತ್ನದಲ್ಲಿ ಹೇಳಿದ್ದರೂ ಅದು ಮೂಲಪ್ರಮಾಣವಿಲ್ಲದ್ದೆಂದು ಸಿಂಧುಕಾರನು ಹೇಳುವನು.

2 ಮೇಲ್ಕಂಡ ಹದಿನಾರು ದಿನಗಳೊಳಗೆ ಪ್ರವೇಶಕ್ಕೆ ಹೇಳಿದ ನಕ್ಷತ್ರ, ತಿಥಿ, ವಾರ, ಚಂದ್ರಬಲ ಇತ್ಯಾದಿಗಳು ಇಲ್ಲದಿದ್ದರೂ, ಗುರು ಶುಕ್ರರು ಅಸ್ತರಾಗಿದ್ದರೂ ಅಡ್ಡಿಯಿಲ್ಲ.

## ಇದಕ್ಕೆ ಅಪವಾದ ಶಾಸ್ತ್ರ

ವ್ಯತೀಪಾತೇ ಕ್ಷಯತಿಥೌ ಗ್ರಹಣೇ ವೈಧೃತೌ ತಥಾ ।
ಅಮಾಸಂಕ್ರಾಂತಿ ವಿಷ್ಟ್ಯಾದೌ ಪ್ರಾಪ್ತಕಾಲೇಽಪಿ ನಾಚರೇತ್ ॥

3 ಎಂದು ಹೇಳಿದೆಯಾದ್ದರಿಂದ ವ್ಯತೀಪಾತ, ಕ್ಷೀಣತಿಥಿ, ಗ್ರಹಣ, ವೈಧೃತಿ ಅಮಾವಾಸ್ಯೆ, ಸಂಕ್ರಾಂತಿ, ವಿಷ್ಟಿ ಇತ್ಯಾದಿ ಮಹಾದೋಷವಿದ್ದರೆ ೧೬ ದಿನಗಳೊಳಗೂ ವಧೂ ಗೃಹಪ್ರವೇಶವನ್ನು ಮಾಡಿಕೊಳ್ಳಬಾರದು.

4 ಪ್ರಥಮ ನವವಧೂಪ್ರವೇಶಕ್ಕೆ ವಿವಾಹಕ್ಕಾಗಿ ಹೋಗುವಾಗಲೂ ಪ್ರತಿಶುಕ್ರ ದೋಷವಿರುವುದಿಲ್ಲ. ಎರಡನೆ ಆವರ್ತಿ ಪ್ರವೇಶವಾದರೆ ಈ ದೋಷವಿದೆ.

5 ಪದಿನಾರು ದಿನಗಳು ಕಳೆದನಂತರ ೧ ತಿಂಗಳು ಪರ್ಯಂತ ಬೆಸ ದಿನಗಳಲ್ಲೂ, ತಿಂಗಳಾದ ನಂತರ ಬೆಸಮಾಸದಲ್ಲೂ, ವರ್ಷವು ಕಳೆದರೆ ೩-೪ ಇತ್ಯಾದಿ ಬೆಸವರ್ಷದಲ್ಲೂ ವಧೂಗೃಹ ಪ್ರವೇಶವು ಶುಭಕರ.

ಐದು ವರ್ಷಗಳು ಕಳೆದನಂತರ, ಸಮ, ವಿಷಮವಿಚಾರವಿಲ್ಲ, ೧೬ದಿನ ಗಳು ಕಳೆವನಂತರ ವಧೂಪ್ರವೇಶಕ್ಕೆ ಹೇಳಿದ ನಕ್ಷತ್ರಗಳು. ಅಶ್ವಿನಿ, ರೋಹಿಣಿ, ಮೃಗಶಿರ, ಪುಷ್ಯ, ಮಘ, ಉತ್ತರೆ ಉತ್ತರಾಷಾಢ, ಉತ್ತರಾ ಭಾದ್ರ ಹಸ್ತ, ಸ್ವಾತಿ, ಅನೂರಾಧೆ, ಮೂಲ, ಶ್ರವಣ, ಧನಿಷ್ಠ ರೇವತೀ ಪ್ರಶಸ್ತವು. ಒಂದು ತಿಂಗಳು ಕಳೆದ ನಂತರ, ಮಾರ್ಗಶೀರ್ಷ, ಮಾಘ, ಫಾಲ್ಗುನ, ವೈಶಾಖ, ಜ್ಯೇಷ್ಠ ಮಾಸಗಳು, ಚೌತಿ ನವಮಿ, ಚತುರ್ದಶಿ, ಪುಣ್ಣಿಮೆ, ಅಮಾ ಬಿಟ್ಟು ಇತರ ತಿಥಿಗಳೂ, ಭಾನುವಾರ, ಮಂಗಳವಾರ ಬಿಟ್ಟು ಉಳಿದ ವಾರಗಳು ಶುಭಕರವು.

## ಎರಡನೆ ಸಾರಿ ವಧೂವನ್ನು ಬರಮಾಡಲು ಉಕ್ತಕಾಲ

ಎರಡನೆ ಸಾರಿ ವಧೂವನ್ನು ಗೃಹಕ್ಕೆ ಬರಮಾಡಿಕೊಳ್ಳುವಾಗ ಹೇಳಿದ ನಕ್ಷತ್ರಗಳು. ಮೇಲೆ ಹೇಳಿದ ನಕ್ಷತ್ರಗಳು ಪುನರ್ವಸು ಶತತಾರೆಗಳು ಭಾನು, ಶನಿ, ಮಂಗಳವಾರ ಬಿಟ್ಟುಳಿದ ವಾರಗಳೂ ಶ್ರೇಷ್ಠ. ಆದರೆ ಗುರುಶುಕ್ರಾಸ್ತಗಳೂ, ಗ್ರಹಣಾದಿ ದೋಷಗಳೂ ಇರಬಾರದು. ವಿಷ್ಣು ಶಯನ ಮಾಸ ಆಷಾಢದಿಂದ ಕಾರ್ತಿಕದವರೆಗಿನ ಮಾಸಗಳೂ ಸಮವತ್ಸರ ಗಳೂ ಪ್ರತಿಶುಕ್ರಾದಿ ದೋಷಗಳೂ ವರ್ಜ್ಯವಾಗಿದೆ.

ವಿವಾಹವಾಗಿ ೧೬ ದಿನಗಳೊಳಗಾದರೆ ದೋಷವಿಲ್ಲ. ನಕ್ಷತ್ರ, ತಿಥಿ, ವಾರ, ಯೋಗ, ಯಾವುದನ್ನೂ ನೋಡಬೇಕಾಗಿಲ್ಲ. ೧೧ನೇ ದಿನ ಸಮವಾರಗಳಲ್ಲೂ ಆಗಬಹುದು. ದುರ್ಭಿಕ್ಷೆ, ದೇಶಕ್ಷೋಭ, ವಿವಾಹ, ತೀರ್ಥಕ್ಷೇತ್ರಗಮನ, ಏಕನಗರ ಏಕಗ್ರಾಮ ಇಂತಹ ಸಂದರ್ಭದಲ್ಲೂ ಪ್ರತಿಶುಕ್ರ ದೋಷವಿಲ್ಲ, ರೇವತಿ, ಅಶ್ವಿನಿ, ಭರಣಿ, ಕೃತ್ತಿಕೆ ಇವುಗಳ ೧ನೇ ಪಾದದಲ್ಲಿ ಚಂದ್ರನಿದ್ದರೂ ಈ ದೋಷವಿಲ್ಲ.

## ಗರ್ಭಾಧಾನಕಾಲ

1 ಗರ್ಭಾಧಾನಕ್ಕೆ ಹೇಳಿದ ಕಾಲದಲ್ಲಿ ಆಚರಿಸುವುದಕ್ಕೆ ಗುರು ಶುಕ್ರಾಸ್ತಾದಿ ದೋಷಗಳಿಲ್ಲ, ಗರ್ಭಾಧಾನದಕಾಲ, ಋತುಕಾಲ, ವಧೂವು ಋತುವಾಗಿ ರಜೋದರ್ಶನದ ದಿನದಿಂದ 16 ದಿನಗಳು ಪರ್ಯಂತ ಋತುಕಾಲ, ಅವು ಗಳಲ್ಲಿ ಮೊದಲಿನ 4 ದಿನಗಳೂ 11. 12ನೆ ದಿನಗಳೂ ವರ್ಜ್ಯವಾಗಿವೆ. ಉಳಿದ ದಿನಗಳಲ್ಲಿ ಪುತ್ರ ಸಂತಾನ ಕಾಮಿಯು ಸಮದಿನ ಗಳಲ್ಲೂ, ಕನ್ಯಾಸಂತತಿ ಕಾಮಿಯು ಬೆಸದಿನಗಳಲ್ಲೂ ಗರ್ಭಾಧಾನ ಮಾಡ ಬೇಕು.

## ವರ್ಜ್ಯತಿಥಿಗಳು

2 ಅಷ್ಟಮಿ, ಚತುರ್ದಶಿ, ಹುಣ್ಣಿಮೆ, ಅಮಾವಾಸ್ಯೆ, ಸಂಕ್ರಾಂತಿ ವೈಧೃತಿ, ವ್ಯತೀಪಾತ ಮುಂತಾದ ದೋಷಗಳು ಇರುವಾಗ ಮತ್ತು ಸಂಧ್ಯಾ ಕಾಲದಲ್ಲೂ. ಮಾತಾಪಿತೃಶ್ರಾದ್ಧ ದಿನಗಳಲ್ಲೂ, ಹಗಲೂ ಸಹ ಸ್ತ್ರೀಗಮನವು ನಿಷಿದ್ಧವಾಗಿದೆ.

3 ಶಾಸ್ತ್ರ ನಿಯಮವನ್ನು ಅನುಸರಿಸುವ ಆಸ್ತಿಕರು ಮದುವೆಯಾಗಿ 4ದಿನಗಳ ನಂತರ ಋತುಶಾಂತಿಯನ್ನು ವಿಧಿವತ್ತಾಗಿ ಆಚರಿಸಿ ನಂತರ ಗರ್ಭಾಧಾನ ಮಾಡಿಕೊಳ್ಳಬೇಕು, ಇದೇ ಒಳಿತು.

ಈಗಿನ ಕಾಲದಲ್ಲಿ ಗರ್ಭಾಧಾನ ಸಂಸ್ಕಾರವೆ ಇಲ್ಲದೆ ವಿವಾಹವಾದ ದಿನವೇ ವರನು ಗರ್ಭಾಧಾನ ಮಾಡುವನು. ಮಾತಾಪಿತೃಗಳು ತಿಳಿದ ವೃದ್ಧರು ಇದ್ದರೂ ಭೀಷ್ಮರಂತೆ ಮಾತನಾಡದೆ ಈ ನಿಷಿದ್ಧಾಚರಣೆಗೆ ಸಮ್ಮತಿ ಕೊಟ್ಟು ನೆಡೆಸುವರು. ಇದೇ ಈ ಚಾಲತಿಗೆ ಬಂದಿದೆ. ಇದು ಅಶಾಸ್ತ್ರೀಯ, ತಪ್ಪು. ವಿವಾಹವಾದ ಮೇಲೆ 3 ದಿನಗಳು ಬ್ರಹ್ಮಚರ್ಯ ದಲ್ಲಿ ಇದ್ದು ನಂತರ ಆಚರಿಸಬೇಕೆಂದು ಶಾಸ್ತ್ರ ನಿಯಮವಿದ್ದರೂ ನಿಯಮ ವನ್ನು ಉಲ್ಲಂಘಿಸಿ ಮದುವೆ ದಿನ ರಾತ್ರಿಯೇ ಗರ್ಭಾಧಾನ ಮಾಡುವರು. ಇದು ಅಶಾಸ್ತ್ರೀಯವೆಂಬುದು ಖಂಡಿತ. ಆಸ್ತಿಕರು ಶ್ರದ್ಧಾಳುಗಳು ನಿಯ ಮವನ್ನು ಅನುಸರಿಸುವುದೇ ಒಳ್ಳೆಯದು.

ಯಾರ ಸೂತ್ರದಲ್ಲಿ ಗರ್ಭಾಧಾನ ಹೋಮವನ್ನು ಹೇಳಿಲ್ಲವೊ ಅವರು ಹೋಮವನ್ನು ಮಾಡಬೇಕಾಗಿಲ್ಲ, ಆದರೆ ಅದರ ಮಂತ್ರಪಾಠವನ್ನಾದರೂ ಮಾಡಬೇಕಾದದ್ದು, ಯಾರ ಸೂತ್ರದಲ್ಲಿ ಅಶ್ವಲಾಯನಾದಿ ಸೂತ್ರಗಳಲ್ಲಿ ಹೋಮವನ್ನು ಮಾಡಬೇಕೆಂದು ಹೇಳಿದೆಯೋ, ಆಸೂತ್ರದವರು ಗೃಹ್ಯಾಗ್ನಿ ಯಲ್ಲಿ ಅದನ್ನು ಆಚರಿಸಬೇಕು. ಆಹಿತಾಗ್ನಿ, ಅರ್ಧಾಧಾನಿ, ಆಹಿತಾಗ್ನಿಯಲ್ಲ ದವನು, ಇವರು ವಿವಾಹ ಸಿದ್ಧವಾದ ಅಗ್ನಿಯಲ್ಲಿ ಈ ಹೋಮವನ್ನು ಆಚರಿಸಬೇಕು. ಅಗ್ನಿ ವಿಚ್ಛೇದವಾಗಿದ್ದರೆ ಪುನಃ ಸಂಧಾನದಿಂದ ಅಗ್ನಿಯನ್ನು ಸಂಪಾದಿಸಿ ಆಚರಿಸಬೇಕು.

ಪ್ರಥಮ ಋತುದರ್ಶನವು ದೋಷಯುಕ್ತವಾಗಿದ್ದರೆ ಭುವನೇಶ್ವರೀ ಶಾಂತಿಯನ್ನು ಪ್ರಯೋಗದಲ್ಲಿ ಹೇಳಿದಂತೆ ಆಚರಿಸಿ. ಅನಂತರ ಗರ್ಭಾಧಾನ ಹೋಮವನ್ನು ಆಚರಿಸಬೇಕು.

ವಿವಾಹವಾದ ನಾಲ್ಕನೆ ದಿನ ವರನ ತಾಯಿಗೆ ವಧುವಿನ ಮಾತಾ ಪಿತೃಗಳು ಐರಿಣೀದಾನ ಮಾಡಬೇಕು. ವರನ ತಾಯಿ ಬಹಿಷ್ಠೆಯಾದರೆ ಶುದ್ಧ ರಾದಮೇಲೆ, ಅಥವಾ ಅವರನ್ನು ಉದ್ದೇಶಿಸಿ ಮನಸಾ ದಾನ ಮಾಡಬೇಕು.

ವಧೂವರರ ತಾಯಿಂದರು ದೇವತೋತ್ಥಾಪನೆ ಮಂಡಪೋದ್ವಾಸನೆಗೆ ಮುಂಚೆ ಬಹಿಷ್ಠೆಯಾದರೆ. ಪೂರ್ವೋಕ್ತ ಶಾಂತಿಯನ್ನು ಮಾಡಿ ಅನಂತರ ದೇವತೋತ್ಥಾಪನೆ ಮೊದಲಾದವುಗಳನ್ನು ಮಾಡಬೇಕು

## ನೂತನ ಗೃಹ ನಿರ್ಮಾಣ ಶಂಕು ಸ್ಥಾಪನೆ ಕಾಲಗಳು

1 ಮಾಘ, ಫಾಲ್ಗುನ, ವೈಶಾಖ, ಶ್ರಾವಣ, ಮಾರ್ಗಶೀರ್ಷ ಕಾರ್ತಿಕ, ಈ ಮಾಸಗಳು ಗೃಹನಿರ್ಮಾಣ ಆರಂಭಕ್ಕೆ ಪ್ರಶಸ್ತವಾದ ಮಾಸಗಳು. ಅಂದರೆ ಪುತ್ರ ಸಂಪತ್ತು, ಧನ, ಆರೋಗ್ಯ ಕಾರಕಗಳು,

2 ಜೇಷ್ಠ, ಆಷಾಢ, ಆಶ್ವಯುಜ, ಪುಷ್ಯಮಾಸಗಳು ಶ್ರೇಷ್ಠವಲ್ಲ, ಯಜಮಾನನ ಹಾನಿಗೂ, ಧನಹಾನಿಗೂ, ಕಲಹ, ಅಗ್ನಿಭಯ ಮುಂತಾದ ಅರಿಷ್ಟಗಳಿಗೆ ಇವು ಕಾರಣವಾದವು.

ನಕ್ಷತ್ರಗಳು : ಉತ್ತರೆ ಫಲ್ಗುನಿ ಉತ್ತರಾಷಾಢ, ಉತ್ತರಾಭಾದ್ರೆ ಚಿತ್ರಾ ರೋಹಿಣಿ, ಸ್ವಾತೀ, ಜೇಷ್ಠೇ, ಮೃಗಶಿರ, ಮೂಲ, ಅಶ್ವಿನೀ. ಹಸ್ತ, ಪುಷ್ಯ, ಅನೂರಾಧಾ ಇವು ಗೃಹ ನಿರ್ಮಾಣಕ್ಕೆ ಪ್ರಶಸ್ತ ನಕ್ಷತ್ರಗಳು. **ವಾಸಿಷ್ಠ ಮತದಲ್ಲಿ** ಸ್ವಾತಿ, ಪುಷ್ಯ, ಅನೂರಾಧೇ ಅಶ್ವಿನಿ, ಶತಭಿಷೆ ಉತ್ತರಾಬಾದ್ರೆ ರೇವತಿ-ಇವು ಮಧ್ಯಮ ಫಲಗಳು, ಮಿಕ್ಕ ನಕ್ಷತ್ರಗಳು ತ್ಯಾಜ್ಯವಾಗಿವೆ.

3 ಸೂರ್ಯನು, ವೃಷಭ, ಕಟಕ. ಸಿಂಹ, ಕುಂಭ, ಮೇಷ, ತುಲಾ, ವೃಶ್ಚಿಕ ಮಕರರಾಶಿಗಳಲ್ಲಿರುವಾಗ ಗೃಹಾರಂಭ–ಮಾಡಿದರೆ ಪುತ್ರ ಪೌತ್ರಾದಿ ವೃದ್ಧಿಯುಂಟಾಗುತ್ತದೆ. ಶಂಕುಸ್ಥಾಪನೆಗೂ ಉಕ್ತವಾದ ನಕ್ಷತ್ರಗಳು ಪ್ರಶಸ್ತವಾಗಿವೆ.

## ವರ್ಜ್ಯಕಾಲ

4 ಗುರುಶುಕ್ರರು ಅಸ್ತವಾಗಿದ್ದಾಗಲೂ, ಅವುಗಳ ಬಾಲ್ಯವಾರ್ಧಕಾವಸ್ಥೆಗಳಲ್ಲೂ ಚಾತುರ್ಮಾಸ್ಯದಲ್ಲೂ, ಶೂನ್ಯಮಾಸದಲ್ಲೂ ಗೃಹನಿರ್ಮಾಣ ಮಾಡಕೂಡದು. ಶಂಕುಸ್ಥಾಪನೆಯೂ ಕೂಡದು, ಗೃಹಪ್ರವೇಶವೂ ಕೂಡದು.

## ಗೃಹದ್ವಾರ ನಿರ್ಮಾಣ ಕಾಲ

5 ಸೂರ್ಯನು ಸಿಂಹರಾಶಿಯಲ್ಲಿರುವಾಗ ಮನೆಗೆ ಪಶ್ಚಿಮ ದಿಕ್ಕಿನಲ್ಲಿ ಬಾಗಿಲನ್ನು ಇರಿಸಬೇಕು. ಉತ್ತರದ ಕಡೆಯಲ್ಲೂ, ಇರಿಸಬೇಕು. ಕುಂಭದಲ್ಲಿದ್ದಾಗ ಪೂರ್ವದಲ್ಲೂ. ವೃಶ್ಚಿಕದಲ್ಲಿರುವಾಗ ದಕ್ಷಿಣದಲ್ಲೂ, ಬಾಗಿಲನ್ನು ಇರಿಸಬೇಕು. ಹೀಗೆ ಇರಿಸಿದಲ್ಲಿ ಶುಭಸೌಖ್ಯಾದಿ ವೃದ್ಧಿಕರವಾಗುವುದು.

6 ಸೂರ್ಯನು, ಮಕರ, ತುಲಾ, ಕಟಕ, ಮೇಷರಾಶಿಗಳಲ್ಲಿರುವಾಗ ಕ್ರಮವಾಗಿ ಪಶ್ಚಿಮ ಉತ್ತರ, ಪೂರ್ವ. ದಕ್ಷಿಣಗಳಲ್ಲಿ ಬಾಗಿಲು ಇರಿಸುವುದು ಮಧ್ಯಮ ಫಲಕಾರಿಯಾಗುವುದು.

7 ಉಕ್ತತಿಥಿಗಳಲ್ಲೂ, ಭಾನು, ಮಂಗಳ, ಶನಿವಾರಗಳನ್ನು ಬಿಟ್ಟು ಉಳಿದವಾರಗಳಲ್ಲೂ, ಗೃಹಾರಂಭ, ಶಿಲಾನ್ಯಾಸ ಗೃಹಪ್ರವೇಶವು–ಗೃಹ ದ್ವಾರ ನಿರ್ಮಾಣ ಪ್ರಶಸ್ತವಾಗಿದೆ.

8 ಸೂತ್ರನ್ಯಾಸ, ಭಿತ್ತಿನ್ಯಾಸ ಶಿಲಾನ್ಯಾಸಗಳನ್ನು ಸ್ತಂಭಾರೋಪಣ ಮಾಡುವುದೂ ಸಹ ಮೇಲೆ ಹೇಳಿದ ತಿಥಿ. ವಾರ, ನಕ್ಷತ್ರ – ಮಾಸಗಳಲ್ಲೇ ಶ್ರೇಷ್ಠವಾದದ್ದು. **ಧನಿಷ್ಠಾ ಪಂಚಕದಲ್ಲಿ ಸ್ತಂಭವನ್ನುನಿಲ್ಲಿಸಬಾರದು:**

## ವಿಜಯ ದಶಮಿ ದಿನ ಶ್ರೇಷ್ಠವೇ ? ಅಲ್ಲವೇ ?

9 ಅಶ್ವಯುಜ ಮಾಸವೇ ತ್ಯಾಜ್ಯವಾಗಿರುವಾಗ ವಿಜಯದಶಮಿ ಗೃಹಾರಂಭ. ಗೃಹಪ್ರವೇಶಗಳಿಗೆ ಯೋಗ್ಯವಲ್ಲ. ಹಾಗೂ ಚೂಡಕರ್ಮ, ದೇವತಾ ಪ್ರತಿಷ್ಠೆ ಮುಂತಾದ ಕಾರ್ಯಗಳನ್ನೂ ಮಾಡಕೂಡದು, ಉತ್ತರಾಯಣ ಮಾಘಾದಿ ಪಂಚಕಗಳಲ್ಲೇ ವಿಹಿತವಾದ ಚೌಲ, ಉಪನಯನ ಗೃಹಪ್ರವೇಶಾದಿಗಳನ್ನೂ ವಿಜಯದಶಮೀ ದಿನ ಮಾಡಕೂಡದು, ಮಾಸ ವಿಶೇಷವನ್ನು ಹೇಳದೆ ವಿಧಿಸಿದ ಸಕಲಕಾರ್ಯ ಸಾಧಕ ಕರ್ಮಗಳನ್ನು ಮಾತ್ರ ಮಾಡಬಹುದು.

## ಗೃಹ ಪ್ರವೇಶ ಕಾಲ ಮತ್ತು ವಿಧಿ

ವಾಸ್ತು ಪೂಜಾವಿಧಿಯನ್ನು ಪ್ರವೇಶಕ್ಕೆ ಮೊದಲೇ ಮಾಡಬೇಕು. ಕೆಲವರು ರಾಕ್ಷೋಘ್ನ ಹೋಮವನ್ನು ಮಾಡುವರು ಅವರು ಪ್ರವೇಶಕ್ಕೆ ಮೊದಲೇ ರಾತ್ರಿ ರಾಕ್ಷೋಘ್ನ ಹೋಮಮಾಡಿ, ಅನಂತರ ವಾಸ್ತು ಪೂಜೆ ಹೋಮಗಳನ್ನು ಮಾಡಿ ಮಾರನೇ ದಿನ ಹಗಲು ಪತ್ನೀಸಮೇತನಾಗಿ ಗೃಹ ಪ್ರವೇಶ ಮಾಡಬೇಕು. ರಾತ್ರಿಯಲ್ಲಿ ನೂತನ ಗೃಹಪ್ರವೇಶ ಕೂಡದು. ಮೈತ್ರತಾರೆ, ಧ್ರುವತಾರೆ, ಕ್ಷಿಪ್ರತಾರೆ, ಚರತಾರೆಗಳೂ ಶ್ರೇಷ್ಠವೇ, ಇವು ಧನಸಂಪತ್ತು, ಪುತ್ರಸಂಪತ್ತನ್ನುಂಟು ಮಾಡುವವೆಂದು ಧರ್ಮಸಿಂಧುಕಾರ ಹೇಳುವನು.

ಶಸ್ತಾಃ ಸ್ಥಿರಾಶ್ಚ ಮೃದವಶ್ಚ ಗೃಹಪ್ರವೇಶೇ ।
ಕ್ಷಿಪ್ರಾಶ್ಚರಾಶ್ಚ ವಿಧಧ ತ್ಯುತವಃ ಪ್ರವಾಸಂ ।
ಶಿಷ್ಟಾ ವೃಷ-ಸ್ಥಿರ-ಗೃಹಾಸ್ಸಶುಭಾಶ್ಚಸರ್ವೇ ।
ವರ್ಜ್ಯಾ ಶ್ಚರಾ ವರಮಮೀಷ್ವಪಿ ವಾರ್ಷಭೋಂಶಃ ॥

ಎಂದು ವಿದ್ಯಾಮಾಧವೀಯದಲ್ಲಿ ಹೇಳಿದಂತೆ ಸ್ಥಿರ(ಧ್ರುವ) ಮೃದು ನಕ್ಷತ್ರಗಳೇ. ಪ್ರಶಸ್ತವು ಕ್ಷಿಪ್ರ, ಚರ, ಎಂಬುವ ಮೇಲೆ ಹೇಳಿದ ನಕ್ಷತ್ರಗಳು ಗೃಹಪ್ರವೇಶಕ್ಕೆ ಯೋಗ್ಯವಲ್ಲ. ಈ ನಕ್ಷತ್ರದಲ್ಲಿ ಮಾಡಿದರೆ ಯಜಮಾನನಿಗೆ ಪ್ರವಾಸವನ್ನುಂಟು ಮಾಡುವುದು. ಆದ್ದರಿಂದ ಕ್ಷಿಪ್ರಚರಗಳು ಪ್ರಶಸ್ತ ವೆಂದರೂ ಪ್ರವಾಸವನ್ನುಂಟು ಮಾಡುವುದರಿಂದ ವರ್ಜ್ಯವಾಗಿವೆ. ಆದರೂ ವೃಷಭರಾಶಿಯು ಶ್ರೇಷ್ಠ. ಇತರಸ್ಥಿರರಾಶಿಗಳೂ ಶುಭಯುಕ್ತ ವಾದರೂ ಶ್ರೇಷ್ಠ ಚರರಾಶಿಗಳಲ್ಲೂ ವೃಷಭ ನವಾಂಶವು ಶ್ರೇಷ್ಠ.

**ಮಾಸಗಳು** ವೈಶಾಖ ಮಾಘ ಫಾಲ್ಗುನಗಳು, ಶ್ರಾವಣ, ಮಾರ್ಗ ಶೀರ್ಷ ಜೇಷ್ಠ, ಕಾರ್ತಿಕಗಳೂ ಸಹ ಗೃಹಾರಂಭಕ್ಕೂ, ಗೃಹಪ್ರವೇಶಕ್ಕೂ ಪ್ರಶಸ್ತ ಮಾಸಗಳು,

## ಮೃದು, ಧ್ರುವ, ಕ್ಷಿಪ್ರ, ಚರತಾರೆಗಳು

ಅನೂರಾಧ ರೇವತಿ, ಮೃಗಶಿರ, ಚಿತ್ತೆ, ಇವು **ಮೃದುತಾರೆಗಳು** ಉತ್ತರೆ, ಉತ್ತರಾಷಾಢ, ಉತ್ತರಾಬಾದ್ರ, ರೋಹಿಣಿ ಇವುಗಳು **ಧ್ರುವ ತಾರೆಗಳು**, ಶ್ರವಣ, ಧನಿಷ್ಠೆ, ಶತತಾರೆ, ಪುನರ್ವಸು ಸ್ವಾತಿ-ಇವು ಚರತಾರೆಗಳು.

ಅಶ್ವಿನಿ, ಹಸ್ತ, ಪುಷ್ಯ ಇವು **ಕ್ಷಿಪ್ರ ತಾರೆಗಳು**, ಶನಿವಾರ ಭಾನುವಾರ ಮಂಗಳವಾರ ಇವುಗಳನ್ನು ಬಿಟ್ಟುಳಿದ ವಾರಗಳು ಶ್ರೇಷ್ಠ ರಿಕ್ತ ತಿಥಿಗಳು. ಅಮಾವಾಸ್ಯೆ ಸಂಕ್ರಾಂತಿ ಗ್ರಹಣಾದಿ ಕಾಲಗಳೂ ವರ್ಜ್ಯವು.

ಜೇಷ್ಠ ಪುಷ್ಯ ನಕ್ಷತ್ರಗಳು ಮಾಧ್ಯಮ, ಕಟಕ ಕುಂಭ ಕನ್ಯಾರಾಶಿಗಳಲ್ಲಿ ಸೂರ್ಯನಿರುವಾಗ ನೂತನ ಗೃಹಪ್ರವೇಶವನ್ನು ಮಾಡಲೇಬಾರದು.

## ವಿಶೇಷ ವಿಷಯ

ಜನ್ಮ ನಕ್ಷತ್ರ, ಜನ್ಮ ಲಗ್ನದಲ್ಲಾದರೂ ಅವುಗಳಿಗೆ ಮುಹೂರ್ತ ದರ್ಪಣದಂತೆ ೩, ೬, ೧೦, ೧೧ನೇ ಸ್ಥಾನಗಳಲ್ಲಾದರೂ ಗೃಹಪ್ರವೇಶವು

ಸಂತಾನ, ಧನಸಂಪತ್ತುಗಳಿಗೆ ಕಾರಕವಾಗುವುದು, ಹಾಗೂ ಜನ್ಮರಾಶಿಯಲ್ಲಿ ಮಾಡುವ ಗೃಹಪ್ರವೇಶವು ಕಾರ್ಯಸಿದ್ಧಿಕರ, ಅಭಯಪ್ರದ, ಧನಕಾರಕ.

ವಿಶೇಷ ವಿಷಯವನ್ನು ಜ್ಯೋತಿಃಶಾಸ್ತ್ರದಿಂದ ತಿಳಿದು ಆಚರಿಸಬೇಕು. ನಾವು ವಿಸ್ತರಿಸುವುದಕ್ಕೆ ಶಕ್ಯವಿಲ್ಲ. ಶನಿವಾರವು ಸ್ಥಿರತ್ವ ಉಂಟುಮಾಡುವು ದಾದರೂ ಚೋರಭಯವನ್ನುಂಟುಮಾಡುವುದು.

## ಗೃಹಪ್ರವೇಶವೆಂಬುದು ನಾಲ್ಕು ಬಗೆ

1 ಪ್ರವೇಶಮಾಡುವವನು ಹೊಸಬರಾಗಿರುವುದು, ಆದರೆ ಪ್ರವೇಶ ಮಾಡುವ ಗೃಹ ಹಳೆಯದಾಗಿರುವುದು, ಇದರಲ್ಲಿ ಪ್ರವೇಶಕರ್ತ ನೂತನ,

2 ಜೀರ್ಣೋದ್ಧಾರ ಮಾಡಿದ ಗೃಹಪ್ರವೇಶವು (ಪ್ರವೇಶ್ಯನೂತನ)

3 ಹೊಸದಾಗಿ ನಿರ್ಮಿಸಿದ ಗೃಹಪ್ರಾಸಾದ - ಇವುಗಳ ಪ್ರವೇಶ, ಮತ್ತು ಪ್ರವೇಶ ಮಾಡುವ ಯಜಮಾನನೂ ಹೊಸಬನಾಗಿದ್ದರೆ (ಉಭಯನೂತನ).

4 ಪ್ರವಾಸ ಮಾಡಿ ಬರುವವರು ಹಳೇ ಮನೆಯನ್ನುಪ್ರವೇಶಿಸುವುದೂ (ಉಭಯ ಪುರಾತನ) ಅಂದರೆ ಪ್ರವೇಶ ಮಾಡುವವನು ಹೊಸಬನಲ್ಲ, ಮನೆಯು ಹೊಸದಲ್ಲವೆಂದರ್ಥ. ಇವುಗಳಲ್ಲಿ 1ನೆಯದಕ್ಕೆ ಸಾಧಾರಣ ನಕ್ಷತ್ರಗಳು ಆಗಬಹುದು. ಗೃಹವು ಮಾತ್ರ ಹೊಸದಾಗಿದ್ದರೂ, ಗೃಹವೂ ಪ್ರವೇಶ ಮಾಡುವನೂ ಹೊಸದಾಗಿದ್ದರೆ **ಧ್ರುವತಾರೆಗಳೇ ಆಗಬೇಕು,** ಎರಡೂ ಹಳೆಯದಾದರೆ **ಮೃದು ನಕ್ಷತ್ರಗಳೂ,** ಚರನಕ್ಷತ್ರಗಳೂ ಶುಭಕರವೇ **ಎಂದು ಅರಿಯಬೇಕು.**

ಹಿಂದೆ ಉಕ್ತವಾದ ಕಾಲವು ಒದಗಿಬರದಿದ್ದರೆ ಪ್ರಥಮ ಶಿಲಾನ್ಯಾಸಾದಿಗಳನ್ನು ಈ ಶುಭ ಪ್ರದವಾದ ಯೋಗಗಳಲ್ಲಿ ಆಚರಿಸಬೇಕು.

ಲಗ್ನಪುತ್ರರಿಪು ವಿಕ್ರಮ ಸ್ಥಿತಾಃ ಶುಕ್ರಜೀವ ಶನಿ ಭಾಸ್ಕರಾ ಯದಾ ।
ಯುಕ್ತ ವಾಸ್ತುವಿನಿವೇಶ್ಯತೇ ತದಾ ತತ್ಸುವತ್ಸರ ಶತದ್ವಯಂ ಸ್ಥಿರಂ ॥

ಎಂದು ಹೇಳಿದೆ.

ಅಂದರೆ ಲಗ್ನದಲ್ಲಿ ಶುಕ್ರನೂ, ಪುತ್ರ ಸ್ಥಾನದಲ್ಲಿ ಬೃಹಸ್ಪತಿಯೂ, ಷಷ್ಠದಲ್ಲಿ ಕುಜನೂ (ಶನಿಯೂ) ತೃತೀಯದಲ್ಲಿ ರವಿಯು ಇದ್ದರೆ ಆವಾಗ ವಾಸ್ತು ನಿವೇಶನವನ್ನು ಅಂದರೆ ಪ್ರಥಮ ಶಿಲಾನ್ಯಾಸ, ಸ್ತಂಭ ಸ್ಥಾಪನೆ ಇತ್ಯಾದಿ ಕಾರ್ಯವನ್ನು ಮಾಡಿದರೆ ಆಗೃಹವು ಎರಡು ಶತಮಾನ ಸ್ಥಿರವಾಗಿರುತ್ತದೆ.

ಷಷ್ಠದಲ್ಲಿ ಶನಿಯೆಂದೂ, ಕುಜನೆಂದೂ ಮತಭೇದವಿದೆ. ಇದೇ ರೀತಿಯಾಗಿ 6ನೇ ಪ್ರಯೋಗಗಳನ್ನು ಕಾಲ ಮಾಧವೀಯದಲ್ಲಿ ಹೇಳಿದೆ. ಅದರಂತೆ ಆಚರಿಸಬಹುದು. ವಾಸ್ತು ಪೂಜಾ ಬಲಿ-ವಿಧಿಯನ್ನು ನವಾಗಾರ ಪ್ರದೇಶದಲ್ಲಿ ದೊದಲೇ ಮಾಡಬೇಕು. ಮೊದಲು ರಾಕ್ಷೋಘ್ನ ಹೋಮ ವಾಸ್ತು ಹೋಮಗಳನ್ನು ಮಾಡಿಯೇ ಪ್ರವೇಶ ಮಾಡಬೇಕು.

ರಾಕ್ಷೋಘ್ನ ಮಗ್ನೇರ್ದಿಶಿ ಸಂಪ್ರಕುರ್ಯಾತ್, ಹೋಮಂ ಚ
ಕೃತ್ವಾಽಗ್ನಿಮುಖಂ ಯಥಾವತ್ ।
ದ್ವಾಭ್ಯಾಂತು ಪಕ್ವಂ ಜುಹುಯಾದಥಗಾಭ್ಯಾಂ ರಕ್ಷೋಹಣಂ ವಾಜನ
ಮಿತ್ಯುಬಾಭ್ಯಾಂ ॥
ಭೂಯಃ ಕೃಣುಷ್ವಾದಿಭಿರಾಜ್ಯಹೋಮಂ ಹೋತವ್ಯಮಷ್ಟಾದಶಭಿಶ್ಚ
ಮಂತ್ರೈಃ ॥
ತದ್ವದ್ವಿಭಿನ್ನೈರಥ ಪಂಚಭಿ-ರ್ಯದೇವಾದಿ ಮಂತ್ರೈರ್ಜುಹುಯಾತ್
ಕ್ರಮೇಣ ॥
ದುರ್ಗಾಭಿ ರಾಜ್ಯಂ ತ್ವಥ ಪಂಚಭಿಶ್ಚ ಹುತ್ವಾಪುನರ್ವ್ಯಾಹೃತಿಭಿಃ
ಕ್ರಮೇಣ ।
ಆಜ್ಯೇನ ಹುತ್ವೈವಮಭೀಷ್ಟಶಸ್ತ ಮಂತ್ರೇಣ ಹೋತವ್ಯ ಮಥ
ಕ್ರಮೇಣ ॥

ಭೂಯೋಽಪ್ಯಪಾಮಾರ್ಗ ಸಮಿದ್ಧಿ ರಾಜ್ಯೈಃ ಅನ್ನೈಸ್ತ ರಾಜ್ಯೈಃ
ಶತ ಮಾಹುತೀನಾಂ ।
ಪ್ರತ್ಯೇಕಮಷ್ಟೋತ್ತರ ಮಿತ್ಥಮೇಭಿಃ ಹುತ್ವಾ ಪುನಃಸ್ಸ್ವಿಷ್ಟ
ಕೃತಂ ಯಥಾವತ್ ।
ಸಮಾಪ್ಯಹೋಮಂ ಪುನರಾಜ್ಯಶೇಷಂ ತೋಯಸ್ಯ ಶೇಷಂ
ಹುತಭಸ್ಮಯುಕ್ತಂ ।
ಯುಕ್ತಂತ್ವಪಾಮಾರ್ಗ ರಸೈರ್ಗೃಹಂ ತತ್ ಸಂಪ್ರೋಕ್ಷಯೇತ್
ತ್ತೇನನಿಷಿಚ್ಯ ಪಾತ್ರೆ ॥
ಕೃತ್ವಾರಾಕ್ಷೋಘ್ನ ಹೋಮಂ ತಮಥಹುತವಹಂ ಶಾರ್ವಕೋಣೇ
ನಿಧಾಯ ।
ಪ್ರೋದ್ದಿಷ್ಟಂ ಶಾಂತಿಹೋಮ ಗೃಹಕರಣವಿಧೌ ಶಾಂತಿದಂ
ಸಂಪ್ರಕುರ್ಯಾತ್ ॥

ಎಂದು ಹೇಳಿದ ವಿಧಿಯಂತೆ ರಾಕ್ಷೋಘ್ನವನ್ನು ಮೊದಲುಮಾಡಿ ನಂತರ ವಾಸ್ತುಶಾಂತಿ ಮಾಡಿ ಗೃಹಪ್ರವೇಶ ಮಾಡಬೇಕು, ರಾಕ್ಷೋಘ್ನ ಮಾಡುವುದು ಹಿಂದಿನ ರಾತ್ರಿಯೇ ಮಾಡಬೇಕು.

<u>ಮೇಲೆ ಹೇಳಿದ ವಿಧಿಯ ಸಾರಾಂಶ.</u> ಆಗ್ನೇಯದಿಕ್ಕಿನಲ್ಲಿ ರಾಕ್ಷೋಘ್ನ ಹೋಮವನ್ನು ಮಾಡಬೇಕು. ಅಗ್ನಿಸ್ಥಾಪನೆ ಮಾಡಿಕೊಂಡು ಒಂದು ಕಲಶ ಪ್ರತಿಷ್ಠೆಮಾಡಿ ರಾಕ್ಷೋಘ್ನದೇವತಾ, ಅಘೋರಾಸ್ತ್ರ ದೇವತೆಗಳನ್ನು ಪೂಜಿಸಿ ರಕ್ಷೋಹಣಂವಾಜಿನ ಎಂಬ ಎರಡುಋಕ್ಕಗಳಿಂದ ಪಕ್ವಾಹುತಿ ಮಾಡಿ ಆಜ್ಯದಿಂದ ಹೋಮ ಮಾಡಬೇಕು, ಮತ್ತು ಕೃಣಷ್ವಪಾಜಃ ಎಂಬ ಸೂಕ್ತದ ಹದಿನೆಂಟು ಮಂತ್ರಗಳಿಂದ (ಹದಿನೈದು ಮಂತ್ರಗಳಿಂದ) ಅಜ್ಯ ಹೋಮ ಮಾಡಿಯೇ ಯೇದೇವಾ ಇತ್ಯಾದಿ ಯಜು ಮಂತ್ರಗಳಿಂದ (ಐದರಿಂದಲೂ) ಪಂಚದುರ್ಗಾ ಮಂತ್ರಗಳಿಂದಲೂ ವ್ಯಾಹೃತಿಗಳಿಂದಲೂ ಆಜ್ಯ ಹೋಮ ಮಾಡಬೇಕು, ನಂತರ ಅಘೋರಾಸ್ತ್ರ ಮಂತ್ರದಿಂದ ಅಪಾಮಾರ್ಗಸಮಿತ್ತು ಮತ್ತು ಆಜ್ಯದಿಂದ ಅಷ್ಟೋತ್ತರ ಶತಸಂಖ್ಯೆ (೧೦೮) ಅಷ್ಟಾವಿಂಷತಿ (೨೮)

ಸಂಖ್ಯೆಯಿಂದಲಾದರೂ ಹೋಮ ಮಾಡಬೇಕು. ನಂತರ ಸ್ವಿಷ್ಟಕೃದಾದಿ ಹೋಮಶೇಷವನ್ನು ಮುಗಿಸಿ ಉಳಿದ ಆಜ್ಯವನ್ನು ಕಲಶದ ಜಲಶೇಷವನ್ನು ತೆಗೆದುಕೊಂಡು ಅದರ ಭಸ್ಮದೊಂದಿಗೆ ಮಿಶ್ರಮಾಡಿ ಒಂದು ಪಾತ್ರೆಯಲ್ಲಿ ಅಪಾಮಾರ್ಗ (ಕಡ್ಡಿ ಉತ್ತರಣೆಯ) ರಸದೊಂದಿಗೆ ಸೇರಿಸಿ, ನವಗೃಹದ ಸುತ್ತಲೂ ದರ್ಭೆಗಳಿಂದ ಪ್ರೋಕ್ಷಿಸಬೇಕು. ರಾಕ್ಷೋಘ್ನದ ಅಗ್ನಿಯನ್ನು ಈಶಾನ್ಯದಿಕ್ಕಿನಲ್ಲಿ ಇರಿಸಿ ನಂತರ ನಾಲ್ಕು ದಾರಿಯಿರುವ ಜಾಗದಲ್ಲಿ ವಿಸರ್ಜಿಸ ಬೇಕು. ಅನಂತರ ವಾಸ್ತುಪೂಜೆ, ಹೋಮ, ಬಲಿ, ಇತ್ಯಾದಿಗಳನ್ನು ರಾತ್ರಿಯೇ ಮಾಡಿ, ಮಾರನೆದಿನ ಹಗಲು ಸುಮೂಹೂರ್ತದಲ್ಲಿ ಗೃಹ ಪ್ರವೇಶ ಆಚರಿಸಬೇಕು.

ವಾಸ್ತುಪೂಜೆಯೇ ಮುಖ್ಯ, ಹೋಮವಿಲ್ಲದಿದ್ದರೂ ಅಡ್ಡಿಯಿಲ್ಲ ವೆಂದು ಶಾರದಾತಿಲಕಕಾರರ ಮತವಿದೆ. ಶೌನಕೋಕ್ತ ವಿಧಿಯನ್ನೋ ಭೋಧಾಯನೊಕ್ತ ವಿಧಿಯನ್ನೋ ಅನುಸರಿಸಿ ಆಯಾಯ ಶಾಖೆಯವರು ಪ್ರವೇಶ ಮಾಡಬೇಕು.

ಅಘೋರಾಸ್ತ್ರ ಮಂತ್ರವು ಮಂತ್ರಶಾಸ್ತ್ರದಲ್ಲಿ ದೊಡ್ಡದಾಗಿಯೂ ಇದೆ. ಸಣ್ಣದಾಗಿಯೂ ಇದೆ. ಕಾಲದೇಶಾನುಸಾರ ಆಧುನಿಕರು ತಮ್ಮ ಇಷ್ಟದಂತೆ ಈ ಮಂತ್ರವನ್ನು ಸಣ್ಣದಾಗಿದ್ದರೂ ಸ್ವೀಕರಿಸಿ ಹೋಮ ಮಾಡಿಸಬಹುದು.

## ಉಪಯುಕ್ತ ಕಾಲನಿರ್ಣಯ

ಕಾಲವಿಭಾಗ–ಸಂವತ್ಸರ, ಅಯನ ಋತು, ಮಾಸ ಪಕ್ಷ ದಿನ-ಎಂದು ಆರು ಬಗೆಯಾಗಿ ಕಾಲವನ್ನು ಸ್ಥೂಲವಾಗಿ ವಿಂಗಡಿಸುವರು. ಸಂವತ್ಸರವೂ ಸಹ ಚಾಂದ್ರಮಾನ, ಸೌರಮಾನ, ಸಾವನ, ನಾಕ್ಷತ್ರ, ಬಾರ್ಹಸ್ಪತ್ಯ ಮಾನ ವೆಂದು ಐದು ಬಗೆ, ಚಾಂದ್ರಸಂವತ್ಸರ ಎಂದರೆ ಮಲಮಾಸವು ಬಂದಾಗ ಹದಿಮೂರು ಮಾಸಗಳಿಂದ ಕೂಡಿದ ಸಂವತ್ಸರವು ಚಾಂದ್ರಸಂವತ್ಸರವು,

ಶುಕ್ಲಪ್ರತಿಪತ್ತಿನಿಂದ ಆರಂಭಿಸಿ ಅಮಾವಾಸ್ಯೆ ಪರ್ಯಂತರ ಇರುವ ಚೈತ್ರ ಮೊದಲಾದ ಹನ್ನೆರಡುಮಾಸಗಳು. ಮುನ್ನೂರ ಅರವತ್ತು ದಿನಗಳು (360) ಬಂದರೆ. ಅದು ಚಾಂದ್ರಸಂವತ್ಸರವಾಗುವುದು. ಇದಕ್ಕೆ ಪ್ರಭವ, ವಿಭವ ಇತ್ಯಾದಿ ೬೦ ಹೆಸರುಗಳು.

**ಸೌರಸಂವತ್ಸರ.** ಮೇಷಾದಿ ಹನ್ನೆರಡು ರಾಶಿಗಳಲ್ಲಿ ಸೂರ್ಯನು ಇದ್ದು ಅವುಗಳನ್ನು ಭೋಗಿಸಿದ್ದಲ್ಲಿ ಮುನ್ನೂರ ಅರವತ್ತೈದು (365) ದಿನಗಳು ಪೂರ್ಣಗೊಂಡಾಗ ಸೌರ ಸಂವತ್ಸರವೆನಿಸುವುದು, ಸಾವನಕ್ಕೆ 360 ದಿನಗಳು, ನಕ್ಷತ್ರಮಾಸಗಳೆಂದು (೧೨) ಪೂರ್ಣಗೊಂಡು ಸಂವತ್ಸರಕ್ಕೆ 324 ದಿನಗಳಿದ್ದರೆ ನಾಕ್ಷತ್ರ ಸಂವತ್ಸರವಾಗುವುದು. ಮೇಷಾದಿ ರಾಶಿಗಳಲ್ಲಿ ಒಂದು ರಾಶಿಯು ಬೃಹಸ್ಪತಿಯಿಂದ ಭುಕ್ತವಾದರೆ ಬಾರ್ಹಸ್ಪತ್ಯಮಾನ (ಸಂವತ್ಸರ)ವಾಗುವುದು. (361) ದಿನಗಳು ಇದಕ್ಕೆ ಪೂರ್ಣವಾಗುವವು.

ಕರ್ಮದ ಆದಿಯಲ್ಲಿ ಚಾಂದ್ರಮಾನದ ಸಂವತ್ಸರವನ್ನೇ ಸಂಕಲ್ಪದಲ್ಲಿ ಸ್ಮರಿಸಬೇಕು ಅಯನ ಎರಡು—ದಕ್ಷಿಣಾಯನ, ಉತ್ತರಾಯಣ ಎಂದು, ಕರ್ಕಾಟಕ ಸಂಕ್ರಾಂತಿಯಿಂದ ಆರುಮಾಸಗಳು ದಕ್ಷಿಣಾಯನ, ಮಕರ ಸಂಕ್ರಾಂತಿಯಿಂದ ಕಟಕ ಸಂಕ್ರಾಂತಿಯುವರೆಗಿನ ಆರುಮಾಸಗಳು ಉತ್ತರಾಯಣವೆಂದು ಅರಿಯಬೇಕು. ಈ ಆರುರಾಶಿಗಳಲ್ಲಿ ಸೂರ್ಯನು ಸಂಚರಿಸಿ ಭೋಗಿಸುವನು, ಅದರಿಂದ ಈ ವಿಭಾಗವು ಹುಟ್ಟಿಕೊಂಡಿತು. ಹೀಗೆಯೇ ಋತುವು ಎರಡು ಬಗೆ ಸೌರ, ಚಾಂದ್ರ ಎಂದು, ಮೀನಮಾಸದಿಂದ ಅಥವಾ ಮೇಷಮಾಸದಿಂದ ಆರಂಭವಾಗಿ ಎರಡೆರಡು ರಾಶಿಗಳಲ್ಲಿ ಸೂರ್ಯನಿದ್ದು ಭೋಗಿಸಿದ ಕಾಲಗಳೇ ಸೌರಋತು. ವಸಂತಾದಿ ಹೆಸರನ್ನು ಹೊಂದಿರುತ್ತದೆ.

ಶ್ರೌತ ಸ್ಮಾರ್ತಕರ್ಮಗಳಲ್ಲಿ ವಸಂತಾದಿ ಚಾಂದ್ರಋತುವನ್ನೇ ಸ್ಮರಿಸಬೇಕು. ಮಾಸವು ನಾಲ್ಕು ಬಗೆ ಚಾಂದ್ರ, ಸೌರ, ಸಾವನ, ನಾಕ್ಷತ್ರ ಎಂದು, ದಕ್ಷಿಣ ಇಂಡಿಯಾದಲ್ಲಿ ಚಾಂದ್ರ ಸೌರಮಾಸಗಳೇ ಗಣನೀಯವಾಗಿವೆ. ಶುಕ್ಲ ಪಕ್ಷದ ಪ್ರತಿಪತ್ತಿನಿಂದ ಆರಂಭಿಸಿ ಅಮಾವಾಸ್ಯೆ ಪರ್ಯಂತ ದಿನಗಳು ಚಾಂದ್ರ

ಮಾಸ, ಅಥವಾ ಕೃಷ್ಣಪಕ್ಷದ ಪ್ರತಿಪತ್ತಿನಿಂದ ಪೂರ್ಣಿಮಾಪರ್ಯಂತ ದಿನಗಳು, ಅದರಲ್ಲೂ ಶುಕ್ಲಪಕ್ಷದಿಂದ ಗಣಿಸುವುದೇ ಮುಖ್ಯವಾಗಿದೆ. ಕೃಷ್ಣಪಕ್ಷದಿಂದ ಗಣಿಸುವುದು ವಿಂಧ್ಯಪರ್ವತದ ಉತ್ತರದಲ್ಲೇ ಗ್ರಾಹ್ಯವು. ಕರ್ಮಾನುಷ್ಠಾನದಲ್ಲಿ ಚೈತ್ರಾದಿ ಮಾಸಗಳನ್ನೆ ಸ್ಮರಿಸಬೇಕು, ಕೆಲವರು ಮೀನರಾಶಿಯನ್ನು ಆರಂಭಿಸಿ ಸೌರಮಾಸಗಳಿಗೆ ಚೈತ್ರಾದಿ ಹೆಸರನ್ನು ಕರೆಯುವರು. ಶುಕ್ಲಪಕ್ಷ-ಪ್ರತಿಪತ್ತಿನ ಪೂರ್ಣಿಮಾಪರ್ಯಂತ ೧೫ ದಿನಗಳು, ಪ್ರತಿಪತ್ತಿನಿಂದ ಅಮಾವಾಸ್ಯೆ ಪರ್ಯಂತ ೧೫ ದಿನಗಳು ಕೃಷ್ಣಪಕ್ಷ (ಬಹುಳಪಕ್ಷ). ೬೦ ಘಳಿಗೆಗಳಿಗೆ ಒಂದು ದಿನವೆಂದರ್ಥ.

## ಸಂಕ್ರಾಂತಿ ಕಾಲನಿರ್ಣಯ

ಮೇಷ ರಾಶಿಯಲ್ಲಿ ಸೂರ್ಯಸಂಕ್ರಾಂತಿಯಾದರೆ ಹಿಂದು ಮುಂದಿನ ೧೫ ಘಳಿಗೆ ಪುಣ್ಯಕಾಲ.

| | | | |
|---|---|---|---|
| ವೃಷಭದಲ್ಲಿ — | ೧೬ ಘಳಿಗೆ — | ಹಿಂದಿನದು | ಪುಣ್ಯಕಾಲ. |
| ಮಿಥುನದಲ್ಲಿ — | ೧೬ ” | ಮುಂದಿರುವುದು | ಪುಣ್ಯಕಾಲ |
| ಕರ್ಕಾಟಕದಲ್ಲಿ — | ೩೦ ” | ಹಿಂದಿರುವುದು | ” |
| ಸಿಂಹದಲ್ಲಿ — | ೧೬ ” | ” | ” |
| ಕನ್ಯೆಯಲ್ಲಿ — | ೧೬ ” | ಮುಂದಿನವು | ” |
| ತುಲಾದಲ್ಲಿ — | ೧೫ ” | ಹಿಂದು ಮುಂದಿನವು | ” |
| ವೃಶ್ಚಿಕದಲ್ಲಿ — | ೧೬ ” | ಹಿಂದಿನವು | ” |
| ಧನುಸ್ಸಿನಲ್ಲಿ — | ೧೬ ” | ಮುಂದಿನವು | ” |
| ಮಕರದಲ್ಲಿ — | ೪೦ ” | ಮುಂದಿನವು | ” |
| ಕುಂಭದಲ್ಲಿ — | ೧೬ ” | ಹಿಂದಿನವು | ” |
| ಮೀನದಲ್ಲಿ — | ೧೬ ” | ಮುಂದಿನವು | ” |

ಇದರ ವಿಶೇಷ ಕಾಲ ನಿರ್ಣಯವು ಮುಂದೆ ಹೇಳುವಂತೆ.

## ಕರ್ಕಾಟಕಸಂಕ್ರಾಂತಿ ಕಾಲ ನಿರ್ಣಯ

ಬೆಳಿಗ್ಗೆ ಎರಡು ಘಳಿಗೆ ಮಾತ್ರವಿದ್ದ ದಿನ ಉಳಿದರೆ ಕರ್ಕಾಟಕಸಂಕ್ರಾಂತಿ ಯಾದರೆ ಅದರ ಹಿಂದಿನ ದಿನವೇ ಪುಣ್ಯಕಾಲವೆಂದು ಕೆಲವರ ಮತ. ರಾತ್ರಿಯಲ್ಲಿ ಸಂಕ್ರಾಂತಿಯಾದರೆ ಮಧ್ಯರಾತ್ರಿಯಿಂದ ಈಚೆಗೆ ಸಂಕ್ರಾಂತಿಯಾದರೆ ಪೂರ್ವದಿನದ ಉತ್ತರಾರ್ಧ ಪುಣ್ಯಕಾಲ, ಮಧ್ಯರಾತ್ರಿಯಾದ ನಂತರ ಮುಂದೆ ಸಂಕ್ರಾಂತಿಯಾದರೆ ಮರುದಿನದ ಪೂರ್ವಾರ್ಧ ಪುಣ್ಯಕಾಲವು. ನಿಶೀಥದ ಮಧ್ಯದಲ್ಲೇ ಸಂಕ್ರಾಂತಿಯಾದರೆ ಪೂರ್ವದಿನದ ಉತ್ತರಾರ್ಧ ಮತ್ತು ಮರು ದಿನದ ಪೂರ್ವಾರ್ಧವು ಪುಣ್ಯಕಾಲವು. ಈ ನಿರ್ಣಯವೆ ಮಕರ ಸಂಕ್ರಾಂತಿ ಕರ್ಕಸಂಕ್ರಾಂತಿ ಬಿಟ್ಟುಳಿದ ಎಲ್ಲಾ ಸಂಕ್ರಾಂತಿಗಳಲ್ಲೂ ರಾತ್ರಿ ಸಂಕ್ರಮಣ ವಾದರೆ ಗ್ರಾಹ್ಯವಾಗಿದೆ.

ರಾತ್ರಿಯಲ್ಲಿ ಕರ್ಕಾಟಕ ಸಂಕ್ರಮಣವಾದರೆ ಹಿಂದಿನ ದಿನವೇ ಪುಣ್ಯ ಕಾಲವು. ಸಂಧ್ಯಾಕಾಲದಲ್ಲಿ ಅಂದರೆ-ಸೂರ್ಯಅಸ್ತನಾಗಿದ್ದು ಮೂರು ಘಳಿಗೆ ಮಾತ್ರ ಸಾಯಂ ಸಂಧ್ಯೆಯೆನ್ನುವುದು. ಆವಾಗ ಮಕರ ಸಂಕ್ರಾಂತಿಯಾದಲ್ಲಿ ಪೂರ್ವದಿನವೇ ಪುಣ್ಯಕಾಲ. ಸೂರ್ಯ ಉದಯಕ್ಕೆ ಮುಂಚೆ ಮೂರುಘಳಿಗೆ ಪ್ರಾತಃ ಸಂಧ್ಯೆ. ಇದರಲ್ಲಿ ಕರ್ಕಾಟಕ ಸಂಕ್ರಾಂತಿಯಾದರೆ ಮುಂದಿನ ದಿನ ಪುಣ್ಯಕಾಲ.

ಅಯನೆ ವಿಂಶತಿಃ ಪೂರ್ವೆ ಮಕರೆ ವಿಂಶತಿಃ ಪರೇ ।

ಎಂಬ ಶಾಸ್ತ್ರದಂತೆ ದಕ್ಷಿಣಾಯನದ ಕರ್ಕ ಸಂಕ್ರಾಂತಿಯಲ್ಲಿ ಸಂಕ್ರಾಂತಿಗೆ ಹಿಂದೆ ಇಪ್ಪತ್ತುಘಳಿಗೆ ಪುಣ್ಯಕಾಲವು, ಮಕರ ಸಂಕ್ರಾಂತಿಯಲ್ಲಿ ಮುಂದಿನ ಇಪ್ಪತ್ತು ಘಳಿಗೆ ಪುಣ್ಯಕಾಲ. ಕೆಲವರು ದಕ್ಷಿಣಾಯನ ಕರ್ಕಸಂಕ್ರಾಂತಿಯಲ್ಲಿ ಮೂವತ್ತುಘಳಿಗೆ ಪುಣ್ಯಕಾಲವೆಂದು ಹೇಳುವರು.

ಮತ ಭೇದವಿದ್ದರೂ ಆಯಾಯ ದೇಶಾಚಾರ ಶಿಷ್ಟಾಚಾರವಿದ್ದಂತೆ ವ್ಯವಸ್ಥೆಯಿಂದ ಪುಣ್ಯಕಾಲಹಿಡಿದು ಕರ್ಮಾಚರಣೆ ಮಾಡಬೇಕು.

ಅತೀತಾನಾಗತೇ ಪುಣ್ಯೇ ದ್ವೇ ಉದಗ್ ದಕ್ಷಿಣಾಯನೇ ।
ತ್ರಿಂಶತ್ ಕರ್ಕಟಕೇನಾಡ್ಯಃ ಮಕರೇ ವಿಂಶತಿಃಸ್ಮೃತಾಃ ।

ಯಾಯಾಃ ಸಂನಿಹಿತಾ ನಾಡ್ಯಃ ತಾಸ್ತಾಃ ಪುಣ್ಯತಮಾಃ ಸ್ಮೃತಾಃ ಹೀಗೆಂದು ದೇವಲರ ಸ್ಮೃತಿವಾಕ್ಯದಂತೆ ಇಪ್ಪತ್ತು ಘಳಿಗೆ ಕಟಕ ಸಂಕ್ರಾಂತಿಗೆ ಸಂನಿಹಿತವಾದ ಹಿಂದಿನ ಘಳಿಗೆಗಳು ಅತ್ಯಂತ ಪುಣ್ಯಕರವಾದವು. ಹಾಗೆಯೆ ಮಕರ ಸಂಕ್ರಾಂತಿಗೆ ಸಂನಿಹಿತವಾದ ಮುಂದಿನ ಇಪ್ಪತ್ತು ಘಳಿಗೆಗಳು ಅತ್ಯಂತ ಪುಣ್ಯಕರವೆಂಬುದು ಸಿದ್ಧಾಂತವು, ಹಿಂದೆ ಹೇಳಿದಂತೆ ಮೂವತ್ತು ಘಳಿಗೆ ಪುಣ್ಯಕಾಲವೆಂತಲ್ಲ. ಆದರಿಂದ ವಿರೋಧವಿಲ್ಲವೆಂತ ತಿಳಿಯಿರಿ.

ಸಂಕ್ರಾಂತಿಕಾಲದಲ್ಲಿ ಸ್ನಾನದಾನಗಳು, ಉಪವಾಸ. ರಾತ್ರಿಯಲ್ಲಿ ಸಂಕ್ರಾಂತಿಯಾದರೂ ಹಗಲೇ ಸ್ನಾನದಾನಗಳನ್ನು ಆಚರಿಸಬೇಕು, ರಾತ್ರಿಯಲ್ಲಿ ಆಚರಿಸಬಾರದು. ಇದು ಸರ್ವಸಂಮತವಾದ ಪಕ್ಷ ಬಹು ದೇಶಾಚಾರವೂ ಹೀಗೆಯೆ ಇದೆ. ಪುತ್ರವಂತರಾದ ಗೃಹಸ್ಥರಿಗೆ ಶುದ್ಧೋಪವಾಸವನ್ನು ಹೇಳಿಲ್ಲ. ಕಾಮ್ಯವಾಗಿ ಉಪವಾಸ ಮಾಡಬಹುದು. ಪಿಂಡವಿಲ್ಲದೆ ಕೇವಲ ಶ್ರಾದ್ಧವನ್ನು ಎಲ್ಲಾ ಸಂಕ್ರಾಂತಿಗಳಲ್ಲೂ ಮಾಡಬಹುದು. ಅಯನ ಸಂಕ್ರಾಂತಿಗಳಲ್ಲಿ ನಿತ್ಯ, ಅವಶ್ಯ ಕರ್ತವ್ಯ, ಈಗ ಅದಕ್ಕೆ ಬದಲು ತರ್ಪಣವನ್ನು ಮಾಡುತ್ತಾರೆ, ಇದು ಅವಶ್ಯ ಕರ್ತವ್ಯ.

## ಮಂಗಳ ಕಾರ್ಯಗಳಲ್ಲಿ ತ್ಯಾಜ್ಯಾಂಶಗಳು

ಸಮಸ್ತ ಸಂಕ್ರಾಂತಿಗಳಲ್ಲೂ ಹಿಂದುಮುಂದಿನ ೧೬ ಹದಿನಾರು ಘಳಿಗೆ ಕಾಲವು ತ್ಯಾಜ್ಯವಾಗಿದೆ. ಜನ್ಮನಕ್ಷತ್ರದಲ್ಲಿ ಸೂರ್ಯ ಸಂಕ್ರಾಂತಿಯಾದರೆ ಧನಕ್ಷಯ ಮೊದಲಾದ ಪೀಡೆಗಳು ಸಂಭವಿಸುವುವು. ಅದರ ಪರಿಹಾರಕ್ಕಾಗಿ ಕಮಲದ ಎಲೆಯನ್ನು ಇರಿಸಿ ಆ ನೀರಿನಿಂದ ಸ್ನಾನ ಮಾಡಬೇಕು.

ವಿಷುವ ಅಯನ ಸಂಕ್ರಾಂತಿಗಳಲ್ಲಿ ಪೂರ್ವಾಪರದಿನಗಳು ಅನಧ್ಯಾಯ, ವೇದಾಧ್ಯಯನ ಅಧ್ಯಾಪನವು ವರ್ಜ್ಯವಾಗಿವೆ.

ಈ ಸಂಕ್ರಾಂತಿಗಳಲ್ಲಿ ಮನುಷ್ಯರೆಲ್ಲರೂ ಸ್ನಾನಮಾಡಬೇಕು, ಮಕರ ಸಂಕ್ರಾಂತಿಯಲ್ಲಿ ತಿಲಧೇನುವನ್ನು ದಾನಮಾಡಬೇಕು, ತಿಲತೈಲದ ದೀಪಗಳನ್ನು ಈಶ್ವರ ದೇವಾಲಯಗಳಲ್ಲಿ ಹೊತ್ತಿಸಬೇಕು. ತಿಲತಂಡುಲ ಮಿಶ್ರ ಮಾಡಿ ಶಿವಪೂಜೆಯನ್ನು ಮಾಡಬೇಕು. ತಿಲವನ್ನು ದಾನ ಮಾಡಬೇಕು. ತಿಲಹೋಮ ಮಾಡಬೇಕು. ತಿಲವನ್ನು ಭಕ್ಷಿಸಬೇಕು. ಈ ನಿಯಮದಂತೆ ಈಗಲೂ ಎಳ್ಳುಬೀರುವುದು, ದಾನಕೊಡುವುದೂ ಸಹ ಆಚರಣೆಗೆ ಬಂದಿದೆ. ತಿಲತರ್ಪಣ ಮಾಡಬೇಕು. ಈ ಕಾಲದಲ್ಲಿ ವಸ್ತ್ರದಾನವು ಮಹಾ ಫಲವುಳ್ಳದ್ದು. ಶುಭಕಾರ್ಯದಲ್ಲಿ ಅಯನ ಸಂಕ್ರಾಂತಿದಿನ ಕರಿದಿನ ಎಂಬುವ ಮರುದಿನ ವರ್ಜ್ಯವು.

## ಮಲಮಾಸ ಮತ್ತು ಮಲಮಾಸದಲ್ಲಿ ವರ್ಜ್ಯಕಾರ್ಯಗಳು ಅವರ್ಜ್ಯಕಾರ್ಯಗಳು

1 **ಮಲಮಾಸ** ಎಂದರೆ ಅಧಿಕಮಾಸ, ಕ್ಷಯಮಾಸ, ಸಂಕ್ರಾಂತಿಯಿಲ್ಲದ ಮಾಸವು **ಅಧಿಕಮಾಸ.** ಎರಡು ಸಂಕ್ರಾಂತಿಗಳಿಂದ ಕೂಡಿದ ಮಾಸವೆ **ಕ್ಷಯಮಾಸ,** ಅಧಿಕಮಾಸದಂತೆ ಅಲ್ಪಕಾಲದಲ್ಲಿ ಕ್ಷಯಮಾಸ ಬರುವುದಿಲ್ಲ, ನೂರನಲವತ್ತೊಂದು ವರ್ಷಗಳಿಗೊಮ್ಮೆ. ಅಥವಾ ಪತ್ತೊಂಭತ್ತು ವರ್ಷಗಳಿಗೊಮ್ಮೆ ಕ್ಷಯಮಾಸವು ಬರುವುದು.

2 ಈಕ್ಷಯಮಾಸವು ಕಾರ್ತಿಕ, ಮಾರ್ಗಶಿರ, ಪುಷ್ಯ ಈ ಮೂರರಲ್ಲಿ ಒಂದಾಗಿರುತ್ತದೆ. ಯಾವ ವರ್ಷದಲ್ಲಿ ಕ್ಷಯಮಾಸ ಬರುವುದೊ ಆ ವರ್ಷ ಎರಡು ಅಧಿಕ ಮಾಸಗಳು ಇರುತ್ತವೆ – ಕ್ಷಯಮಾಸಕ್ಕೆ ಹಿಂದೆ ಒಂದು ಮುಂದೆ ಒಂದು ಅಧಿಕ ಮಾಸವಿರುತ್ತದೆ.

3 ಅಧಿಕಮಾಸದ ಉದಾಹರಣೆ ಚೈತ್ರದ ಅಮಾವಾಸ್ಯೆಯಲ್ಲಿ ಮೇಷ ಸಂಕ್ರಾಂತಿಯಾದರೆ ಅಲ್ಲಿಂದ ಆಚೆಗೆ ಶುಕ್ಲಪಕ್ಷದ ಪಾಡ್ಯದಿಂದ ಆರಂಭಿಸಿ ಅಮಾವಾಸ್ಯೆ ಪರ್ಯಂತರ ಸಂಕ್ರಾಂತಿಯಿರುವುದಿಲ್ಲ. ಅಲ್ಲಿಂದ ಆಚೆಗೆ

ಶುಕ್ಲಪಕ್ಷದ ಪ್ರತಿಪತ್ತಿನಲ್ಲಿ ವೃಷಭ ಸಂಕ್ರಾಂತಿಯಾಗುವುದು. ಇದರಲ್ಲಿ ಸಂಕ್ರಾಂತಿಯಿಲ್ಲದ ಮಾಸವು ಮೊದಲಿನದು ಅಧಿಕ ವೈಶಾಖವೆಂದು ಹೆಸರಾಗುವುದು. ವೃಷಭ ಸಂಕ್ರಾಂತಿಯಿರುವ ಮಾಸ ಶುದ್ಧ ನಿಜ ವೈಶಾಖವೆಂದು ತಿಳಿಯಬೇಕು.

4 **ಕ್ಷಯಮಾಸದ ಉದಾಹರಣೆ**– ಭಾದ್ರಪದ ಬಹುಳ ಅಮಾವಾಸ್ಯೆಯಲ್ಲಿ ಕನ್ಯಾಸಂಕ್ರಾಂತಿ, ನಂತರ ಆಶ್ವಯುಜಮಾಸವು ಅಧಿಕಮಾಸವಾಗುವುದು, ಪುನಃ ನಿಜ ಆಶ್ವಯುಜದ ಪಾಡ್ಯದ ದಿನ ತುಲಾಸಂಕ್ರಾಂತಿಯಾಗಿ ಕಾರ್ತಿಕ ಶುದ್ಧ ಪಾಡ್ಯದಿನ ವೃಶ್ಚಿಕಸಂಕ್ರಾಂತಿ. ಅನಂತರ ಮಾರ್ಗಶೀರ್ಷ ಶುದ್ಧ ಪಾಡ್ಯದಲ್ಲಿ ಧನುಃಸಂಕ್ರಾಂತಿಯಾಗುವುದು. ಅದೇಮಾಸದಲ್ಲಿ ಅಮಾವಾಸ್ಯೆದಿನ ಮಕರ ಸಂಕ್ರಾಂತಿಯಾಗುವುದು. ಹೀಗೆ ಧನುಃಸಂಕ್ರಾಂತಿ ಮಕರ ಸಂಕ್ರಾಂತಿಗಳೆರಡೂ ಈ ಒಂದುಮಾಸಕ್ಕೆ ಕ್ಷಯಮಾಸವೆಂದು ಹೇಳುವುದು. ಇದು ಮಾರ್ಗಶೀರ್ಷ ಪುಷ್ಯ ಮಾಸ ಎರಡೂ ಸೇರಿದ ಒಂದು ಮಾಸವಾಗುವುದು. ಅದರ ಪ್ರತಿಪದಾದಿ ತಿಥಿಗಳು ಪೂರ್ವಾರ್ಧದಲ್ಲಿ ಮಾರ್ಗಶೀರ್ಷ ಉತ್ತರಾರ್ಧದಲ್ಲಿ ಪುಷ್ಯ ಮಾಸವೆಂದು ತಿಳಿದರೆ ಎರಡುಮಾಸಗಳೂ ಒಂದರಲ್ಲಿ ಸೇರುವುವು.

5 ಇದರಲ್ಲಿ ತಿಥಿಯು ಪೂರ್ವಾರ್ಧದಲ್ಲಿ ಮೃತಪಟ್ಟವನಿಗೆ ಮಾರ್ಗಶೀರ್ಷಮಾಸದಲ್ಲೂ ಉತ್ತರಾರ್ಧದಲ್ಲಿ ಮೃತಪಟ್ಟವನಿಗೆ ಪುಷ್ಯಮಾಸದಲ್ಲೂ ಪ್ರತಿಸಾಂವತ್ಸರಿಕ ಶ್ರಾದ್ಧವನ್ನು ಮಾಡಬೇಕು. ಇದರಂತೆಯೆ ಜನನವಾದರೂ ವರ್ಧಾಪನಾದಿ ವಿಧಿಯನ್ನು ಅಂದರೆ ಹುಟ್ಟಿದಹಬ್ಬದ ಆಯುಷ್ಯಹೋಮಾದಿಗಳನ್ನು ಆಚರಿಸಬೇಕು. ಹಿಂದೆಕೊಟ್ಟ ಉದಾಹರಣೆಯಲ್ಲಿ ಮಾಘಮಾಸದ ಅಮಾವಾಸ್ಯೆಯಲ್ಲಿ ಕುಂಭಸಂಕ್ರಾಂತಿಯಾಗಿ ಅದರಿಂದ ಫಾಲ್ಗುನಮಾಸ ಅಧಿಕಮಾಸವಾಗುವುದು. ನಿಜಫಾಲ್ಗುನಮಾಸದ ಶುದ್ಧ ಪ್ರತಿಪತ್ತಿನಲ್ಲಿ ಮೀನ ಸಂಕ್ರಾಂತಿಯಾಗುವುದು. ಹೀಗೆ ಹಿಂದೆ ಮುಂದೆ ಎರಡು ಅಧಿಕಮಾಸಗಳಿಂದ ಕೂಡಿದ ಕ್ಷಯಮಾಸವು ಯಾವ ವರ್ಷ ಬರುವುದೋ ಆ ವರ್ಷ ೧೩ ಮಾಸಗಳು ೩೮೪ ದಿನ. ೪ಚು ಸುಮಾರಾಗಿ ಇರುತ್ತವೆ.

6 ಕ್ಷಯಮಾಸದ ಮೊದಲಿನ ಅಧಿಕಮಾಸಕ್ಕೆ ಸಂಸರ್ಪವೆಂದು ಹೆಸರು. ಇದರಲ್ಲಿ ಎಲ್ಲಾ ಕರ್ಮಗಳನ್ನೂ ಮಾಡಬಹುದಾದ್ದರಿಂದ ಶುಭ ಕರ್ಮವು ತ್ಯಾಜ್ಯವಲ್ಲ. ಕ್ಷಯಮಾಸದ ಮುಂದಿನ ಅಧಿಕಮಾಸಕ್ಕೆ ಅಂಹಸ್ಪತಿ ಯೆಂದು ಹೆಸರು, ಇದರಲ್ಲಿ ಎಲ್ಲಾ ಶುಭಕರ್ಮಗಳನ್ನೂ ಬಿಡಬೇಕು. ಹೀಗೆಯೆ ಮೂರು ವರ್ಷಗಳ ನಡುವೆ ಬರುವ ಅಧಿಕಮಾಸವು ಶುಭಕರ್ಮಕ್ಕೆ ತ್ಯಾಜ್ಯವಾಗಿದೆ.

## ಮಲಮಾಸದಲ್ಲಿ ವರ್ಜ್ಯವಾದ ಕರ್ಮ, ಮತ್ತು ಅವರ್ಜ್ಯ ಕರ್ಮ.

ಅಧಿಕಮಾಸದಲ್ಲಿ ಉಪಾಕರ್ಮ, ಉತ್ಸರ್ಜನ, ಅಷ್ಟಕಾಶ್ರಾದ್ಧ ಇವುಗಳು ವರ್ಜ್ಯಗಳು. ಮತ್ತು ಚೌಲ, ಉಪನಯನ, ವಿವಾಹ,ತೀರ್ಥಕ್ಷೇತ್ರಯಾತ್ರೆ, ವಾಸ್ತುಕರ್ಮ (ನೂತನ ಗೃಹಾರಂಭ) ಗೃಹಪ್ರವೇಶ, ದೇವತಾ ಪ್ರತಿಷ್ಠೆ. ವಾಪೀ ಕೊಳ, ಬಾವಿ, ಕೆರೆ, ಉದ್ಯಾನನಿರ್ಮಾಣ ಇತ್ಯಾದಿಗಳು ವರ್ಜ್ಯವು, ಮತ್ತು ಹೊಸವಸ್ತ್ರ-ಅಲಂಕಾರಧಾರಣ, ತುಲಾ ಪುರುಷಾದಿ ಮಹಾದಾನ ಗಳು, ಯಜ್ಞಕರ್ಮ ಆಧಾನ, ಹೊಸದಾಗಿ ತೀರ್ಥಕ್ಷೇತ್ರ ದೇವತಾದರ್ಶನ, ಕಾಮ್ಯವೃಷೋತ್ಸರ್ಗ, ರಾಜನ ಪಟ್ಟಾಭಿಷೇಕ, ವ್ರತಗಳು, ಅನ್ನಪ್ರಾಶನ, ಸಮಾವರ್ತನೆ, ಬಿಟ್ಟುಹೋದ ಜಾತಕರ್ಮ ನಾಮಕರಣಗಳು, ಇತರ ಸಂಸ್ಕಾರಗಳೂ ಸಹ ವರ್ಜ್ಯಗಳು. ಶ್ರವಣಾಕರ್ಮ, ಸರ್ಪಬಲಿ, ಪಾಕಸಂಸ್ಥೆ ಗಳು, ದೇವತಾಶಯನೋತ್ಸವಾದಿಗಳೂ-ಇವೇ ಮೊದಲಾದವೂ ಮಲಮಾಸ ವಲ್ಲಿ ತ್ಯಾಜ್ಯಗಳು.

ಆದರೆ ಮೊದಲೆ ಆರಂಭಿಸಿದ ಮಾಘಸ್ನಾನಾದಿಗಳನ್ನು ಕ್ಷಯಮಾಸದಲ್ಲೂ ಆರಂಭಿಸಿ ಮುಗಿಯಿಸಬಹುದು. ಅದು ಹೇಗೆ? ಮಕರ ಸಂಕ್ರಾಂತಿ ಯುಕ್ತ ವಾದ ಕ್ಷಯಮಾಸದ ಪೂರ್ಣಿಮೆಯಲ್ಲಿ ಮಾಘ ಸ್ನಾನವನ್ನು ಆರಂಭಿಸಿ ಕುಂಭಸಂಕ್ರಾಂತಿಯುಕ್ತವಾದ ಮಾಘಪೂರ್ಣಿಮೆಯಲ್ಲಿ ಮುಗಿಸುವುದು. ಇದೇ ರೀತಿಯಾಗಿ ಕಾರ್ತಿಕದಲ್ಲೂ ಊಹಿಸಿಕೊಳ್ಳಿರಿ. ಇದೇ ರೀತಿ ವೈಶಾಖದಲ್ಲಿ ಅಧಿಕಮಾಸ ಬಂದಾಗ ವೈಶಾಖಸ್ನಾನ ವ್ರತಾದಿಗಳನ್ನು

ಚೈತ್ರಮಾಸಪೂರ್ಣಿಮೆಯಲ್ಲಿ ಆರಂಭಮಾಡಿ ವೈಶಾಖಪೂರ್ಣಿಮೆಯಲ್ಲಿ ಮುಗಿಯಿಸುವುದು.

**ಗುರು ಶುಕ್ರರ ಅಸ್ತಗಳಲ್ಲೂ ಶುಭಕರ್ಮಗಳು ವರ್ಜ್ಯವು.** ಗುರು ಶುಕ್ರರು ಅಸ್ತವಾಗಿದ್ದರೆ ಅಸ್ತಕ್ಕೆ ಮುಂಚೆ ಏಳುದಿನ **ವಾರ್ಧಕ,** ಉದಯಾ ನಂತರ ಏಳುದಿನ **ಬಾಲ್ಯವೆಂಬುದು** ಮಧ್ಯಮ ಪಕ್ಷ, ಹೀಗೆಯೆ ೧೫ ದಿನ, ೫ ದಿನ, ೩ ದಿನ ಎಂಬ ಪಕ್ಷಗಳೂ ಇವೆ. ಈ ಪಕ್ಷಗಳೆಲ್ಲವೂ ದೇಶಭೇದಾನು ಸಾರವಾಗಿದೆ. ಆಪತ್ತು ಕಾಲವಾಗಿದ್ದರೆ ೫, ೩, ಎಂದು ಸಂಕೋಚ ಮಾಡಿ, ಈ ವಾರ್ಧಕ ಮತ್ತು ಬಾಲಾವಸ್ಥೆಗಳಲ್ಲಿ ವಿವಾಹ, ಉಪನಯನ, ಮುಂತಾದ ಮಂಗಳ ಕಾರ್ಯಗಳನ್ನು ವರ್ಜಿಸಬೇಕು. ಅಸ್ತದಿನಗಳಲ್ಲೂ ವರ್ಜಿಸಬೇಕು. **ಗುರುವು ಸಿಂಹದಲ್ಲಿ ಇರುವಾಗಲೂ ವರ್ಜಿಸಬೇಕು.**

**ವಿಶೇಷ ಶಾಸ್ತ್ರವು:—** ಕಿವಿ ಚುಚ್ಚುವುದು, ಮುಂಜಿ, ವಿವಾಹ, ದೇವತಾಯಾತ್ರೆ, ವಾಸ್ತುಕರ್ಮ, ದೇವತಾ ಪ್ರತಿಷ್ಠೆ, ಸಂನ್ಯಾಸ ಇವು ಗಳನ್ನು ಸರ್ವಥಾ ವರ್ಜಿಸಬೇಕು.

## ಗುರುವು ಸಿಂಹದಲ್ಲಿರುವಾಗಲೂ ಮಂಗಳಕಾರ್ಯ, ವಿಶೇಷಾಪವಾದ

ಮಘಾನಕ್ಷತ್ರದಲ್ಲಿ ಸಿಂಹಾಂಶದಲ್ಲಿ ಗುರುವಿರುವಾಗ ಎಲ್ಲಾ ದೇಶಗಳಲ್ಲೂ ಸಮಸ್ತ ಮಂಗಳಕಾರ್ಯವೂ ನಿಷಿದ್ಧವೆ. ಆದರೆ ಸಿಂಹಾಂಶವು ಕಳೆದ ನಂತರ ಗೋದಾವರೀ ದಕ್ಷಿಣ ಭಾಗದಲ್ಲೂ, ಗಂಗೆಯ ಉತ್ತರ ಭಾಗದಲ್ಲೂ ಗುರುವು ಸಿಂಹಗತ ಎಂಬ ದೋಷವಿಲ್ಲ. ಗಂಗಾ, ಗೋದಾವರಿಗಳ ಮಧ್ಯ ಪ್ರದೇಶದಲ್ಲಿ ಸಮಸ್ತಸಿಂಹಗತವಾದ ಗುರುವು ವಿವಾಹ–ಮುಂಜಿ ಮುಂತಾದ ವ್ರತಬಂಧ ಗಳಿಗೆ ನಿಷೇಧವೇ. ಬೇರೆ ಕರ್ಮಗಳನ್ನು ಸಿಂಹಾಂಶವು ಕಳೆದನಂತರ ಆಚರಿ ಸಬಹುದು. (ವಿಶೇಷ ವಿಧಿ) ನೈಮಿತ್ತಿ ಕರ್ಮಗಳು ವರ್ಜ್ಯವಲ್ಲ.

**ಮಲಮಾಸದಲ್ಲೂ ಮಾಡಬಹುದಾದ ಕರ್ಮಗಳು** ಋತುಶಾಂತಿ, ವಿಚ್ಛಿನ್ನಾಧಾನ, ಔಪಾಸನ ಪುನಃ ಸಂಧಾನ, ಪುನಃ ಪ್ರತಿಷ್ಠೆ, ಜೀರ್ಣೋದ್ಧಾರ ಮೊದಲಾದವುಗಳು ನಿಮಿತ್ತವು ಬಂದಾಗ ಅನಂತರವೇ ಮಾಡಬಹುದು. ಆವಾಗ ಮಲಮಾಸಾದಿದೋಷವು ಇಲ್ಲ, ಕಾಲಾತಿಕ್ರಮವಾಗಿದ್ದರೆ ನಿಜಮಾಸದಲ್ಲಿ ಮಾಡಬೇಕು, ಆಗ್ರಯಣವನ್ನು ದುರ್ಭಿಕ್ಷಾದಿ ಆಪತ್ಕಾಲದಲ್ಲಿ ಮಲಮಾಸದಲ್ಲೂ ಮಾಡಬಹುದು. ಆಪತ್ತಿಲ್ಲವಾದರೆ ನಿಜಮಾಸದಲ್ಲಿ ಮಾಡಬೇಕು. ಕ್ಷಯಮಾಸದ ಹಿಂದಿನ ಅಧಿಕಮಾಸ (ಸಂಸರ್ಪವೆಂಬುವ)ದರಲ್ಲಿ ಚೂಡಾಕರ್ಮ, ವ್ರತಬಂಧ, ವಿವಾಹ, ಆಧಾನ,ಯಜ್ಞ, ಉತ್ಸವ ಮಹಾಲಯ ಪಟ್ಟಾಭಿಷೇಕ, ಇವುಗಳನ್ನು ಬಿಡಬೇಕು, ಬೇರೆ ಕರ್ಮಗಳನ್ನು ಬಿಡಬೇಕಾಗಿಲ್ಲ. ಹೊಸದಾಗಿ ವ್ರತಾರಂಭ ಮತ್ತು ಸಮಾಪ್ತಿಗಳನ್ನು ಮಾಡಬಾರದು.

ವಿಶೇಷ ಶಾಸ್ತ್ರ

ಗುರುವು ಸಿಂಹದಲ್ಲಿದ್ದರೂ ಗೋದಾವರೀಸ್ನಾನವು, ಕನ್ಯೆಯಲ್ಲಿದ್ದರೆ ಕೃಷ್ಣಾನದೀಸ್ನಾನವು ಮಹಾಪುಣ್ಯಕರವು. ಗೋದಾವರಿಯಲ್ಲಿ ಯಾತ್ರಿಕರಿಗೆ ಮುಂಡನ, ಉಪವಾಸ, ಕರ್ತವ್ಯ, ತೀರವಾಸಿಗಳಿಗೆ ಮಾತ್ರ ನಿಷೇಧವಿದೆ. ಹೆಂಡತಿಯು ಗರ್ಭಿಣಿಯಾಗಿದ್ದರೂ ವಿವಾಹಾದಿ ಮಂಗಳನಡೆದ ನಂತರ ಗೋದಾವರಿಯಲ್ಲಿ ಮುಂಡನವು ವರ್ಜ್ಯವಲ್ಲ. ಗಯೆಗೋದಾವರೀ ಯಾತ್ರೆಗೆ ಮಲಮಾಸ ಶುಕ್ರಾಸ್ತ ಇತ್ಯಾದಿ ದೋಷವಿಲ್ಲ.

## ವ್ರತಪರಿಭಾಷಾ

1 ದೇವ-ಕಾರ್ಯಗಳಲ್ಲಿ ವ್ರತವೂ ಸೇರಿದೆ. ವ್ರತವೆಂದರೆ ಪೂಜೆ ಮೊದಲಾದಕರ್ಮ. ವಿಶೇಷ ಎಲ್ಲಾವ್ರತಗಳಲ್ಲೂ ಕ್ಷಮೆ, ಸತ್ಯ, ದಯೆ, ದಾನ ಶುಚಿತ್ವ, ಇಂದ್ರಿಯನಿಗ್ರಹ, ದೇವತಾಪೂಜೆ, ಹೋಮ, ಸಂತೋಷ, ಕಳ್ಳತನಬಿಡುವುದು, ಸಹ ನಿಯತವಾದ ಧರ್ಮಗಳು.

## ಅಧಿಕಾರನಿರ್ಣಯ

2 ಸ್ತ್ರೀಯರಿಗೂ ಶೂದ್ರರಿಗೂ ೨ದಿನಕ್ಕೆ ಹೆಚ್ಚುದಿನ ಉಪವಾಸ ಮಾಡುವ ಅಧಿಕಾರವಿಲ್ಲ. ಸ್ತ್ರೀಯರಿಗೆ ಪತಿಯ ಅನುಜ್ಞೆಯಿಂದಲೆ ವ್ರತ. ಉಪವಾಸಗಳಲ್ಲಿ ಅಧಿಕಾರ. ಅನುಜ್ಞೆಯಿಲ್ಲದೆ ಅಧಿಕಾರವಿಲ್ಲ. ನೀರುತುಂಬಿದ ತಾಮ್ರದ ಪಾತ್ರೆಯನ್ನು ಹಿಡಿದುಕೊಂಡು ಬೆಳಿಗ್ಗೆ ಉತ್ತರದಿಕ್ಕಿಗೆ ಮುಖ ಮಾಡಿ ಉಪವಾಸವ್ರತ ಮುಂತಾದವುಗಳ ಸಂಕಲ್ಪಮಾಡಬೇಕು. ಖಂಡ ತಿಥಿಯಲ್ಲಿ ಹೊಸದಾಗಿ ವ್ರತವನ್ನು ಆರಂಭಿಸಬಾರದು, ಮುಗಿಸಲೂಬಾರದು. ಖಂಡತಿಥಿಯೆಂದರೆ-ಉದಯದಲ್ಲಿದ್ದ ತಿಥಿಯು ಮಧ್ಯಾಹ್ನಕ್ಕೆ ಇಲ್ಲವಾದರೆ, ಅದೇ ಖಂಡತಿಥಿಯು, ಇದರಲ್ಲಿ ವ್ರತಾರಂಭ ಸಮಾಪ್ತಿಗಳು ಕೂಡದು. ಯಾವದೇವತೆಯನ್ನು ಉದ್ದೇಶಿಸಿ ಉಪವಾಸವ್ರತ ಮಾಡುವುದೊ, ಆದೇವ ತೆಯ ಮಂತ್ರಜಪ, ಧ್ಯಾನ, ಕಥಾಶ್ರವಣ, ಅರ್ಚನೆ, ನಾಮಶ್ರವಣ ಕೀರ್ತನ ಇತ್ಯಾದಿಗಳನ್ನು ಆಚರಿಸಬೇಕು.

ಉಪವಾಸದಲ್ಲಿ ಅನ್ನವನ್ನೂ ನೋಡಲೂಬಾರದು, ಅಭ್ಯಂಗ, ಗಂಧಾ ನುಲೇಪನ, ತಾಂಬೂಲಗಳೂ ವರ್ಜ್ಯವು. ಸುವಾಸಿನಿಯರಿಗೆ ಸೌಭಾಗ್ಯ ವ್ರತದಲ್ಲಿ ಅಭ್ಯಂಗ, ತಾಂಬೂಲಾದಿಗಳು ವರ್ಜ್ಯವಲ್ಲ.

ಎಂಟು ವಿಷಯಗಳು ವ್ರತಭಂಗಕ್ಕೆ ಕಾರಣವಲ್ಲ. ನೀರು, ಕಂದ ಮೂಲಗಳು, ಹಣ್ಣು, ಹಾಲೂ, ಹವಿಸ್ಸು, ಸದ್‌ಬ್ರಾಹ್ಮಣನ ಇಷ್ಟಾರ್ಥ ನಡೆಯಿಸುವುದು, ಗುರುವಚನ, ಔಷಧ-ಈ ೮ ವ್ರತಭಂಗಕ್ಕೆ ಕಾರಣವಲ್ಲ.

ಅಷ್ಟೌತಾನ್ಯವ್ರತಘ್ನಾನಿ ಆಪೋ ಮೂಲಂ ಫಲಂ ಪಯಃ ।
ಹವಿರ್ಬ್ರಾಹ್ಮಣಕಾಮ್ಯಾ ಚ ಗುರೋರ್ವಚನಮೌಷಧಂ ॥

ಪ್ರಮಾದದಿಂದ ವ್ರತಭಂಗವಾದರೆ ೩ದಿನ ಉಪವಾಸಮಾಡಿ ಪುರುಷರು ಕ್ಷೌರಮಾಡಿಸಿಕೊಂಡು ಪುನಃ ವ್ರತವನ್ನು ಆಚರಿಸಬೇಕು. ಅಶಕ್ತರಾದವರು ಒಬ್ಬಬ್ರಾಹ್ಮಣನಿಗೆ ಭೋಜನ, ಸಾಕಷ್ಟುಧನ ಧಾನ್ಯ, ಸಹಸ್ರಗಾಯತ್ರೀಜಪ

ಅಥವಾ ಹನ್ನೆರಡುಸಲ ಪ್ರಾಣಾಯಾಮ ಮಾಡಬೇಕು. ಸ್ತ್ರೀಯರು ಮಾಡಿದ ವ್ರತವನ್ನು ತಾನು ಮಾಡಲು ಅಶಕ್ತನಾದರೆ ಪ್ರತಿನಿಧಿಯಾಗಿ ಯಾರಿಂದಲಾದರೂ ಮಾಡಿಸಬಹುದು.

## ಪ್ರತಿನಿಧಿಗಳು ಯಾರು

ಪುತ್ರ, ಪತ್ನಿ, ಪತಿ, ಸಹೋದರ, ಪುರೋಹಿತರು. ಅನೇಕಸಲ ಜಲ ಪಾನಮಾಡುವುದರಿಂದಲೂ, ಅನೇಕಸಲ ತಾಂಬೂಲವನ್ನು ಹಾಕುವುದ ರಿಂದಲೂ, ಹಗಲು ನಿದ್ರೆಯಿಂದಲೂ, ಮೈಥುನದಿಂದಲೂ ವ್ರತ ಉಪವಾಸ ಗಳು ನಶಿಸುವುವು.

ಪ್ರಾಣಕ್ಕೆ ಸಂಕಟವಾದಾಗ ಅನೇಕಸಲ ಜಲಪಾನ ಮಾಡಿದರೆ ದೋಷ ವಿಲ್ಲ. ಕಣ್ಣೀರು ಹಾಕುವುದು, ಕೋಪಿಸುವುದು, ಬಯ್ಯುವುದು ಇತ್ಯಾದಿ ಗಳಿಂದ ವ್ರತನಾಶವಾಗುವುದು. ವ್ರತದ ದಿನ ಪರಾನ್ನ ಭೋಜನದಿಂದ ಅನ್ನದಾನ ಮಾಡಿದವನಿಗೆ ವ್ರತದ ಫಲವಾಗುವುದು.

## ಉಪಯೋಗ ಮಾಡಬಹುದಾದ ಹವಿರ್ದ್ರವ್ಯಗಳು

ಗೋಧಿ, ನವಣೆ, ಅಕ್ಕಿ, ಎಳ್ಳು, ಹೆಸರು, ಜವೆಗೋಧಿ ಇವುಗಳು ವ್ರತಕ್ಕೆ ಯೋಗ್ಯವಾದ ಹವಿರ್ದ್ರವ್ಯಗಳು. ಉದ್ದು, ಕಡಲೆ ಇತ್ಯಾದಿಗಳು ನಿಷಿದ್ಧ. ಲವಣ, ಮದ್ಯ ಮಾಂಸಾದಿಗಳನ್ನು ವರ್ಜಿಸಬೇಕು.

ಸುವರ್ಣಗೆಡ್ಡೆ, ಗೆಣಸು, ಸೈಂಧವಲವಣ, ಹಸುವಿನ ಹಾಲು, ಮೊಸರು, ಮಜ್ಜಿಗೆ, ತುಪ್ಪ, ಮಾವಿನಹಣ್ಣು, ಬಾಳೆಹಣ್ಣು, ತೆಂಗಿನ ಕಾಯಿ, ಹಿಪ್ಪಲಿ, ಅಳಲೆಕಾಯಿ, ಜೀರಿಗೆ, ಶುಂಠಿ, ಹುಣಿಸೆ, ನೆಲ್ಲಿಕಾಯಿ– ಇತ್ಯಾದಿಗಳು, ತೈಲಪಕ್ವವಲ್ಲದ್ದೂ ಸಹ ಹವಿಷ್ಯಗಳು. ವ್ರತಕ್ಕೆ ಯೋಗ್ಯ ವಾದವುಗಳು.

ಉಪವಾಸ ಮಾಡಿದರೆ ತದಂಗವಾಗಿ ಬ್ರಾಹ್ಮಣಭೋಜನ ಮಾಡಬೇಕು ಇದರಿಂದ ಅದು ಸಾಂಗವಾಗುವುದು. ಉದ್ಯಾಪನೆ ಮಾಡಲು ಅಶಕ್ತರಾದರೆ ಗೋದಾನಮಾಡಬೇಕು. ಚಿನ್ನವನ್ನಾದರೂ ದಾನಮಾಡಬೇಕು. ವಿಧವೆಯರು ವ್ರತ ಉಪವಾಸಗಳಲ್ಲಿ ಶ್ವೇತವಸ್ತ್ರವನ್ನು ಧರಿಸಬೇಕು. ಚಿತ್ರ, ರಕ್ತ-ವಸ್ತ್ರಗಳನ್ನು ಧರಿಸಬಾರದು.

## ಸೂತಕಾದಿಗಳು ಬಂದರೆ ಸ್ತ್ರೀಯರು ರಜಸ್ವಲೆಯಾದರೆ ಹೇಗೆ ವ್ರತಾದಿಗಳನ್ನು ಆಚರಿಸಬೇಕು

ಜ್ವರಾದಿ ರೋಗಗಳು ಬಂದರೆ ಶಾರೀರವಾದ ನಿಯಮವನ್ನು ಅವರೇ ಮಾಡಬೇಕು. ಮೊದಲೆ ಹಿಡಿದಿದ್ದ ಪೂಜೆ, ವ್ರತ, ಇವುಗಳನ್ನು ಇನ್ನೊಬ್ಬರಿಂದ ಮಾಡಿಸಬೇಕು. ಹೊಸದಾಗಿ ಹಿಡಿಯಬಾರದು ಕಾಮ್ಯಕರ್ಮಗಳಿಗೆ ಪ್ರತಿನಿಧಿಯಿಲ್ಲ. ತಾನೆ ಸೂತಕಾದಿಗಳು ಕಳೆದನಂತರ ಮಾಡಬೇಕು. ಮಂತ್ರ, ಸ್ವಾಮಿ, ದೇವತಾ, ಅಗ್ನಿ ಇವುಗಳ ಕಾರ್ಯಗಳಲ್ಲಿ ಪ್ರತಿ ನಿಧಿಯಿಲ್ಲ ನಿಷಿದ್ಧವಾದದ್ದನ್ನು ಪ್ರತಿನಿಧಿಯಾಗಿ ಬದಲಿಗಾಗಿ ತರಬಾರದು-ವಚನ

ನ ಸ್ಯಾತ್ ಪ್ರತಿನಿಧಿ ರ್ಮಂತ್ರ ಸ್ವಾಮಿ ದೇವಾಗ್ನಿ ಕರ್ಮಸು ।
ನಾಪಿ ಪ್ರತಿನಿಧಾತವ್ಯಂ ನಿಷಿದ್ಧಂ ವಸ್ತು ಕುತ್ರಚಿತ್ ॥

## ವ್ರತ ಉಪವಾಸಾದಿಗಳು ಒಂದೇದಿನ ಬಂದರೆ ವಿಧಿಸುವಕ್ರಮ

1 ಇವುಗಳು ವ್ರತ, ಉಪವಾಸ, ದಾನ, ಹೋಮಾದಿಗಳು ಒಂದೇ ದಿನ ಆಚರಿಸಬೇಕಾಗಿ ಬಂದರೆ ಕ್ರಮವಾಗಿ ಒಂದಾದಮೇಲೆ ಒಂದು ಎನ್ನುವಂತೆ ಆಚರಿಸಬೇಕು.

2 ನಕ್ತಭೋಜನ, ಏಕಭುಕ್ತ, ಉಪವಾಸಗಳು ಪರಸ್ಪರ ವಿರುದ್ಧವಾದ ನಿಯಮಗಳು ಒಂದೇ ದಿನ ಒದಗಿದರೆ ಒಂದನ್ನು ತಾನು ಮಾಡಿ ಮತ್ತೊಂದನ್ನು ಹೆಂಡತಿ, ಪುತ್ರ-ಇವರೆ ಮೊದಲಾದವರಿಂದ ಮಾಡಿಸಬೇಕು.

3 ಕೆಲವು ಅಷ್ಟಮಿ ಚತುರ್ದಶಿ ಮುಂತಾದ ತಿಥಿಯಲ್ಲಿ ಹಗಲು ಭೋಜನ ನಿಷೇಧವಿದ್ದು ವ್ರತಾನಂತರದ ಪಾರಣೆಯೂ ಒದಗಿದಾಗ ಪಾರಣೆ ವಿಧಿಯಂತೆ ಭೋಜನವನ್ನು ಮಾಡಬೇಕು. ಭೋಜನನಿಷೇಧವು ಐಚ್ಛಿಕ ಭೋಜನಕ್ಕೆ ಮಾತ್ರ.

4 ಭಾನುವಾರಾದಿಗಳಲ್ಲಿ ಸಂಕಷ್ಟ ಚತುರ್ಥಿವ್ರತ ಮೊದಲಾದವು ಬಂದರೆ ರಾತ್ರಿಯೇ ಭೋಜನ ಮಾಡಬೇಕು.

5 ತಿಥಿನಿಮಿತ್ತ ವಾರನಿಮಿತ್ತನಾಗಿ ಹಗಲು, ರಾತ್ರಿ ಭೋಜನ ನಿಷೇಧವು ಒದಗಿದರೆ ಉಪವಾಸವೇ.

6 ಪುತ್ರವಂತರಾದ ಗೃಹಸ್ಥರಿಗೆ ಸಂಕ್ರಾಂತಿ ಮೊದಲಾದ ದಿನಗಳಲ್ಲಿ ಉಪವಾಸವು ನಿಷಿದ್ಧವಾಗಿದ್ದು ಅಷ್ಟಮ್ಯಾದಿ ನಿಮಿತ್ತ ಭೋಜನನಿಷಧವೂ ಬಂದರೆ, ಸ್ವಲ್ಪಭಕ್ಷ್ಯವನ್ನು ತಿಂದು ಉಪವಾಸ ಮಾಡಬೇಕು. ಹೀಗೆಯೇ ಏಕಾದಶ್ಯಾದಿಗಳಲ್ಲಿ ಸಂಕ್ರಾಂತಿ ಬಂದರೂ ಆಚರಿಸಬೇಕು.

7 ಎರಡು ಉಪವಾಸಗಳು, ಎರಡುನಕ್ತ, ಎರಡು ಏಕಭುಕ್ತ, ಒಂದೇ ದಿನ ಕರ್ತವ್ಯವಾಗಿ ಬಂದರೆ ಹೀಗೆಯೆ. ನೀರು, ಹಾಲು, ಗೆಣಸುಗೆಡ್ಡೆ, ಹಣ್ಣು ಇವುಗಳನ್ನು ಭಕ್ಷಿಸಬೇಕು. ಉಪವಾಸಗಳನ್ನು 'ಉಭಯಂತಂತ್ರೇಣ ಕರಿಷ್ಯೆ' ಎಂದು ಸಂಕಲ್ಪಮಾಡಿ ಜೊತೆಯಲ್ಲೆ ಉಪವಾಸ, ಪೂಜೆ, ಹೋಮ ಇವುಗಳನ್ನು ಆಚರಿಸಬೇಕು.

## ಸಂಕಲ್ಪಕಾಲದಲ್ಲಿ ಪ್ರತಿಪದಾದಿ ಉಕ್ತತಿಥಿಗಳು ಇಲ್ಲದಿದ್ದರೂ

ಸಂಕಲ್ಪದಲ್ಲಿ ಆಯಾಯ ತಿಥಿಯನ್ನೆ ಸ್ಮರಿಸಬೇಕು, ಹೊರತು ಅಮಾವಾಸ್ಯಾದಿ ತಿಥಿಯನ್ನು ಸ್ಮರಿಸಬಾರದು, ' ಉಪೋಷ್ಯಾದ್ವಾದಶೀ ಶುದ್ಧಾ ' ಎಂದಂತೆ ದ್ವಾದಶೀದಿನವೂ ಏಕಾದಶೀ ವ್ರತನಿಮಿತ್ತ ಸಂಕಲ್ಪ, ಪೂಜಾದಿಗಳಲ್ಲಿ ಏಕಾದಶಿಯನ್ನೆ ಹೇಳಬೇಕು.

## ಮುಖ್ಯವ್ರತೋಪಯುಕ್ತ-ಮುಖ್ಯತಿಥಿನಿರ್ಣಯ

1 **ಗೌರೀವ್ರತಕ್ಕೆ** ಅಲ್ಪಸ್ವಲ್ಪ ಘಳಿಗೆಯಿರುವ ದ್ವಿತೀಯಾ ತಿಥಿ ಯುಕ್ತವಾದ ತೃತೀಯ (ತದಿಗೆ)ಯು ನಿಷಿದ್ಧ. ಮರುದಿನ ಸ್ವಲ್ಪ ಘಟಿ, ವಿಘಟಿಯಿರುವ ತೃತೀಯೆಯೂ ಗ್ರಾಹ್ಯವಾಗಿದೆ.

2 ಪರದಿನವಲ್ಲಿ ದಿನಕ್ಷಯದಿಂದ ಚೌತಿಯಿಂದ ಕೂಡಿದ ತೃತೀಯೆಯು ಲಭಿಸುವುದಿಲ್ಲವಾದರೆ ಪೂರ್ವದಿನದಲ್ಲೇ, ದ್ವಿತೀಯೆಯ ವೇಧವಿದ್ಧ ತೃತೀಯೆಯನ್ನು ಗೌರಿವ್ರತಕ್ಕೆ ಹಿಡಿಯಬೇಕು

3 ದಿನವೃದ್ಧಿ ದಶೆಯಿಂದ ಪೂರ್ವದಿನ ೬೦ಘಳಿಗೆ ತೃತೀಯೆ ಇದ್ದು ಪರದಿನವಲ್ಲಿ ಘಳಿಗೆ, ವಿಘಳಿಗೆ ಶೇಷವಿದ್ದರೂ ಚೌತಿಯಿಂದ ಕೂಡಿದ ತದಿಗೆಯನ್ನೆ ಹಿಡಿಯಬೇಕು.

1 **ಗಣೇಶವ್ರತಕ್ಕೆ ಗೌರೀವ್ರತವಾದನಂತರ ಮಾಡುವ ವರ ಸಿದ್ಧಿವಿನಾಯಕ ವ್ರತಕ್ಕೆ** ಮಧ್ಯಾನ್ಹವ್ಯಾಪಿಯಾದ ಚೌತಿಯೇ ಗ್ರಾಹ್ಯ, ಮಾರನೆದಿನವೇ ಮಧ್ಯಾನ್ಹಕ್ಕೆ ವ್ಯಾಪಿಯಾದರೆ ಆಚೌತಿಯೇ ಗ್ರಾಹ್ಯ ಪರ ಚೌತೀವ್ರತಕ್ಕೂ ಇದೇ ತೃತೀಯಾ, ಚತುರ್ಥಿ ಎರಡುತಿಥಿಗಳಲ್ಲೂ ಚೌತಿಯು ಮಧ್ಯಾನ್ಹವ್ಯಾಪಿಯಾಗಿದ್ದರೂ, ಇಲ್ಲದಿದ್ದರೂ, ಸಮವಾಗಿದ್ದರೂ, ವಿರು ಪೇರವಾಗಿ ಏಕದೇಶದಲ್ಲಿಮಾತ್ರ ವ್ಯಾಪಿಯಾಗಿದ್ದರೂ, ಹಿಂದಿನ ತಿಥಿಯೇ ಈ ವ್ರತಕ್ಕೆ ಗ್ರಾಹ್ಯವು. ಏಕೆಂದರೆ-ತೃತೀಯಾತಿಥಿ ಸಂಬಂಧವಿರುವುದು ಪ್ರಶಸ್ತ ವೆಂಬುದೇ ಕಾರಣ.

2 **ನಾಗಚತುರ್ಥಿಯವ್ರತದಲ್ಲಿ** ಮಾತ್ರ; ಪೂರ್ವದಿನದಲ್ಲೆ ಮಧ್ಯಾನ್ಹ ವ್ಯಾಪಿಯಾಗಿದ್ದರೆ ಪೂರ್ವದಿನವೇ ಗ್ರಾಹ್ಯ, ಉಭಯದಿನ ಮಧ್ಯಾನ್ಹವ್ಯಾಪ್ತಿ, ವ್ಯಾಪ್ತಿಯಿಲ್ಲದಿರುವಾಗಲೂ, ಸಮ ಅಥವಾ ವಿಷಯ ವ್ಯಾಪ್ತಿ, ಏಕದೇಶವ್ಯಾಪ್ತಿಯಿದ್ದರೂ ಪಂಚಮಿಯುಕ್ತವಾದ ಚೌತಿಯೆ ಗ್ರಾಹ್ಯ.

3 **ಸಂಕಷ್ಟ ಚತುರ್ಥಿವ್ರತಕ್ಕೆ** ಚಂದ್ರೋದಯ ವ್ಯಾಪಿಯಾದ ಚೌತಿಯೆ ಗ್ರಾಹ್ಯ. ಪರದಿನ ಚಂದ್ರೋದಯ ವ್ಯಾಪ್ತಿಯಿದ್ದರೆ ಮಾರನೆ ದಿನವೇ ಗ್ರಾಹ್ಯ. ಎರಡುದಿನಗಳಲ್ಲೂ ಚಂದ್ರೋದಯ ವ್ಯಾಪಿಯಾಗಿದ್ದರೆ ತೃತೀಯಾಯುಕ್ತವಾದ ಚೌತಿಯೆ ಗ್ರಾಹ್ಯ.

4 ಉಪವಾಸಕ್ಕೆ ಮಾತ್ರ ಪಂಚಮೀಯುಕ್ತವಾದ ಚೌತಿಯೇ ಗ್ರಾಹ್ಯ.

## ಪಂಚಮೀವ್ರತ ಕಾಲನಿರ್ಣಯ

1 ಶುಕ್ಲಪಕ್ಷ ಕೃಷ್ಣಪಕ್ಷಗಳೆರಡರಲ್ಲೂ ಚತುರ್ಥಿಯುಕ್ತವಾದ ಪಂಚಮಿಯೆ ಪಂಚಮಿ ವ್ರತಕ್ಕೆಲ್ಲ ಒಂದೇರೀತಿಯಾಗಿ ಗ್ರಾಹ್ಯವಾಗಿದೆ.

2 ಸ್ಕಂದ ಸುಬ್ರಹ್ಮಣ್ಯನಿಗಾಗಿ ಹೇಳಿದ ಉಪವಾಸಕ್ಕೆ ಮಾತ್ರ ಷಷ್ಠೀ ಯುಕ್ತವಾದ ಪಂಚಮಿಯೆ ಗ್ರಾಹ್ಯ.

3 ನಾಗಪಂಚಮಿ ವ್ರತಕ್ಕೆ ಷಷ್ಠೀಯುಕ್ತವಾದ ಪಂಚಮಿಗ್ರಾಹ್ಯ. ಮಾರನೆದಿನ ಮೂರು ಮುಹೂರ್ತಕ್ಕೆ ಕಡಿಮೆಯಾಗಿ ಪಂಚಮಿಯಿದ್ದು ಹಿಂದಿನದಿನ ಮೂರು ಮುಹೂರ್ತಕ್ಕೂ ಕಡಿಮೆಯಾದ ಚೌತಿಯಿದ್ದರೆ ಚೌತಿ ಯಿಂದ ಕೂಡಿದ ಪಂಚಮಿಯೆ ಪೂರ್ವತಿಥಿಯೇ ಗ್ರಾಹ್ಯ.

4 ತ್ರಿಮುಹೂರ್ತಕ್ಕೆ ಹೆಚ್ಚಾಗಿ ಚತುರ್ಥೀವೇಧವಿದ್ದ ಎರಡೇ ಮುಹೂರ್ತ ಪಂಚಮಿಯಿದ್ದರೂ ಮಾರನೇ ದಿನವೇ ಗ್ರಾಹ್ಯ.

ಸ್ಕಂದವ್ರತ (ಸುಬ್ರಹ್ಮಣ್ಯವ್ರತ) ಇದಕ್ಕೆ ಪಂಚಮೀವೇಧಯುಕ್ತವಾದ ಷಷ್ಠಿಯೇ ಗ್ರಾಹ್ಯ. ಬೇರೆ ವ್ರತಗಳಲ್ಲಿ ಸಪ್ತಮೀಯುಕ್ತವಾದ ಷಷ್ಠಿಯು ನ್ನುಗ್ರಹಿಸಬೇಕು. ಹಿಂದಿನದಿನ ಆರು ಮುಹೂರ್ತಕ್ಕೂ ಕಡಿಮೆಯಾಗಿ ಪಂಚಮಿಯಿದ್ದರೂ ಪೂರ್ವತಿಥಿಯೇ ಗ್ರಾಹ್ಯ, ಷಷ್ಠೀ ಸಪ್ತಮಿ ದಿನಗಳಲ್ಲಿ ಭಾನುವಾರ ಬಂದರೆ ಪದ್ಮಕಯೋಗವೆಂದು ಹೆಸರು.

## ಏಕಾದಶೀನಿರ್ಣಯ

1 ಏಕಾದಶೀಉಪವಾಸವು ಭೋಜನವನ್ನು ಬಿಡುವುದು, ಮತ್ತು ವ್ರತನಿಯಮವಾಗಿಯೂ ಇರುವುದು. ಈಉಪವಾಸವನ್ನು (ಗನೆಯದನ್ನು ಪುತ್ರವಂತರಾದ ಗೃಹಸ್ಥರು ಕೃಷ್ಣಪಕ್ಷದಲ್ಲೂ ಆಚರಿಸಬೇಕು. ವ್ರತರೂಪ ವಾದ ಉಪವಾಸವನ್ನು ಪುತ್ರವಂತರಾದ ಗೃಹಸ್ಥರು ಕೃಷ್ಣಪಕ್ಷದಲ್ಲಿ ಮಾಡತಕ್ಕದ್ದಲ್ಲ, ಆದರೆ ಮಂತ್ರಸಹಿತ ಸಂಕಲ್ಪಮಾಡಿ ಯಥಾಶಕ್ತಿ ನಿಯ ಮಾನುಸಾರ. ಭೋಜನ ಬಿಡಬೇಕು.

2 ತಿಥಿಕ್ಷಯವಾದರೆ ಶುಕ್ಲ ಏಕಾದಶಿಯಲ್ಲೂ ಮಾಡಬಹುದು. ಶಯನೈಕಾದಶೀ ಉತ್ಥಾನೈಕಾದಶಿ ಇವುಗಳ ನಡುವೆ ಬರುವ ಕೃಷ್ಣೈಕಾದಶಿ ದಿನಗಳಲ್ಲೂ ಗೃಹಸ್ಥರಿಗೆ ಎಲ್ಲರಿಗೂ ಉಪವಾಸ ಮಾಡುವ ಅಧಿಕಾರವಿದೆ.

3 ವಿಷ್ಣು ಸಾಯುಜ್ಯವನ್ನು ಅಪೇಕ್ಷಿಸುವವರೂ ಆಯುಸ್ಸು, ಪುತ್ರ ರನ್ನು ಬಯಸುವವರೂ ಈ ಏಕಾದಶೀ ವ್ರತವನ್ನು ಮಾಡಬೇಕು.

4 ವೈಷ್ಣವ ಗೃಹಸ್ಥರಿಗೆ ಕೃಷ್ಣೈಕಾದಶಿಯೂ ನಿತ್ಯೋಪವಾಸ ವ್ರತ ದಿನವು.

5 ಈ ಏಕಾದಶಿ ವ್ರತವು ಶೈವರಿಗೂ ವೈಷ್ಣವರಿಗೂ ಶಾಕ್ತರಿಗೂ ನಿತ್ಯ ಅವಶ್ಯ ಕರ್ತವ್ಯವಾಗಿದೆ. ಈ ಉಪವಾಸವೆಲ್ಲವೂ ಶಕ್ತರಿಗೆ ಮಾತ್ರ

6 ಸುವಾಸಿನಿಯರಿಗೆ ಪತಿಯ ಅನುಜ್ಞೆಯಿಲ್ಲದೆ ಉಪವಾಸ ವ್ರತ ವನ್ನು ಆಚರಿಸಲು ಅಧಿಕಾರವಿಲ್ಲ. ಇಲ್ಲದೆ ಮಾಡಿದರೆ ವ್ಯರ್ಥ ಪತಿಗೆ ಆಯುಸ್ಸು ಕ್ಷೀಣವಾಗುವುದು, ನರಕವು ಇದೆಯೆಂದು ಹೇಳಿದೆ.

7 ಅಶಕ್ತರು ನಕ್ತ(ರಾತ್ರಿ ಭೋಜನ) ಹವಿಸ್ಸು, ಫಲ, ತಿಲ, ಕ್ಷೀರ, ನೀರು, ಆಜ್ಯ, ಇತ್ಯಾದಿ ಆಹಾರವನ್ನು ಸೇವಿಸಬಹುದು, ಅವರವರ ಶಕ್ತಿ ತಾರತಮ್ಯವನ್ನು ನೋಡಿ ಮೇಲಿನ ಆಹಾರವನ್ನು ಸ್ವೀಕರಿಸುವುದು.

8 ಪ್ರಮಾದದಿಂದ ಈ ಉಪವಾಸವನ್ನು ಬಿಟ್ಟರೆ ದ್ವಾದಶಿ ದಿನ ಮಾಡಬೇಕು, ಅಶಕ್ತರಾದ ಪತಿ-ಭ್ರಾತ-ತಾಯಿ ಮುಂತಾದವರನ್ನು ಉದ್ದೇಶಿಸಿ ಹೆಂಡತಿ, ಪುತ್ರ, ಅಕ್ಕತಂಗಿಯರು, ಸಹೋದರರೂ ಆಚರಿಸಿದರೆ ಮಹಾ ಪುಣ್ಯವೆಂದೂ ಹೇಳಿದೆ.

## ಏಕಾದಶೀ ವ್ರತದಿನ ನಿರ್ಣಯ ಸಂಕ್ಷೇಪ

9 ಏಕಾದಶಿಯು ಶುದ್ಧ. ವಿದ್ಧ ಎಂದು ಎರಡು ಬಗೆ. ಅರುಣೋದಯ ಕಾಲದಲ್ಲಿ ದಶಮೀವೇಧವಿಲ್ಲದೆ ಇರುವ ಏಕಾದಶಿ ಶುದ್ಧ. ಅರುಣೋದಯದಲ್ಲಿ ವೇಧವಿದ್ದರೆ ವಿದ್ಧೆ ಏಕಾದಶಿಯದು. ವೈಷ್ಣವರು ಈ ವಿದ್ಧೈಕಾದಶಿಯನ್ನು ಬಿಟ್ಟು ದ್ವಾದಶೀ ದಿನವೇ ಉಪವಾಸ ಮಾಡಬೇಕು. ಸೂರ್ಯೋದಯವಾದ ನಂತರ ಏಕಾದಶಿ ದ್ವಾದಶಿ ಎರಡೂ ಅಧಿಕವಾಗಿ ಇದ್ದರೆ, ಈ ಏಕಾದಶಿಯೂ, ಶುದ್ಧೈಕಾದಶಿಯೂ ಬಂದರೆ ಎಲ್ಲಾ ವೈಷ್ಣವರೂ ಸ್ಮಾರ್ತರೂ ಮುಂದಿನ ತಿಥಿಯಲ್ಲೇ ಉಪವಾಸ ವ್ರತವನ್ನು ಆಚರಿಸಬೇಕು. ಹೆಚ್ಚಿನ ವಿಚಾರವನ್ನು ಜ್ಯೋತಿಃಶಾಸ್ತ್ರ-ಧರ್ಮ ಶಾಸ್ತ್ರಗಳಿಂದಲೇ ತಿಳಿಯಬೇಕು.

## ಸ್ಮಾರ್ತರಿಗೆ ಏಕಾದಶೀ ವ್ರತ ನಿರ್ಣಯ

ಏಕಾದಶಿಯು ದ್ವಾದಶಿಯು ಎರಡು(ವೃದ್ಧಿ) ಅಧಿಕವಾಗಿದ್ದರೆ ಪೂರ್ವ ದಿನವನ್ನು ಬಿಟ್ಟು ಪರದಿನವನ್ನು ಸ್ಮಾರ್ತರು ವ್ರತಕ್ಕೆ ಹಿಡಿಯಬೇಕು. ಏಕಾದಶೀ ಮಾತ್ರ ಅಧಿಕವಾಗಿದ್ದರೆ ಗೃಹಸ್ಥರು ಹಿಂದಿನ ದಿನವೇ ಉಪವಾಸ ಇರಬೇಕು, ಯತಿಗಳು ಮಾತ್ರ ಮರುದಿನ ಉಪವಾಸವಿರಬೇಕು. ದ್ವಾದಶಿ ಮಾತ್ರ ಅಧಿಕವಾಗಿದ್ದರೆ ಶುದ್ಧ ತಿಥಿಯು ಮೊದಲಿನದು, ವಿದ್ಧ ತಿಥಿಯು ಮುಂದಿನದೆಂದು ವ್ಯವಸ್ಥೆಯಿದೆ. **ಅಧಿಕವಾಗುವುದೆಂದರೆ** – ಸೂರ್ಯೋದಯವಾದ ನಂತರ ಏಕಾದಶಿ, ದ್ವಾದಶಿಗಳು ಇರುವುದೇ. ಮೊದಲಿನ ಏಕಾದಶೀ ಶುದ್ಧವಾಗಿದ್ದರೂ ಸ್ಮಾರ್ತರು ತ್ಯಜಿಸಬೇಕು, ಮರುದಿನವೇ ಉಪ

ವಾಸವಿರಬೇಕು, ಏಕಾದಶಿಯು ವಿದ್ಧವಾಗಿದ್ದರೆ ದ್ವಾದಶಿಯೇ ಉಪವಾಸ ವಿರಬೇಕು. ಒಟ್ಟಿನಲ್ಲಿ ಎರಡೂ ಅಧಿಕವಾಗಿದ್ದರೂ ದ್ವಾದಶೀ ಮಾತ್ರ ಅಧಿಕವಾಗಿದ್ದರೂ, ವಿದ್ಧೈಕಾದಶಿಯನ್ನು ಸ್ಮಾರ್ತರು ಬಿಡಬೇಕೆಂದು ಧರ್ಮ ಸಿಂಧುವಿನ ನಿರ್ಣಯವು.

## ದಶಮೀವಿದ್ಧ ಏಕಾದಶೀ ಎರಡು ಬಗೆ

ಅರುಣೋದಯಕ್ಕೆ ದಶಮಿ ಇದ್ದರೆ ದಶಮಿವೇಧವಿದ್ಧ ಏಕಾದಶಿ, ಇದು ವೈಷ್ಣವರಿಗೆ, ಸೂರ್ಯೋದಯಕ್ಕೆ ದಶಮಿ ಇದ್ದರೆ ಅದು **ಸ್ಮಾರ್ತರಿಗೆ** ವಿದ್ಧೈಕಾದಶಿ. ೫೬ಘಳಿಗೆಗೆ ಅರುಣೋದಯ, ಸೂರ್ಯೋದಯ ತಿಳಿದೆ ಇವೆ. ವೈಷ್ಣವರು ವಿದ್ಧೈಕಾದಶಿಯನ್ನು ತ್ಯಜಿಸಿ ದ್ವಾದಶೀದಿನ ಉಪವಾಸ ಮಾಡ ಬೇಕು, ಹೆಚ್ಚಿನ ವಿಚಾರವನ್ನು ಜ್ಯೋತಿಷ್ಯಶಾಸ್ತ್ರದಿಂದ ಅರಿಯಬೇಕು.

## ಏಕಾದಶೀವ್ರತ ನಿಯಮಗಳು

1 ಉಪವಾಸದ ಹಿಂದಿನ ದಿನ, ನಿತ್ಯಕರ್ಮಾನುಷ್ಠಾನಾನಂತರ

ದಶಮೀ ದಿನ ಮಾರಭ್ಯ ಕರಿಷ್ಯೇಽಹಂವ್ರತಂ ತವ ।
ತ್ರಿದಿನಂ ದೇವದೇವೇಶ ನಿರ್ವಿಘ್ನಂ ಕುರುಕೇಶವ ॥

ಎಂದು ಸಂಕಲ್ಪಮಾಡಿ ಮಧ್ಯಾಹ್ನದಲ್ಲಿ ಒಂದು ಹೊತ್ತು (ಏಕಭಕ್ತ)ಭೋಜನ ಮಾಡಬೇಕು. ಮಾರನೆದಿನ ನಿತ್ಯಕರ್ಮವಾದ ನಂತರ ಪವಿತ್ರಹಾಕಿಕೊಂಡು ಉತ್ತರದಿಕ್ಕಿಗೆ ಮುಖಮಾಡಿ ತಾಮ್ರದ ಪಾತ್ರೆಯಲ್ಲಿ ನೀರುತುಂಬಿ ಕೈಯಲ್ಲಿ ಹಿಡಿದು ಈ ಸಂಕಲ್ಪ ಮಾಡಬೇಕು.

ಏಕಾದಶ್ಯಾಂ ನಿರಾಹಾರೋಭೂತ್ವಾಹ ಮಪರೇಽಹನಿ ।
ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತ ॥

ಅಥವಾ ಇದರಿಂದ ವಿಷ್ಣುವಿಗೆ ಪುಷ್ಪಾಂಜಲಿಯನ್ನು ಅರ್ಪಿಸಬೇಕು.

2 ಅಶಕ್ತರಾದವರಿಗೆ ಜಲ, ಕ್ಷೀರ, ಫಲಾಹಾರ ನಕ್ತಭೋಜನ ಇವು ಗಳಲ್ಲಿ ಅವರವರ ಶಕ್ತಿಗೆ ಅನುಸಾರವಾಗಿ ಯಾವುದಾದರೂ ಆಗಬಹುದು.

3 ಸೂರ್ಯೋದಯವಾದ ನಂತರ ದಶಮಿ ಇದ್ದರೆ ಸ್ಮಾರ್ತರು ಏಕಾದಶಿ ರಾತ್ರಿಯಲ್ಲಿ ಸಂಕಲ್ಪ ಮಾಡಬೇಕು, ಅರ್ಧರಾತ್ರಿಯ ಮೇಲೂ ದಶಮಿ ಇದ್ದರೆ ಸರ್ವರೂ ಏಕಾದಶಿದಿನ ಮಧ್ಯಾಹ್ನವೇ ಸಂಕಲ್ಪಮಾಡಬೇಕು. ಸಂಕಲ್ಪಮಾಡಿದ ಮೇಲೆ ಅಷ್ಟಾಕ್ಷರೀಮಂತ್ರದಿಂದ ಮೂರಸಲ ಮಂತ್ರಿಸಿದ ನೀರನ್ನು ಕುಡಿಯಬೇಕು.

**ನಿಯಮಗಳು**—ಗಂಧಪುಷ್ಪ ಧೂಪದೀಪ ನೈವೇದ್ಯಗಳಿಂದ ವಿಷ್ಣು ವನ್ನು ಅರ್ಚಿಸಿ ಸ್ತೋತ್ರ, ಗೀತ, ವಾದ್ಯನೃತ್ಯಗಳಿಂದ ಆರಾಧಿಸಿ, ರಾತ್ರಿ ಜಾಗರಣೆ ಮಾಡಬೇಕು. ಅಶುಚಿಯಾದವರೊಡನೆ ವ್ಯವಹರಿಸಬಾರದು, ನೋಡಲೂಬಾರದು, ನೋಡಿದರೆ ಸೂರ್ಯದರ್ಶನ ಮಾಡಬೇಕು. ಬ್ರಹ್ಮ ಚರ್ಯ, ಸತ್ಯವಚನ ಹಗಲು ನಿದ್ರೆಬಿಡುವುದು, ಇತ್ಯಾದಿಗಳು.

## ಉಪವಾಸದ ದಿನ ಶ್ರಾದ್ಧವು ಬಂದರೆ

ಶ್ರಾದ್ಧಶೇಷದಿಂದ ಒಂದು ಪಾತ್ರೆಯಲ್ಲಿ ಅನ್ನವನ್ನು ಬಡಿಸಿಕೊಂಡು ಮೂಸಿ ಗೋವಿಗೆ ಕೊಡಬೇಕು, ಹಣ್ಣು ಹಂಪಲುಗಳನ್ನು ಉಪಯೋಗಿಸು ವಾಗ ಪಿತೃಸ್ಥಾನದ ಬ್ರಾಹ್ಮಣರಿಗೆ ಬಡಿಸಿ ಹಣ್ಣುಗಳನ್ನು ಭಕ್ಷಿಸಬೇಕು. **ವೈಷ್ಣವರಿಗೆ** ಏಕಾದಶಿ ದಿನ ಶ್ರಾದ್ಧವು ಬಂದರೆ ಆದಿನವನ್ನು ಬಿಟ್ಟು ದ್ವಾದಶೀದಿನ ಶ್ರಾದ್ಧವು ಕರ್ತವ್ಯವೆಂದು ಶಿಷ್ಟಾಚಾರವಿರುವಂತೆ ಇವರು ಆಚರಿಸಬೇಕು, ಏಕಾದಶೀದಿನ ಮಹಾಲಯವು ಬಂದಾಗ ಏಕಾದಶೀದಿನಗಳ ಮಹಾಲಯವನ್ನು ತಂತ್ರೇಣ ಕರಿಷ್ಯೇ ಎಂದು ಸಂಕಲ್ಪಮಾಡಿ ಮಾಡಬೇಕು.

## ನಿತ್ಯೋಪವಾಸ ವ್ರತದಲ್ಲಿ ಸೂತಕವು ಬಂದರೆ

ಸ್ನಾನಮಾಡಿ ವಿಷ್ಣುವಿಗೆ ನಮಸ್ಕರಿಸಿ, ಉಪವಾಸ ತಾನು ಮಾಡಬೇಕು. ಬ್ರಾಹ್ಮಣನ ಮೂಲಕ ಪೂಜಾದಿಗಳನ್ನು ಮಾಡಿಸಬೇಕು. ರಜಸ್ವಲೆಯಾದಲ್ಲಿ

ಉಪವಾಸವಿದ್ದು ಸ್ನಾನವಾದನಂತರ ಬೆಳಿಗ್ಗೆ ದ್ವಾದಶೀದಿನ ಪೂಜೆಮಾಡಿಸಿ ವ್ರತ ಸಮರ್ಪಣೆ ಮಾಡಬೇಕು.

ನಿಯಮಗಳು ಭಂಗವಾಗಿದ್ದರೆ ನಾರಾಯಣ ಅಷ್ಟಾಕ್ಷರೀಮಂತ್ರವನ್ನು ೧೦೮ ಸಲ ಜಪಿಸಬೇಕು. ಪಾರಣೇದಿನ ನೆಲ್ಲಿಕಾಯನ್ನು ತಿಂದಲ್ಲಿ ಅಶುಚಿ ಜನರೊಡನೆ ಮಾತನಾಡಿದ ದೋಷ ನಾಶವಾಗುವುದು.

1 **ಪಾರಣೆ** ದ್ವಾದಶಿಯನ್ನು ಉಲ್ಲಂಘಿಸಿದರೆ ಮಹಾದೋಷವಾದ್ದರಿಂದ ದ್ವಾದಶಿಮಧ್ಯದಲ್ಲಿ ಈ ಪಾರಣೆಯನ್ನು ಮಾಡಬೇಕು.

2 ದ್ವಾದಶಿಯು ಸ್ವಲ್ಪವೆ ಇದ್ದರೆ ರಾತ್ರಿಶೇಷವಾದರೆ, ಮಧ್ಯಾಹ್ನ ಪರ್ಯಂತ ಹೇಳಿದ ಆಹ್ನಿಕಗಳನ್ನು ಅಪಕರ್ಷಮಾಡಿ ಪಾರಣೆಮಾಡಬೇಕು, ಆದರೆ ಅಗ್ನಿಹೋತ್ರ, ಔಪಾಸನಗಳಿಗೆ ಅಪಕರ್ಷವಿಲ್ಲ, ಶ್ರಾದ್ಧಕ್ಕೂ ಅಪ ಕರ್ಷವಿಲ್ಲ. ರಾತ್ರಿಶ್ರಾದ್ಧವು ನಿಷಿದ್ಧವಾಗಿದೆ.

3 ಅತಿ ಆಪತ್ತಿನಲ್ಲೂ ಶ್ರಾದ್ಧವುಬಂದರೂ, ಪ್ರದೋಷಾದಿವ್ರತಗಳು ಬಂದರೆ ತೀರ್ಥಜಲದಿಂದ ಪಾರಣೆಮಾಡಬೇಕು.

4 ದ್ವಾದಶಿಯು ಅಧಿಕವಾಗಿದ್ದರೆ, ದ್ವಾದಶಿಯ ೧ನೇ ಭಾಗಕ್ಕೆ **ಹರಿವಾಸರ** ಎಂದು ಹೆಸರು. ಈ ಹರಿವಾಸರವು ಕಳೆದನಂತರ ಪಾರಣೆ ಮಾಡಬೇಕು.

5 ದ್ವಾದಶಿಯು ಒಂದು ಕಲಾಪ್ರಮಾಣವೂ ಇಲ್ಲದಿದ್ದರೆ ತ್ರಯೋದಶೀ ದಿನ ಪಾರಣೆ.

6 ದ್ವಾದಶಿಯು ಮಧ್ಯಾಹ್ನವಾದಮೇಲೂ ಇದ್ದರೆ ಬೆಳಿಗ್ಗೆ ಮೂರು ಮುಹೂರ್ತ ಇರುವಾಗಲೇ ಪಾರಣೆ ಮಾಡಬೇಕು. **ಇದೇ ಪಕ್ಷ ಬಹುಸಂಮತವು.**

7 ಎಲ್ಲಾಮಾಸಗಳಲ್ಲೂ ಶುಕ್ಲ-ಕೃಷ್ಣಪಕ್ಷಗಳ ಎರಡುದ್ವಾದಶಿಗಳಲ್ಲಿ ಯಾವುದಾದರೊಂದರಲ್ಲಿ ಶ್ರವಣನಕ್ಷತ್ರವಿದ್ದರೆ ಶಕ್ತರಾದವರು ಏಕಾದಶೀ

ದ್ವಾದಶಿ-ಎರಡುದಿನವೂ ಉಪವಾಸಮಾಡಬೇಕು. ಅಶಕ್ತರು ಏಕಾದಶಿಯಲ್ಲಿ ಫಲಾಹಾರಮಾಡಿ ಶ್ರವಣದ್ವಾದಶಿಯಲ್ಲಿ ಉಪವಾಸವಿರಬೇಕು.

8 ಭಾದ್ರಪದ ಶ್ರವಣ ದ್ವಾದಶಿಯ ವಿಷಯವನ್ನು ತಿಳಿದು ಆಚರಿಸ ಬೇಕು.

## ಗ್ರಹಣ ವಿಚಾರ

1 ಚಂದ್ರಗ್ರಹಣ, ಮತ್ತು ಸೂರ್ಯಗ್ರಹಣ ಇವು ಎಷ್ಟುಹೊತ್ತು ಕಣ್ಣಿಗೆ ಕಾಣುವದೋ ಅಷ್ಟುಹೊತ್ತು ಪುಣ್ಯಕಾಲ.

2 ಗ್ರಸ್ತಾಸ್ತ ಸ್ಥಳದಲ್ಲಿ ಅಸ್ತವಾದಮೇಲೆ ದ್ವೀಪಾಂತರದಲ್ಲಿ ಗ್ರಹಣ ವಿದ್ದರೂ ನಮಗೆ ಕಾಣಿಸದೆಯಿರುವುದರಿಂದ. ಕಾಣಿಸುವಹಾಗೆ ಇಲ್ಲದ್ದರಿಂದ ಇದು ಪುಣ್ಯಕಾಲವಲ್ಲ.

3 ಗ್ರಸ್ತವಾಗಿ ಉದಯಸಿದರೆ ಉದಯಕ್ಕೆ ಮುಂಚೆ ಪುಣ್ಯಕಾಲವಿಲ್ಲ

4 ಮೋಡದಿಂದ ಗ್ರಹಣವಿದ್ದರೂ ಕಾಣಿಸದೆ ಹೋದಾಗ ಶಾಸ್ತ್ರ ದಿಂದ ಸ್ಪರ್ಶಕಾಲ ಮೋಕ್ಷಕಾಲಗಳನ್ನು ತಿಳಿದು ಸ್ನಾನ, ದಾನಗಳನ್ನು ಮಾಡ ಬೇಕು.

5 ಭಾನುವಾರ ಸೂರ್ಯಗ್ರಹಣ, ಸೋಮವಾರ ಚಂದ್ರಗ್ರಹಣ ವಾದರೆ ಇದಕ್ಕೆ **ಚೂಡಾಮಣಿಯೆಂದು ಹೆಸರು**, ಮಹತ್ತಾದ ಪುಣ್ಯ ಕಾಲ, ಆಗ ದಾನಾದಿಗಳು ಬಹಳ ಪುಣ್ಯಕರ.

## ಅನುಷ್ಠಾನ ಕ್ರಮ

6 ಗ್ರಹಣ ಸ್ಪರ್ಶಕಾಲಕ್ಕೆ ಸ್ನಾನ, ಮಧ್ಯಕಾಲದಲ್ಲಿ ಹೋಮ, ದೇವತಾ ಪೂಜೆ, ಶ್ರಾದ್ಧ (ತರ್ಪಣ) ಗ್ರಹಣ ಬಿಡುವಾಗ ದಾನ ಬಿಡುಗಡೆ ಯಾದರೆ ಸ್ನಾನ, ಇವು ಎಲ್ಲಾವರ್ಣದವರಿಗೂ ನಿಯಮಿತವಾಗಿದೆ.

7 ಸ್ನಾನವು ತಣ್ಣೀರಿನಲ್ಲಿ ಮಾಡುವುದು ಉಷ್ಣೋದಕಸ್ನಾನಕ್ಕಿಂತ ಶ್ರೇಷ್ಠ, ಇನ್ನೊಬ್ಬರ ನೀರಿಗಿಂತ ತನ್ನನೀರೇ ಉತ್ತಮ, ಬಾವಿ, ಕೊಳ, ಝರಿ ಕೆರೆ, ನದಿ, ಇವುಗಳಲ್ಲಿ, ಗಂಗಾಯಮುನಾ ನದಿಗಳಲ್ಲಿ ಸ್ನಾನವು ಉತ್ತರೋತ್ತರ ಹೆಚ್ಚು ಪುಣ್ಯಕರ. ಗ್ರಹಣದಲ್ಲಿ ಸಚೈಲಸ್ನಾನ (ಉಟ್ಟುಹೊದ್ದವಸ್ತ್ರಗಳು) ಇದ್ದಹಾಗೆ ಸ್ನಾನ ಮಾಡಬೇಕು.

8 ಮೋಕ್ಷಸ್ನಾನವಾಗದೆ ಗ್ರಹಣ ಸೂತಕ ಶುದ್ಧಿಯಿಲ್ಲ. ಗ್ರಹಣದಲ್ಲಿ ಸ್ನಾನ ಮಂತ್ರವಿಲ್ಲದೆ ಕರ್ತವ್ಯ, ಸುವಾಸಿನಿಯರೂ ಸ್ನಾನ ಮಾಡಬೇಕು. ಶಿಷ್ಟರ ಸ್ತ್ರೀಯರು ಶಿರಃಸ್ನಾನವನ್ನು ಮಾಡುವರು.

9 ಜಾತಾಶೌಚ, ಮೃತಾಶೌಚವಿದ್ದರೂ ಗ್ರಹಣನಿಮಿತ್ತ ಸ್ನಾನ. ದಾನಾದಿಗಳನ್ನು ಮಾಡಬೇಕು. ತಿಲತರ್ಪಣವನ್ನು ಮಾಡಬಹುದು, ತತ್ಕಾಲದಲ್ಲಿ ಈ ಕರ್ಮಗಳಿಗೆ ಮಾತ್ರ ಶುದ್ಧಿಯಿದೆ.

10 ಬಹಿಷ್ಠೆಯಾದವರೂ ಸಹ ಗ್ರಹಣಕಾಲದಲ್ಲಿ ಬೇರೆಪಾತ್ರದಲ್ಲಿ ನೀರುಹಾಕಿಸಿಕೊಂಡು ಸ್ನಾನಮಾಡಬೇಕು.

11 ಈಕಾಲದಲ್ಲಿ ಬಟ್ಟೆಹಿಂಡದೆ ಬೇರೆವಸ್ತ್ರವನ್ನು ಉಡದೆ ಇರಬೇಕು.

12 ಮೂರುದಿನ, ಅಥವಾ ಒಂದು ದಿನವಾದರೂ ಗ್ರಹಣದಲ್ಲಿ ಉಪವಾಸವಿದ್ದು ಸ್ನಾನದಾನಾದಿಗಳನ್ನು ಮಾಡಬೇಕು. ಮಾಡಿದರೆ ಮಹಾ ಪುಣ್ಯವಿದೆ, ಹಿಂದಿನದಿನ ಅಥವಾ ಗ್ರಹಣದಿನವಾದರೂ ಉಪವಾಸವಿರಬೇಕು.

13 ಪುತ್ರರುಳ್ಳ ಗೃಹಸ್ಥರಿಗೆ ಗ್ರಹಣಸಂಕ್ರಾಂತಿಗಳಲ್ಲಿ ಶುದ್ಧೋಪವಾಸವಿಲ್ಲ.

14 ಸೂರ್ಯಗ್ರಹಣಕ್ಕೆ ಮುಂಚೆ ನಾಲ್ಕು ಯಾಮಗಳಲ್ಲೂ ಚಂದ್ರ ಗ್ರಹಣಕ್ಕೆ ಮೂರು ಯಾಮಗಳಲ್ಲೂ ಭೋಜನಮಾಡಬಾರದು. ಆಹಾರ ಕೂಡದು. ಸ್ತ್ರೀಯರಿಗೂ ಬಾಲಕರಿಗೂ ವೃದ್ಧರಿಗೂ ರೋಗಿಗಳಿಗೂ ಆತುರರಿಗೂ ಅಶನನಿಷೇಧವಿಲ್ಲ. ಸೂರ್ಯಗ್ರಹಣವಾದರೆ ಸಂಗಮಕಾಲಕ್ಕೆ ಹಿಂದೆ ಗೃಹಸ್ಥನು ಭೋಜನ ಮಾಡಬಹುದು.

15 ಗ್ರಹಣವಾಗಿ ಸೂರ್ಯನು ಅಸ್ತವಾದರೆ ಎಲ್ಲರೂ ಉಪವಾಸ ಇರಬೇಕು. ಮೋಕ್ಷವಾದ ನಂತರ ಸೂರ್ಯದರ್ಶನಮಾಡಿ ಸ್ನಾನಮಾಡಿ ಭೋಜನ ಮಾಡಬೇಕು.

16 ಗ್ರಹಣಕಾಲದಲ್ಲಿ ಉಟ್ಟಬಟ್ಟೆ ಮುಟ್ಟಿಕೊಂಡ ಬಟ್ಟೆಗಳನ್ನು ತೊಳೆಯಬೇಕು. ಮುಟ್ಟಿದ ಪಾತ್ರೆಪರಿಟಗಳನ್ನು ತೊಳೆಯಬೇಕು.

## ದಾನಪಾತ್ರರು, ದಾನಗಳು

ತಪಸ್ಸು ವೇದ ವಿದ್ಯಾಸಂಪನ್ನನಾದ ಬ್ರಾಹ್ಮಣರೆ ಪಾತ್ರರು. ಇವರಿಗೆ ಗೋ-ಭೂಮಿ, ಹಿರಣ್ಯ, ಧಾನ್ಯಾದಿಗಳನ್ನು ದಾನಮಾಡುವುದು ಮಹಾಪುಣ್ಯ ಸತ್ಪಾತ್ರದಲ್ಲಿ ದಾನಮಾಡುವುದರಿಂದ ಪುಣ್ಯಾತಿಶಯವು. ಗ್ರಹಣ ಕಾಲ ದಲ್ಲಿ ನೀರು. ಗಂಗೆಗೆಸಮಾನ. ದ್ವಿಜರು ವ್ಯಾಸಸಮಾನರು. ಎಲ್ಲಾದಾನವು ಭೂಮಿಗೆ ಸಮಾನವೆಂದು ಶಾಸ್ತ್ರವು ಪ್ರಶಂಸಿಸಿದೆ.

ಸರ್ವಗಂಗಾ ಸಮಂತೋಯಂ ಸರ್ವೇವ್ಯಾಸಸಮಾ ದ್ವಿಜಾಃ ।
ಸರ್ವಂ ಭೂಮಿಸಮಂದಾನಂ ಗ್ರಹಣೇ ಚಂದ್ರಸೂರ್ಯಯೋಃ ॥

ಹೀಗಿದ್ದರೂ. ಸತ್ಪಾತ್ರದಲ್ಲೆ ದಾನಮಾಡುವುದೆ ಅನಂತಫಲಪ್ರದವು. ಪಾತ್ರೇತ್ವಾನಂತ್ಯ ಮಶ್ನುತೇ ಎಂದಿದೆ.

17 ಗ್ರಹಣದಲ್ಲಿ ಆಮಶ್ರಾದ್ಧ ಅಥವಾ ಹಿರಣ್ಯಶ್ರಾದ್ಧಮಾಡುವುದು ಐಶ್ವರ್ಯ ಸಂಪನ್ನನಾದರೆ ಅನ್ನಶ್ರಾದ್ಧವನ್ನೆ ಮಾಡಬಹುದು. ಸೂರ್ಯ ಗ್ರಹಣದಲ್ಲಿ ತೀರ್ಥಶ್ರಾದ್ಧದಂತೆ ಘೃತಪ್ರಧಾನವಾದ ಅನ್ನದಿಂದ ಶ್ರಾದ್ಧ ಮಾಡಬೇಕು. ಶ್ರಾದ್ಧಭೋಜನ ಮಾಡಿದವನಿಗ ಬಹಳ ದೋಷವಿದೆ. ಆದ ರಿಂದ ಅವನಿಗೆ ಪ್ರಾಯಶ್ಚಿತ್ತವುಂಟು.

## ಗ್ರಸ್ತಾಸ್ತವಾದರೆ ಹೇಗೆ ? ಅನುಷ್ಠಾನ

ಸೂರ್ಯ ಚಂದ್ರರು ಗ್ರಹಣವಾಗಿ ಅಸ್ತವಾದರೆ ಮಾರನೆದಿನ ಉದಯ ವಾದಮೇಲೆ ಬಿಂಬದರ್ಶನಮಾಡಿ. ಸ್ನಾನಮಾಡಿ ಭೋಜನ ಮಾಡಬೇಕು.

ಶುದ್ಧಮಂಡಲದರ್ಶನವಿಲ್ಲದೆ ಸ್ನಾನವಿಲ್ಲದೆ ಮೊದಲು ಎಲ್ಲವೂ ಅಶುದ್ಧವೆಂದೇತಿಳಿಯಬೇಕು. ಪುತ್ರವಂತರಾದ ಗೃಹಸ್ಥರೂ ಕೂಡ ಈ ಗ್ರಸ್ತಾಸ್ತಗಳಲ್ಲಿ ಉಪವಾಸವಿರಬೇಕೆಂದು ಮಾಧವಾಚಾರ್ಯಮತವು. ಶಿಷ್ಟಾಚಾರವೂ ಹೀಗೆಯೇ ಇದೆ. ಸೂರ್ಯನುಗ್ರಸ್ತನಾಗಿ ಅಸ್ತನಾದರೂ ಚಂದ್ರನುಗ್ರಸ್ತನಾಗಿ ಉದಯವಾದರೂ ಆಹಿತಾಗ್ನಿಯು ಅನ್ವಾಧಾನವನ್ನು ಮಾಡಿ ಜಲದಿಂದ ನಿಯಮವಾಗಿರಬೇಕು. ಭೋಜನಕೂಡದು. ಚಂದ್ರನು ಗ್ರಸ್ತಾಸ್ತನಾದರೆ ಮಾರನೆದಿನ ಸಂಧ್ಯಾವಂದನೆ ಹೋಮಾದಿಗಳನ್ನು ಆಚರಿಸಬೇಕು. ಅಲ್ಪಕಾಲದಲ್ಲೇ ಶಾಸ್ತ್ರದಿಂದ ಮುಕ್ತಿಯಾಗಿದೆಯೆಂದು ತಿಳಿದರೆ ಆಗ ಸ್ನಾನ ಮಾಡಿ ಹೋಮಾದಿಗಳನ್ನು ಮಾಡಬಹುದು, ಬಹಳ ಹೊತ್ತಿನ ಮೇಲೆ ಮೋಕ್ಷವಾದರೆ ಕಾಲಾತಿಕ್ರಮದೋಷವು ಬರುವುದರಿಂದ ಗ್ರಹಣದ ಮಧ್ಯೆ ಸಂಧ್ಯೋಪಾಸನೆ ಔಪಾಸನ, ಅಗ್ನಿಹೋತ್ರ ಮಾಡಬಹುದು. ಬ್ರಹ್ಮಯಜ್ಞಾದಿಗಳನ್ನು ಮೋಕ್ಷಸ್ನಾನವಾದ ಮೇಲೆ ಆಚರಿಸಬೇಕು.

## ಅಮಾವಾಸ್ಯೆ ದಿನ ಗ್ರಹಣವಾದರೆ

ಅಮಾವಾಸ್ಯೆಯಲ್ಲಿ ಗ್ರಹಣ ನಿಮಿತ್ತವಾದ ಶ್ರಾದ್ಧ ಮಾಡಿದರೆ ಸಾಕು, ಅದರಿಂದಲೇ ದರ್ಶಶ್ರಾದ್ಧ, ಸಂಕ್ರಾಂತಿಶ್ರಾದ್ಧ–ಇವುಗಳು ಮಾಡಿದಂತೆ ಆಗುವುದು. ಪ್ರತ್ಯೇಕ ಮಾಡಬೇಕಾಗಿಲ್ಲ. ಹೀಗೆಯೆ ಅಮಾವಾಸ್ಯೆ ದಿನದ ತರ್ಪಣವು ಪ್ರತ್ಯೇಕ ಬೇಕಿಲ್ಲ ಗ್ರಹಣದ ನಿಮಿತ್ತ ಮಾಡುವ ತರ್ಪಣದಿಂದಲೆ ಪೂರ್ಣವಾಗುವುದು. ಗ್ರಹಣ ದಿನ ವಾರ್ಷಿಕ ಶ್ರಾದ್ಧವು ಬಂದರೆ, ಆಮಶ್ರಾದ್ಧ, ಅಥವಾ ಹಿರಣ್ಯಶ್ರಾದ್ಧವನ್ನು ಮಾಡಿ ಮುಗಿಯಿಸಬೇಕು, ಪುನಃ ಮಾರನೆ ದಿನ ಮಾಡಬೇಕಾಗಿಲ್ಲ, ಧರ್ಮಸಿಂಧುಕಾರನು ಹೇಳಿಲ್ಲ. ಕೆಲವರು ದ್ರಾವಿಡ ಪದ್ಧತಿಯಂತೆ ವಚನಾನುಸಾರ ಅನ್ನಶ್ರಾದ್ಧವನ್ನೂ ಮಾಡುವರು. ಅವಾಗ ವಾರ್ಷಿಕ ಶ್ರಾದ್ಧಕ್ಕೆ ಪುನರಾವೃತ್ತಿಯಾಗುವುದು. ಸಿಂಧ ಅನುಸರಿಸುವವರಿಗೆ ಈ ಅನುಷ್ಠಾನವು ಬೇಕಿಲ್ಲವೆಂದು ನಮಗೆ ತೋರುತ್ತದೆ.

## ಜನ್ಮ ನಕ್ಷತ್ರ, ಜನ್ಮ ರಾಶಿಗಳಲ್ಲಿ ಗ್ರಹಣವಾದರೆ ಶಾಂತಿ

ಜನ್ಮರಾಶಿ, ಜನ್ಮನಕ್ಷತ್ರಗಳಲ್ಲಿ ಗ್ರಹಣವಾದರೂ ಜನ್ಮಚತುರ್ಥ, ಅಷ್ಟಮ, ದ್ವಾದಶ ರಾಶಿಯಲ್ಲಿ ಗ್ರಹಣವಾದರೂ ಅರಿಷ್ಟವಾಗುವುದರಿಂದ ಗರ್ಗರು ಹೇಳಿದ ಶಾಂತಿ ಅಥವಾ ಬಿಂಬದಾನ ಮಾಡಬೇಕು.

ಚಂದ್ರಗ್ರಹಣದಲ್ಲಿ ಬೆಳ್ಳಿಯ ಚಂದ್ರಬಿಂಬ, ಚಿನ್ನದ ನಾಗಬಿಂಬವನ್ನು, ಸೂರ್ಯಗ್ರಹಣದಲ್ಲಿ ಚಿನ್ನದ ಸೂರ್ಯಬಿಂಬ, ನಾಗಬಿಂಬಗಳನ್ನು ತಂದು ತುಪ್ಪವನ್ನು ತುಂಬಿದ ತಾಮ್ರದ ಪಾತ್ರೆಯಲ್ಲಿ ಇರಿಸಿ, ತಿಲ, ವಸ್ತ್ರ, ದಕ್ಷಿಣೆ ಗಳನ್ನು ಒದಗಿಸಿಕೊಂಡು ಸಂಕಲ್ಪಪೂರ್ವಕ ದಾನ ಮಾಡಬೇಕು.

## ಸಂಕಲ್ಪ ವಿಧಿ, ದಾನವಿಧಿ

ಸ್ನಾನ, ಆಚಮನ, ಪ್ರಾಣಾಯಾಮ ಮಾಡಿ - ಸಂಕಲ್ಪದಲ್ಲಿ ತಿಥಿ ವಾರಾದಿಗಳನ್ನು ಉಚ್ಚರಿಸಿ – ಏವಂಗುಣವಿಶೇಷಣ ವಿಶಿಷ್ಟಾಯಾಂ ಶುಭ ತಿಥೌ – ಮಮ ಜನ್ಮರಾಶಿ – ಜನ್ಮನಕ್ಷತ್ರ ಸ್ಥಿತಗ್ರಹಣ ಸೂಚಿತ ಸರ್ವಾರಿಷ್ಟ ಶಾಂತಿ ಪೂರ್ವಕಂ ಏಕದಶಾಸ್ಥಾನಸ್ಥಿತ ಗ್ರಹಣ ಸೂಚಿತ ಶುಭ ಫಲಾ ವಾಪ್ತ್ಯರ್ಥಂ ಬಿಂಬ ದಾನುಕರಿಷ್ಯೆ ಎಂದು ಸೂರ್ಯ-ಚಂದ್ರ ರಾಹುಗಳನ್ನು ಧ್ಯಾನಮಾಡಿ ನಮಸ್ಕರಿಸಿ ಮುಂದಿನ ಮಂತ್ರವನ್ನು ಹೇಳಿ ದಾನಮಾಡಬೇಕು

## ಬಿಂಬದಾನದ ಮಂತ್ರ

ತಮೋಮಯ ಮಹಾಭೀಮ ಸೋಮಸೂರ್ಯ ವಿಮರ್ದನ
ಹೇಮತಾರಾ ಪ್ರದಾನೇನ ಮಮಶಾಂತಿ ಪ್ರದೋಭವ ।
ವಿಧುಂತುದ ನಮಸ್ತುಭ್ಯಂ ಸಿಂಹಿಕಾ ನಂದನಾಚ್ಯುತ
ದಾನೇನಾನೇನ ನಾಗಸ್ಯ ರಕ್ಷಮಾಂ ವೇಧಜಾದ್ಭಯಾತ್ ॥

ಇದಂ ಸೌವರ್ಣಂ ರಾಹುಬಿಂಬಂ ನಾಗಂ (ಸೌವರ್ಣಂ ರವಿ ಬಿಂಬಂ) ರಾಜತಂ ಚಂದ್ರಬಿಂಬಂವಾ, ಘೃತಪೂರ್ಣ ಕಾಂಸ್ಯಪಾತ್ರನಿಹಿತಂ ಯಥಾಶಕ್ತಿ

ತಿಲ - ವಸ್ತ್ರ - ದಕ್ಷಿಣಾಸಹಿತಂ ಗ್ರಹಣಸೂಚಿತ ಅರಿಷ್ಟವಿನಾಶಾರ್ಥಂ ಶುಭಫಲಪ್ರಾಪ್ತ್ಯರ್ಥಂ ಚ ತುಭ್ಯಮಹಂ ಸಂಪ್ರದದೇ ಇತಿ **ಪೂಜಿತ ಬ್ರಾಹ್ಮಣಾಯ** ದದ್ಯಾತ್ ।

ಯಾರಿಗೆ ಜನ್ಮರಾಶಿ-ಜನ್ಮನಕ್ಷತ್ರದಲ್ಲಿ ಗ್ರಹಣವಾಗಿರುತ್ತದೆಯೋ ಆಗ ಅವರು ಚಂದ್ರ-ಸೂರ್ಯರ ಬಿಂಬವನ್ನು ನೋಡಬಾರದು. ಇತರ ಜನರು ನೇರಾ ಗ್ರಹಣ ಹಿಡಿದಿದ್ದನ್ನು ನೋಡಬಾರದು. ಮೊದಲೆ ಸಂಕಲ್ಪ ಮಾಡಿದ ದ್ರವ್ಯವನ್ನು ಗ್ರಹಣವಾದ ನಂತರ ದಾನ ಮಾಡುವಲ್ಲಿ ಎರಡುಪಾಲು ಕೊಡಬೇಕು.

## ಸಮುದ್ರ ಸ್ನಾನವು ಪರ್ವಕಾಲದಲ್ಲಿ ಪ್ರಶಸ್ತವು

ಹುಣ್ಣಿಮೆ-ಅಮಾವಾಸ್ಯೆ ಮುಂತಾದ ಪರ್ವಕಾಲಗಳಲ್ಲಿ ಸಮುದ್ರ ಸ್ನಾನವು ಪುಣ್ಯಕರ. ಶುಕ್ರವಾರ, ಮಂಗಳವಾರ ಕೂಡದು. ಶನಿವಾರ ಅಶ್ವತ್ಥವನ್ನು ಮುಟ್ಟಬಹುದು. ಬಾಕಿ ದಿನ ವಾರಗಳಲ್ಲಿ ಕೂಡದು. ಸಮುದ್ರಸ್ನಾನಕ್ಕೆ ರಾಮಸೇತುವಿರುವ ರಾಮೇಶ್ವರದಲ್ಲಿ ಅಡ್ಡಿಯಿಲ್ಲ, ಕಾಲನಿಯಮವೂ ಇಲ್ಲ.

"ಅಶ್ವತ್ಥ ಸಾಗರೌ ಸೇವ್ಯೌ ನ ಸ್ಪರ್ಶಸ್ತು ಕದಾಚನ ।
ಅಶ್ವತ್ಥಂಮಂದವಾರೇ ಚ ಸಾಗರಂ ಪರ್ವಣಿ ಸ್ಪೃಶೇತ್ ।
ನ ಕಾಲನಿಯಮಃ ಸೇತೌ । ಸಮುದ್ರ ಸ್ನಾನ ಕರ್ಮಣಿ ॥

ಸಮುದ್ರ ಸ್ನಾನ ವಿಧಿಯನ್ನು ನಿರ್ಣಯ ಸಿಂಧುವಿನಲ್ಲಿ ಹೇಳಿದೆ.

## ಗ್ರಹಣಕಾಲದಲ್ಲಿ ಮಂತ್ರದೀಕ್ಷೆಯನ್ನು ತೆಗೆದುಕೊಳ್ಳಬಹುದು

1 ಮಾಸ, ನಕ್ಷತ್ರಾದಿಗಳನ್ನು ಶೋಧಿಸಬೇಕಾಗಿಲ್ಲ. ಮಂತ್ರದೀಕ್ಷೆಯು ಬೇರೆ, ಮಂತ್ರೋಪದೇಶ ಮಾತ್ರ ಚಂದ್ರ ಸೂರ್ಯ ಗ್ರಹಣಗಳಲ್ಲಿ ತೀರ್ಥ ಕ್ಷೇತ್ರಗಳಲ್ಲೂ ಶಿವಾಲಯದಲ್ಲೂ ಆಗಬಹುದು;

2 ಕೆಲವರು ಚಂದ್ರಗ್ರಹಣವು ದಾರಿದ್ರ್ಯಕಾರಕವಾದ್ದರಿಂದ ಮಂತ್ರೋಪದೇಶ ಸ್ವೀಕಾರಕ್ಕೆ ಸೂರ್ಯಗ್ರಹಣವೇ ಶ್ರೇಷ್ಠವೆನ್ನುವರು.

3 ಗ್ರಹಣವಾಗಿ ಮೋಕ್ಷಪರ್ಯಂತ ಹಿಂದೆ ಉಪದೇಶ ತೆಗೆದುಕೊಂಡಿದ್ದನ್ನು ಜಪಿಸಬೇಕು. ಜಪದಶಾಂಶ ಹೋಮ, ಹೋಮದಶಾಂಶ ತರ್ಪಣ, ಹೋಮ ಮಾಡಲು ಅಶಕ್ತನಾದರೆ ಜಪವನ್ನು ನಾಲ್ಕುಪಟ್ಟು ಹೆಚ್ಚಿಸಬೇಕು. ತರ್ಪಣ ದಶಾಂಶಮಾರ್ಜನ, ಬ್ರಾಹ್ಮಣ ಭೋಜನವು ಮಾರ್ಜನದಶಾಂಶವಿರಬೇಕು. ಇದೊಂದು ಪುರಶ್ಚರಣೆ, ಜಪ, ಹೋಮ, ತರ್ಪಣ ಮಾರ್ಜನ, ಬ್ರಾಹ್ಮಣಭೋಜನ, ಈ ರೀತಿಯಾಗಿ ಐದು ಬಗೆ. ಮಂತ್ರಜಪ ಮಾತ್ರ ಮಾಡುವಾಗ ಸ್ಪರ್ಶಕಾಲಕ್ಕೂ ಮುಂಚೆಯೇ ಸ್ನಾನಮಾಡಿ-ಸಂಕಲ್ಪ ಮಾಡಿ ಮೋಕ್ಷಪರ್ಯಂತ ಜಪ ಮಾಡಬೇಕು.

ಸಂಕಲ್ಪವಿಧಿ -- ಆಚಮ್ಯ ಪ್ರಾಣಾನಾಯಮ್ಯ ದೇಶಕಾಲೌ ಸಂಕೀರ್ತ್ಯ ಏತದ್ಗೋತ್ರಃ, ಏಕಚ್ಛರ್ಮಾಹಂ । ರಾಹುಗ್ರಸ್ತೇ ಸೂರ್ಯೆ ಚಂದ್ರೇವಾ, ಏತದ್ದೇವತಾಯಾ ಏತನ್ಮಂತ್ರ ಸಿದ್ಧಿಂಕಾಮಯಮಾನಃ ಗ್ರಾಸಾದಿ ಮುಕ್ತಿಪರ್ಯಂತಂ ಏತನ್ಮಂತ್ರಜಪಂ ಪುರಶ್ಚರಣಾಗಂ ಕರಿಷ್ಯೆ-(ಸ್ಪರ್ಶಾತ್ ಪೂರ್ವಮೇವ ಆಸನಬಂಧಾದಿಕಂ ಕೃತ್ವಾ ಮಂತ್ರಜಪಂ ಮೋಕ್ಷಪರ್ಯಂತ ಕುರ್ಯಾತ್ ಗ್ರಹಣಕಾಲಿಕ ಪುರಶ್ಚರಣಾಂಗ ಜಪಸಾಂಗತಾ ಸಿದ್ಧ್ಯರ್ಥಂ ತತ್ತದ್ದಶಾಂಶ ಹೋಮ-ತದ್ದಶಾಂಶ ತರ್ಪಣ-ಮಾರ್ಜನ, ಭೋಜನಾದಿಂ ಕರಿಷ್ಯೆ.

4 ಮಂತ್ರಪುರಶ್ಚರಣೆಯು-ಗ್ರಸ್ತಾಸ್ತದಲ್ಲೂ ಗ್ರಸ್ತೋದಯದಲ್ಲೂ ಸಂಭವಿಸುವುದಿಲ್ಲ.

5 ಪುರಶ್ಚರಣ ಮಾಡದಿದ್ದರೂ ಗುರೂಪದೇಶವಾಗಿದ್ದ ಮಂತ್ರಗಳನ್ನು ಗಾಯತ್ರಿಯನ್ನು ಗ್ರಹಣ ಕಾಲದಲ್ಲಿ ಜಪಿಸಬೇಕು. ಇಲ್ಲವಾದರೆ ಮಂತ್ರ ಮಾಲಿನ್ಯ ದೋಷವುಂಟಾಗುವುದು.

ವಿಶೇಷ–ಪುರಶ್ಚರಣೆ ಮಾಡುವಾಗ ಈತನ ಪರವಾಗಿ ಸ್ನಾನ ನೈಮಿತ್ತಿಕಪೂಜಾ ದಾನಗಳನ್ನು ಪುತ್ರ, ಭಾರ್ಯೆ ಮೊದಲಾದವರು ಮಾಡಬೇಕು.

## ಜಪವಾದ ಮೇಲೆ ಮಾರನೇ ದಿನ ಹೋಮಾದಿಗಳನ್ನು ಆಚರಿಸಬೇಕು.

ಗ್ರಹಣ ಕಾಲದಲ್ಲಿ ಶಯನ ಮಾಡಿದರೆ ರೋಗವೂ, ಮೂತ್ರವಿಸರ್ಜನೆ ಮಾಡಿದರೆ ದಾರಿದ್ರ್ಯವೂ, ಮಲವಿಸರ್ಜನೆ ಮಾಡಿದರೆ ಕ್ರಿಮಿಯು, ಅಭ್ಯಂಗ ಮಾಡಿದರೆ ಕುಷ್ಠರೋಗವು, ಭೋಜನ ಮಾಡಿದರೆ ನರಕವೂ, ಮೈಥುನ ಮಾಡಿದರೆ ಮುಂದೆ ಹಂದಿಯಾಗಿಯೂ ಹುಟ್ಟುವುದು–ಇತ್ಯಾದಿ ದೋಷ ಗಳು. ಅದರಿಂದ ಶಯನಾದಿಗಳು ವರ್ಜ್ಯವು।

## ಗ್ರಹಣ ವೇಧವಿಚಾರ

ಸೂರ್ಯ ಗ್ರಹಣದಲ್ಲಿ ಗ್ರಹಣವಾಗುವ ಯಾಮಕ್ಕೆ ಮೊದಲು ನಾಲ್ಕು ಯಾಮಗಳು ವೇಧವು. ಚಂದ್ರಗ್ರಹಣದಲ್ಲಿ ಮೊದಲು ಮೂರು ಯಾಮಗಳು ವೇಧವು.

ದಿನದ ಮೊದಲನೇ ಯಾಮದಲ್ಲಿ ಸೂರ್ಯ ಗ್ರಹಣವಾದರೆ ಹಿಂದಿನ ರಾತ್ರಿ ನಾಲ್ಕು ಯಾಮಗಳ ಕಾಲ ಭೋಜನ ಕೂಡದು. ಹೀಗೆಯೇ ರಾತ್ರಿಯು ಮೊದಲನೆ ಯಾಮದಲ್ಲಿ ಚಂದ್ರ ಗ್ರಹಣವಾದರೆ ಆ ದಿನದ ಹಗಲು ಎರಡನೇ ಯಾಮಾದಿಗಳಲ್ಲಿ ಭೋಜನವು ಕೂಡದು. ಹೀಗೆಯೇ ದ್ವಿತೀಯ ಯಾಮಾದಿ ಗಳಲ್ಲಿ ಗ್ರಹಣವಾದರೂ ಹಿಂದೆ ೪,೩, ಯಾಮಗಳಲ್ಲಿ ಭೋಜನ ಕೂಡದೆಂದು ಊಹಿಸಬೇಕು.

ಬಾಲಕರು, ವೃದ್ಧರೂ, ಆತುರರು, ಗರ್ಭಿಣಿ–ಇತ್ಯಾದಿ ಜನರಿಗೆ ಒಂದೂವರೆ ಯಾಮವು, ಮುಹೂರ್ತತ್ರಯ ಮಾತ್ರ ವೇಧಕಾಲ. ಆವಾಗ ಭೋಜನ ಕೂಡದು, ಶಕ್ತರಾದವರು ಭೋಜನ ಮಾಡಿದರೆ ಪ್ರಾಯಶ್ಚಿತ್ತವಿದೆ.

ಗ್ರಹಣ ಕಾಲದಲ್ಲಿ ಭೋಜನ ಮಾಡಿದರೆ ಪ್ರಾಯಶ್ಚಿತ್ತ ಪ್ರಾಜಾಪತ್ಯಕೃಚ್ಛ್ರಾಚರಣೆ।

## ಮಂಗಳ ಕಾರ್ಯಗಳು ಬಂದರೆ ಗ್ರಹಣ ದಿನಕ್ಕೆ ಮೊದಲು ಅನಂತರವೂ ವರ್ಜ್ಯ ದಿನಗಳು

ಪೂರ್ಣಗ್ರಾಸವಾದರೆ ದ್ವಾದಶಿಯಿಂದ ಆರಂಭಿಸಿ ತದಿಗೆ ಪರ್ಯಂತ ಏಳು ದಿನಗಳು ವರ್ಜ್ಯವು. ಸೂರ್ಯನ ಪೂರ್ಣಗ್ರಾಸವಾದರೆ ಏಕಾದಶಿಯಿಂದ ಎಂಟು ದಿನಗಳು ವರ್ಜ್ಯವು. ಖಂಡಗ್ರಹಣವಾದರೆ ಚತುರ್ದಶಿಯಿಂದ ಮೂರು ದಿನ ವರ್ಜ್ಯ. ಗ್ರಸ್ತಾಸ್ತವಾದರೆ ಮೊದಲು ಮೂರು ದಿನವೂ ವರ್ಜ್ಯ, ಗ್ರಸ್ತೋದಯವಾದರೆ ಆ ಮೇಲೆ ಬರುವ ಮೂರು ದಿನಗಳು ವರ್ಜ್ಯ.

ಗ್ರಹಣ ನಕ್ಷತ್ರವನ್ನು ಆರು ತಿಂಗಳು ಪೂರ್ಣಗ್ರಾಸದಲ್ಲಿ ವರ್ಜಿಸಬೇಕು. ಪಾದಾದಿ ಗ್ರಾಸವಾದರೆ ಒಂದುವರೆ ತಿಂಗಳು ವರ್ಜಿಸಬೇಕು.

## ಮಕರಸಂಕ್ರಾಂತಿ ನಿರ್ಣಯ

ಹಗಲು ಮಕರಸಂಕ್ರಾಂತಿಯಾದರೆ ಸಂಕ್ರಾಂತಿಯಾದ ನಂತರ ನಲವತ್ತು ಘಳಿಗೆ ಪುಣ್ಯಕಾಲವೆಂತ ಸಿಂಧುಕಾರನ ಮತ. ಸಂಕ್ರಾಂತಿಯಾದ ನಂತರ ಇಪ್ಪತ್ತು ಘಳಿಗೆ ಮಾತ್ರ ಪುಣ್ಯಕಾಲವೆಂದು ಹೇಳುವುದು, ಹಗಲು ಸಂಕ್ರಮಣವಾದರೆ ಮಾತ್ರವೆಂದೂ, ರಾತ್ರಿ ಸಂಕ್ರಮಣವಾದರೆ ಮೂವತ್ತು ಘಳಿಗೆಯೆಂದೂ ಕಾಲಾಮೃತಕಾರನ ಮತ. ಅಲ್ಪಸ್ವಲ್ಪ ಘಳಿಗೆ ಮಾತ್ರ ಹಗಲು ಉಳಿದು ಮಕರ ಸಂಕ್ರಾಂತಿಯಾದರೆ ಸಂಕ್ರಾಂತಿಗೆ ಹತ್ತಿರವಿರುವ ಪೂರ್ವ ಕಾಲದಲ್ಲಿ ಹಗಲು ಸ್ನಾನ, ದಾನ, ಶ್ರಾದ್ಧ (ತರ್ಪಣ) ಭೋಜನಗಳನ್ನು ಮಾಡಬೇಕು. ರಾತ್ರಿಶ್ರಾದ್ಧ ತರ್ಪಣಗಳು ನಿಷಿದ್ಧವಾದ್ದರಿಂದಲೂ ಸ್ನಾನ, ದಾನ, ಭೋಜನಗಳನ್ನು ಮಾಡುವುದು ಅಶಕ್ಯವಾದ್ದರಿಂದಲೂ, ಆದಿನ

ರಾತ್ರಿ ಭೋಜನವು ನಿಷಿದ್ಧವಾದ್ದರಿಂದಲೂ, ಪುತ್ರವಂತರಾದ ಗೃಹಸ್ಥರಿಗೆ ಶುದ್ಧ ಉಪವಾಸ ನಿಷೇಧಮಾಡಿದೆ. ಆದ್ದರಿಂದಲೂ ಹಗಲೆ ಈ ಸಂದರ್ಭದಲ್ಲಿ ಉಪಯೋಗಿಸಬೇಕು.

2 ಮೇಲ್ಕಂಡಂತೆ ಅಲ್ಪಘಳಿಗೆ ಮಾತ್ರ ಸಂಕ್ರಾಂತಿಯಾಗಿದ್ದರೆ ಮರು ದಿನ ಪುಣ್ಯವೆಂದು ತಿಳಿಯದೆ ಸಂಕ್ರಾಂತಿಯ ಪೂರ್ವಭಾಗವೇ ಪುಣ್ಯಕಾಲ ವೆಂದು ತಿಳಿಯಬೇಕು.

3 ರಾತ್ರಿಯ ಪೂರ್ವಭಾಗದಲ್ಲೆ ಸಂಕ್ರಾಂತಿಯಾದರೂ ಉತ್ತರಾರ್ಧ ದಲ್ಲೋ ನಿಶೀಥದಲ್ಲೊ ಸಂಕ್ರಾಂತಿಯಾದರೂ ಮರುದಿನ ಹಗಲು ಪುಣ್ಯ ಕಾಲ. ಅದರಲ್ಲೂ ಹಗಲು ಪೂರ್ವಾರ್ಧವು ಅತ್ಯಂತ ಪುಣ್ಯಕರ, ಅದರಲ್ಲೂ ಸೂರ್ಯೋದಯವಾಗಿ ಐದು (೫) ಘಳಿಗೆ ಪುಣ್ಯಕಾಲವು ಅತ್ಯಂತ ಶ್ರೇಷ್ಠ. **"ಯಾ ಯಾಃ ಸಂನಿಹಿತಾ ನಾಡ್ಯಃ ತಾಸ್ತಾಃ ಪುಣ್ಯತಮಾಃ ಸ್ಮೃತಾಃ"** ಎಂಬ ವಚನವೇ ಪ್ರಮಾಣ.

4 ಹೀಗೆಯೆ ರಾತ್ರಿ ಸಂಕ್ರಾಂತಿ ವಿಷಯದಲ್ಲಿ ಪೂರ್ವದಿನದ ಉತ್ತ ರಾರ್ಧ ಪುಣ್ಯವೆಂದರೂ ಹಗಲುಕೊನೆ ಐದು ಘಳಿಗೆ ಅತ್ಯಂತ ಪುಣ್ಯಕರವೆಂದು ಅರಿಯಬೇಕು. ಯಾವತ್ತು ಮರುದಿನ ಪೂರ್ವಾರ್ದ ಪುಣ್ಯಕಾಲವೆಂದಾ ಗಲೂ ಸೂರ್ಯೋದಯಾದಿ ಐದು ಘಳಿಗೆ ಅತ್ಯಂತ ಪುಣ್ಯಕರವು. ಸೂರ್ಯಾ ಸ್ತವಾಗಿ ವಿಶೇಷ ನಂತರ ಮೂರು ಘಳಿಗೆ ಸಂಜೆಯಲ್ಲಿ ಮಕರಸಂಕ್ರಾಂತಿ ಯಾದರೆ ಮರುದಿನ ಬಿಟ್ಟು ಹಿಂದಿನ ದಿನವೇ ಪುಣ್ಯವೆಂದು ಮೂಹೂರ್ತ ಚಿಂತಾಮಣಿ ಮುಂತಾದ ಗ್ರಂಥಗಳ ಅಭಿಪ್ರಾಯವು ಧರ್ಮಶಾಸ್ತ್ರಗಳಲ್ಲಿ ಉಕ್ತವಾಗಿಲ್ಲವೆಂದು ಸಿಂಧುಕಾರರು ತಿರಸ್ಕರಿಸಿದ್ದಾರೆ. ಧರ್ಮಶಾಸ್ತ್ರಕ್ಕೆ ಅವಿ ರುದ್ಧವಾದ ಜ್ಯೋತಿಃಶಾಸ್ತ್ರಾರ್ಥವೆ ಆಚರಣೆಗೆ ಶ್ರೇಷ್ಠವೆಂಬುದು ಇವರ ಅಭಿಪ್ರಾಯವಿದೆ, ಆದರಂತೆ ಆಚರಿಸಬೇಕು. ಶುಕ್ಲಪಕ್ಷ ಸಪ್ತಮಿದಿನ ಯಾವ ಸಂಕ್ರಾಂತಿಯು ಬಂದರೂ ಗ್ರಹಣಕ್ಕಿಂತಲೂ ಶ್ರೇಷ್ಠ, ಪುಣ್ಯಕರ.

## ಸಂಕ್ರಾಂತಿ ಸ್ನಾನವು ಮಾನವರಿಗೆ ಎಲ್ಲರಿಗೂ ವಿಹಿತ

ಸಂಕ್ರಾಂತಿ ಶ್ರಾದ್ಧವನ್ನು ಪಿಂಡವಿಲ್ಲದೆ ಮಾಡುವುದು. ಅವಶ್ಯಕರ್ತವ್ಯ ಆದಿಲ್ಲವಾದರೆ ತರ್ಪಣ, ಅಧಿಕೃತರಾದವರಿಗೆ ಹೇಳಿದೆ. ಹೀಗೆಯೆ ದಾನವು ಶ್ರೇಷ್ಠ. ಆಯನ ಸಂಕ್ರಾಂತಿಯಲ್ಲಿ ಹಗಲು ಉಪವಾಸವು ಶ್ರೇಷ್ಠ. ಪುತ್ರವಂತ ಗೃಹಸ್ಥರು ಉಪವಾಸ ಮಾಡಬಾರದು.

ಯಾವ ಮಾನವನು ಸೂರ್ಯಸಂಕ್ರಾಂತಿಯಲ್ಲಿ ಸ್ನಾನ ಮಾಡುವುದಿಲ್ಲವೊ ಏಳು ಜನ್ಮಗಳಲ್ಲೂ ರೋಗಿಯಾಗಿ ದರಿದ್ರನಾಗಿ ಹುಟ್ಟುವನು ಎಂದು

ರವಿ ಸಂಕ್ರಮಣೆ ಪ್ರಾಪ್ತೇ ನ ಸ್ನಾಯಾದ್ಯಸ್ತು ಮಾನವಃ
ಸಪ್ತಜನ್ಮಸಿ ರೋಗೀಸ್ಯಾತ್ ನಿರ್ಧನಶ್ಚೈವ ಜಾಯತೇ

ಸಂಕ್ರಾಂತಿ ಕಾಲದಲ್ಲಿ ಹವ್ಯಕರ್ಮಗಳಲ್ಲಿ ಕೊಟ್ಟ ಎಲ್ಲಾ ದಾನಗಳನ್ನು ಸೂರ್ಯನು ಜನ್ಮ ಜನ್ಮಗಳಲ್ಲೂ ನಿತ್ಯವೂ ಕೊಡುವನು. ಅಂದರೆ-ದಾನಫಲವು ನಮಗೆ ಪ್ರತಿಜನ್ಮದಲ್ಲೂ ಫಲಿಸುವುದೆಂದರ್ಥ- ವಚನವಿದೆ

ಸಂಕ್ರಾಂತಿಯಾನಿ ದತ್ತಾನಿ ಹವ್ಯಕವ್ಯಾನಿ ದಾತೃಭಿಃ ।
ತಾನಿ ನಿತ್ಯಂ ದದಾತ್ಯರ್ಕಃ ಪುನರ್ಜನ್ಮನಿ ಜನ್ಮನಿ ॥

## ಉತ್ತರಾಯಣದ ಕರ್ತವ್ಯಗಳು

ತಿಲದಿಂದ ಮಾಡಿದ ಹಸುವನ್ನು ಉತ್ತರಾಯಣದಲ್ಲಿ ದಾನ ಮಾಡಬೇಕು. ಶಿವಾಲಯದಲ್ಲಿ ತಿಲತೈಲದಿಂದ ದೀಪವನ್ನು ಹೊತ್ತಿಸಬೇಕು, ತಿಲಮಿಶ್ರವಾದ ಅಕ್ಕಿಯ ಮಂತ್ರಾಕ್ಷತೆಯಿಂದ ಶಿವನನ್ನು ಪೂಜಿಸಬೇಕು. ಆ ದಿನ ಕರಿಎಳ್ಳನ್ನು ಸ್ನಾನಕ್ಕೆ ಉಪಯೋಗಿಸಬೇಕು, ತಿಲಹೋಮ, ತಿಲದಾನ ಮಾಡಬೇಕು ಬಿಳಿಯ ಎಳ್ಳಿನಿಂದ ದೇವತೆಗಳನ್ನು ತೃಪ್ತಿಪಡಿಸಬೇಕು, ಹಾಗೂ ಮನುಷ್ಯರನ್ನು ತೃಪ್ತಿಪಡಿಸಬೇಕು. ಕರಿಎಳ್ಳಿನಿಂದ ಪಿತೃತರ್ಪಣ ಮಾಡಬೇಕು, ಈಶ್ವರನಿಗೆ ಆಜ್ಯದಿಂದ ಅಭಿಷೇಕ ಮಾಡಬೇಕು.

ಸಂಪ್ರದಾಯದಲ್ಲಿ ಸಂಸ್ಕರಿಸಿದ ಬಿಳಿಎಳ್ಳನ್ನು ಕೊಡುವುದು ಬೇರು ಪ್ರದು ಪದ್ಧತಿಯಾಗಿ ಬಂದಿದೆ.

ಚಿನ್ನದೊಂದಿಗೆ ಶಿಲಪಾತ್ರವನ್ನು ದಾನ ಮಾಡಬೇಕು, ಈ ಕಾಲದಲ್ಲಿ ವಸ್ತ್ರದಾನ ಮಹಾಫಲವುಳ್ಳದು. ಸೂರ್ಯಬಿಂಬದಲ್ಲಿ ಹಾಲಿನಿಂದ ಅಭಿಷೇಕ ಮಾಡುವಲ್ಲಿ ಸೂರ್ಯಲೋಕ ಪ್ರಾಪ್ತಿಯಾಗುವುದು.

## ಅನಧ್ಯಾಯಗಳು

ಹಗಲು ವಿಷುವ ಅಯನ ಸಂಕ್ರಾಂತಿಯಾದರೆ ಹಿಂದಿನದಿನ, ಸಂಕ್ರಾಂತಿ ದಿನ ಮರುದಿನಗಳು ಅನಧ್ಯಾಯವು. ಅಯನದಿನ ಮತ್ತು ಮರುದಿನ ಕರಿಯೆಂದು ಹೆಸರಾಗಿದೆ. ಈ ದಿನವು ಶುಭಕರ್ಮಗಳಿಗೆ ವರ್ಜ್ಯವು. ಅರ್ಧ ರಾತ್ರಿಯ ಹಿಂದೂ ಆಮೇಲೂ ಸಂಕ್ರಾಂತಿಯಾದರೆ ಆದಿನ ಮತ್ತು ಮರು ದಿನ ಅನಧ್ಯಾಯವು. ಇದೇರೀತಿ ಗ್ರಹಣದಲ್ಲೂ ಅರಿಯಬೇಕು.

## ಅರ್ಧೋದಯ – ಮಹೋದಯಗಳು

ಪುಷ್ಯ ಮಾಘಮಾಸಗಳ ಅಮಾವಾಸ್ಯೆಯು ಭಾನುವಾರ-ವ್ಯತೀಪಾತ, ಶ್ರವಣನಕ್ಷತ್ರಗಳಿಂದ ಕೂಡಿ ಬಂದಲ್ಲಿ ಅರ್ಧೋದಯವೆಂದು ಹೆಸರು. ಕೋಟಿ ಸೂರ್ಯಗ್ರಹಣಗಳಿಗೆ ಸಮಾನವು, ಅವುಗಳಲ್ಲಿ ಒಂದು ನ್ಯೂನವಾದರೆ ಮಹೋದಯವೆಂದು ಹೇಳಿದೆ. ವಚನ —

ಅಮಾರ್ಕಪಾತ ಶ್ರವಣೈಃ ಯುಕ್ತಾಚೇತ್ ಪೌಷಮಾಘಯೋಃ ।
ಅರ್ಧೋದಯಃ ಸವಿಜ್ಞೇಯಃ ಕೋಟಿ ಸೂರ್ಯಗ್ರಹೈಃ ಸಮಃ ॥

2 ಕಿಂಚಿನ್ನ್ಯೂನಂ ಮಹೋದಯಃ ಎಂದು ನಾಲ್ಕನೆ ಪಾದ ಪಾಠ ವನ್ನು ಸ್ವೀಕರಿಸಿ ಹೇಳುವರು. ಪುಷ್ಯ-ಮಾಘಗಳ ನಡುವೆ ಬರುವ ಅಮಾ ವಾಸ್ಯೆಯೆಂದು ಕೆಲವರು ಅರ್ಥಮಾಡಿದ್ದಾರೆ. ಕೆಲವರು ಅಮಾಂತಮಾಸೇ ಪುಷ್ಯಸ್ಯ ಪೂರ್ಣಿಮಾಂತಮಾಸೇ ಮಾಘಸ್ಯಚ ಎಂದು ಹೇಳುವರು.

ಹೇಗಾದರೂ ಹೇಳಲಿ, ಪುಷ್ಯದ ಪೂರ್ಣಿಮೆ ಕಳೆದು ಬರುವ ಅಮಾವಾಸ್ಯೆ ಯೆಂದರ್ಥವೆಂದು ಸಿಂಧುಕಾರರು ನಿರ್ಣಯ ಮಾಡಿರುವರು.

3 ಹಗಲೇ ಮೇಲೆ ಹೇಳಿದ ಭಾನುವಾರ, ವ್ಯತಿಪಾತ, ಶ್ರವಣನಕ್ಷತ್ರ ಯೋಗಗಳಿದ್ದರೆ ಮಾತ್ರ ಈ ಯೋಗವು ಪ್ರಶಸ್ತ, ಅರ್ಧೋದಯಕಾಲದ ಎಲ್ಲಾ ನೀರೂ ಗಂಗೆಗೆ ಸಮಾನವೆಂದು ಹೇಳುವರು, ಎಲ್ಲಾ ದ್ವಿಜರೂ ಶುದ್ಧಾತ್ಮರಾಗಿದ್ದು ಬ್ರಹ್ಮನಿಗೆ ಸಮಾನರಾಗಿರುವರು. ಅಲ್ಪಸ್ವಲ್ಪ ದಾನ ಮಾಡುವುದೂ ಮೇರುವಿಗೆ ಸಮಾನವೆಂದು ಹೇಳಿದ್ದಾರೆ.

## ಈ ಕಾಲದಲ್ಲಿ ಮಾಡುವ ದಾನ

ಕಂಚಿನ ಪಾತ್ರೆಯಲ್ಲಿ ಪಾಯಸವನ್ನು ಹಾಕಿ, ಪಾಯಸದಲ್ಲಿ ಅಷ್ಟದಳ ಪದ್ಮವನ್ನು ಬರೆದು, ಕರ್ಣಿಕಾಮಧ್ಯದಲ್ಲಿ ಚಿನ್ನದ ಲಿಂಗವನ್ನು ಇರಿಸಿ, ಕಂಚಿನ ಪಾತ್ರೆಯಲ್ಲಿ ಬ್ರಹ್ಮನನ್ನು ಪಾಯಸದಲ್ಲಿ ವಿಷ್ಣುವನ್ನು, ಲಿಂಗದಲ್ಲಿ ಶಿವನನ್ನು ಆವಾಹನೆ ಮಾಡಿ, ವೈದಿಕ ಮಂತ್ರಗಳಿಂದಲೂ ನಾಮಮಂತ್ರ ಗಳಿಂದಲೋ ಪೂಜಿಸಿ ಬ್ರಾಹ್ಮಣನಿಗೆ ದಾನ ಮಾಡಬೇಕು, ವಸ್ತ್ರಗಳನ್ನು ಕೊಟ್ಟು ಪೂಜಿಸಬೇಕು.

## ದಾನ ಮಂತ್ರ

ಸುವರ್ಣಪಾಯಸಾಪಾತ್ರಂ ಯಸ್ಮಾದೇತತ್ತ್ರಯೀಮಯಂ ।
ಆಪಯೋಸ್ತಾರಕಂಯಸ್ಮಾತ್ ತದ್ಗೃಹಾಣ ದ್ವಿಜೋತ್ತಮ ॥

ಗೋತ್ರಾಯ–ಶರ್ಮಣೆ–ತುಭ್ಯಂ– ಇದಂ ಸುವರ್ಣಲಿಂಗ ಪಾಯಸಯುಕ್ತ ಮಮತ್ರದಾನಂ, ಸಮುದ್ರಮೇಖಲಾ ಪೃಥಿವೀದಾನ ಫಲಕಾಮಃ ಅಹಂ ಸಂಪ್ರದದೇ ನಮಮ ಎಂದು ಕೊಡಬೇಕು.

## ಉಪಾಕರ್ಮದ ಕಾಲ ನಿರ್ಣಯ

1 ಋಗ್ವೇದಿಗಳಿಗೆ ಶ್ರಾವಣಮಾಸ, ಶುಕ್ಲಪಕ್ಷದಲ್ಲಿ ಶ್ರವಣನಕ್ಷತ್ರ, ಪಂಚಮಿ, ಹಸ್ತನಕ್ಷತ್ರ, ಇವು ಮೂರು ಕಾಲಗಳು. ಆದರಲ್ಲಿ ಶ್ರವಣ ನಕ್ಷತ್ರ ಮುಖ್ಯ ಕಾಲ. ಇದು ಸಿಕ್ಕದಿದ್ದರೆ ಪಾಚಮಿ ಹಸ್ತನಕ್ಷತ್ರ ಇರುವ ಕಾಲ, ಗ್ರಹಣ, ಸಂಕ್ರಾಂತಿಗಳು ಇರಬಾರದು.

ಪರ್ವಣಿ ಶ್ರವಣೇಕಾರ್ಯಂ ಗ್ರಹಸಂಕ್ರಾಂತ್ಯದೂಷಿತೇ
ಅಷ್ವರ್ಯುಭಿಃ ಬಹ್ವೃಚೈಶ್ಚ ಕಥಂಚಿತ್ತದ ಸಂಭವೇ
ತತ್ರೈವ ಹಸ್ತಪಂಚಮ್ಯಾಂ ತಯೋಃ ಕೇವಲಯೋರಪಿ ||

2 ಗ್ರಹಣಸಂಕ್ರಾಂತಿಗಳಿಲ್ಲದ ಹುಣ್ಣಿಮೆ ಯಜುರ್ವೇದಿಗಳಿಗೆ ಹೇಳಿದೆ. ಋಗ್ವೇದಿಗಳಿಗೆ ಶ್ರವಣನಕ್ಷತ್ರವಿರುವ ದಿನ ಮುಖ್ಯ.

3 ಶ್ರವಣನಕ್ಷತ್ರವು ಎರಡು ದಿನಗಳಲ್ಲಿದ್ದರೆ, ಹಿಂದಿನ ದಿನದಲ್ಲಿ ಸೂರ್ಯೋದಯದಿಂದ ಹಿಡಿದು ಎರಡನೇ ದಿನ ಸೂರ್ಯೋದಯವಾದ ಮೇಲೆ ಮೂರು ಮುಹೂರ್ತ ಕಾಲವಿದ್ದರೆ ಮಾರನೆ ದಿನವೇ ಉಪಾಕರ್ಮ, ಧನಿಷ್ಠಾ ನಕ್ಷತ್ರಯೋಗವಿರುವುದು ಪ್ರಶಸ್ತವಾದ ಕಾರಣ ಮಾರನೆ ದಿನವೇ ಕರ್ತವ್ಯ.

4 ಮೂರು ಮುಹೂರ್ತಗಳಿಗೂ ಕಡಿಮೆಯಿದ್ದರೆ ಹಿಂದಿನ ದಿನವೇ ಕರ್ತವ್ಯ. ಶ್ರವಣನಕ್ಷತ್ರವು ಸಂಪೂರ್ಣವ್ಯಾಪ್ತವಾಗಿರುವುದು.

5 ಹಿಂದಿನ ದಿನ ಸೂರ್ಯೋದಯಕ್ಕೆ ಶ್ರವಣವಿಲ್ಲದೆ ಮಾರನೆ ದಿನ ಎರಡು ಮುಹೂರ್ತವಿದ್ದರೆ ಮಾರನೆ ದಿನವೇ ಕರ್ತವ್ಯ. ಏಕೆಂದರೆ ಉತ್ತರಾ ಷಾಢಾವೇಧವಿರಬಾರದೆಂಬುದೆ ಕಾರಣ.

6 ಮಾರನೇ ದಿನ ಎರಡು ಮುಹೂರ್ತಕ್ಕೂ ಕಡಿಮೆಯಿದ್ದು ಹಿಂದಿನ ದಿನ ಉತ್ತರಾಷಾಢವಿದ್ದರೆ, ಪಂಚಮಿ, ಹಸ್ತನಕ್ಷತ್ರವಿರುವ ಕಾಲವೆಂದು ನಿರ್ಣಯವು.

7 ಎಲ್ಲಾ ಯಜುರ್ವೇದಿಗಳಿಗೂ ಶ್ರಾವಣದ ಹುಣ್ಣಿಮೆ ಮುಖ್ಯ ಕಾಲ, ಪೂರ್ಣಿಮೆಯು ಖಂಡತಿಥಿಯಾಗಿದ್ದರೆ ಹಿಂದಿನ ದಿನ, ೧ ಮುಹೂರ್ತ ಕಳೆದ ಮೇಲೆ ಹುಣ್ಣಿಮೆ ಬಂದು ಎರಡನೆ ದಿನ ಆರು ಮುಹೂರ್ತವ್ಯಾಪಿ ಯಾಗಿದ್ದರೆ ಎಲ್ಲಾ ಯಜುರ್ವೇದಿಗಳಿಗೂ ಮುಂದಿನ ದಿನವೇ ಉಪಾಕರ್ಮಕ್ಕೆ ಯೋಗ್ಯವಾದದ್ದು. ಯಾವಾಗ ಶುದ್ಧ ಪೂರ್ಣಿಮೆಯು ಅಧಿಕವಾಗಿ ಎರಡು ದಿನಗಳಲ್ಲೂ ಸೂರ್ಯೋದಯವ್ಯಾಪಿಯಾಗಿ ಇರುತ್ತದೆಯೋ ಆಗ ಎಲ್ಲಾ ಯಜುರ್ವೇದಿಗಳಿಗೂ ಹಿಂದಿನ ದಿನವೇ ಉಪಾಕರ್ಮದ ಕಾಲ.

8 ಹಿಂದಿನ ದಿನ ಒಂದು ಮುಹೂರ್ತವು ಕಳೆದು ನಂತರ ಪೂರ್ಣಿಮೆಯು ಬಂದು ಮಾರನೆ ದಿನ ಮುಹೂರ್ತ ೨, ಅಥವಾ ೩, ೪ ಮುಹೂರ್ತ ವಿದ್ದು ೬ ಮುಹೂರ್ತಗಳಿಗೂ ಕಡಿಮೆಯಾಗಿದ್ದರೆ ತೈತ್ತಿರೀ ಶಾಖೆಯವರಿಗೆ ಮುಂದಿನ ದಿನವೇ ಗ್ರಾಹ್ಯ. ಬೇರೆ ಶಾಖೆಯವರು ಹಿಂದಿನ ದಿನವೇ ಮಾಡ ಬೇಕು.

9 ಹಿಂದಿನ ದಿನ ಮುಹೂರ್ತಾನಂತರ ಪೂರ್ಣಿಮೆ ಬಂದು ಮಾರನೆ ದಿನ ೨ ಮುಹೂರ್ತಕ್ಕೂ ಕಡಿಮೆಯಾಗಿದ್ದರೆ ಆವಾಗ ತಿಥಿಕ್ಷಯವಾದ್ದರಿಂದ ಎಲ್ಲಾ ಯಜುರ್ವೇದಿಗಳು ಪೂರ್ವದಿನದ ಪೂರ್ಣಿಮೆಯನ್ನೇ ಹಿಡಿಯಬೇಕು.

10 ಹಿರಣ್ಯಕೇಶೀಯ ತೈತ್ತಿರೀಯ ಶಾಖೆಯವರಿಗೆ ಶ್ರಾವಣ ಪೂರ್ಣಿಮೆ ಮುಖ್ಯಕಾಲ. ಅದಿಲ್ಲವಾದರೆ ಶ್ರಾವಣದ ಹಸ್ತನಕ್ಷತ್ರವಿರುವ ತಿಥಿಯೇ ಗ್ರಾಹ್ಯ. ಶ್ರಾವಣಶುಕ್ಲ ಪಂಚಮಿಯನ್ನು ಅಪರರ ಸೂತ್ರಕಾರರು ಹೇಳಿಲ್ಲವಾದ್ದರಿಂದ ತೆಗೆದುಕೊಳ್ಳಬಾರದು. ಖಂಡತಿಥಿಯು ಇದ್ದಾಗ ಹಿಂದಿನಂತೆ ನಿರ್ಣಯ. ಹಸ್ತನಕ್ಷತ್ರವೂ ಸಹ ಉದಯಕ್ಕೂ ಇದ್ದು ಸಂಗವ ಕಾಲಕ್ಕೂ ಇದ್ದರೆ ಮಾತ್ರ ಗ್ರಾಹ್ಯ. ಅನ್ಯಥಾ ಪೂರ್ವ ವಿದ್ಧತಿಥಿಯು ಗ್ರಾಹ್ಯ.

11 ಆಪಸ್ತಂಬರಿಗೆ ಶ್ರಾವಣ ಪೂರ್ಣಿಮೆ ಮುಖ್ಯಕಾಲ. ಅದು ಸಿಕ್ಕದಿದ್ದರೆ ಭಾದ್ರಪದದ ಪೂರ್ಣಿಮೆ ಗ್ರಾಹ್ಯ. ಬೋಧಾಯನರಿಗೆ ಶ್ರಾವಣ ಪೂರ್ಣಿಮೆ. ದೋಷಯುಕ್ತವಾಗಿದ್ದರೆ ಆಷಾಢ ಪೂರ್ಣಿಮೆಯು ಗ್ರಾಹ್ಯ.

12 ಕಾಣ್ವಮಾಧ್ಯಂದಿನ-ಕಾತ್ಯಾಯನ ಶಾಖೆಯವರಿಗೆ ಶ್ರವಣ ನಕ್ಷತ್ರ ಯುಕ್ತವಾದ ಶ್ರಾವಣ ಪೂರ್ಣಿಮೆ, ಅಥವಾ ಶುದ್ಧಪೂರ್ಣಿಮೆ. ಮತ್ತು ಹಸ್ತನಕ್ಷತ್ರ ಯುಕ್ತಪಂಚಮಿಯು. ಕೇವಲ ಪಂಚಮಿಯೂ ಗ್ರಾಹ್ಯ, ಇದೇ ಮುಖ್ಯಕಾಲ. ಕೇವಲ ಶ್ರವಣ, ಕೇವಲ ಹಸ್ತನಕ್ಷತ್ರವು ಇದ್ದ ತಿಥಿಯು ಗ್ರಾಹ್ಯವಲ್ಲ. ಶ್ರಾವಣವಲ್ಲಿ ವಿಘ್ನವುಂಟಾದರೆ ಭಾದ್ರಪದ ಪೂರ್ಣಿಮೆ ಮತ್ತು ಪಂಚಮಿಯೆ ಗ್ರಾಹ್ಯವು. ಖಂಡತಿಥಿಯಾದರೆ 6 ಮುಹೂರ್ತಗಳು ಹೆಚ್ಚಾಗಿದ್ದರೆ ಮುಂದಕ್ಕೆ. ಕಮ್ಮಿಯಾಗಿದ್ದರೆ ಹಿಂದಿನ ತಿಥಿಯೇ ಗ್ರಾಹ್ಯವು.

1 ಸಾಮವೇದಗಳಿಗೆ – ಭಾದ್ರಪದ ಶುದ್ಧದಲ್ಲಿ ಹಸ್ತನಕ್ಷತ್ರವಿರುವ ಕಾಲ ಮುಖ್ಯ. ಆವರಲ್ಲಿ ಸಂಕ್ರಾಂತಿ ಮುಂತಾದ ದೋಷವಿದ್ದರೆ ಶ್ರಾವಣ ಮಾಸದ ಹಸ್ತನಕ್ಷತ್ರವಿರುವಕಾಲ. ಕೆಲವರು ಈ ತರಹ ದೋಷವಿದ್ದರೆ ಶ್ರಾವಣ ಪೂರ್ಣಿಮೆಯಲ್ಲಿ ಉಪಾಕರ್ಮಮಾಡಿ ಭಾದ್ರಪದ ಹಸ್ತ ನಕ್ಷತ್ರ ಪರ್ಯಂತ ವೇದವನ್ನು ಪಠಿಸಬಾರದೆಂದೂ ನಂತರ ಪಠಿಸಬೇಕೆಂದೂ ಹೇಳುತ್ತಾರೆ.

2 ಹಸ್ತನಕ್ಷತ್ರ ಖಂಡವಾಗಿದ್ದರೆ. ಎರಡುದಿನವೂ ಅಪರಾಹ್ಣದಲ್ಲಿ ಅದರ ಪೂರ್ಣವ್ಯಾಪ್ತಿಯಾದರೆ. ಅಥವಾ ಏಕದೇಶವ್ಯಾಪ್ತಿಯಿದ್ದರೂ ಮಾರನೆದಿನದಲ್ಲ ಉಪಾಕರ್ಮವು. ಪೂರ್ವದಿನದಲ್ಲಿ ಅಪರಾಹ್ಣಪೂರ್ಣ ವ್ಯಾಪ್ತಿಯಿದ್ದರೆ ಪೂರ್ವದಿನವೇ ಗ್ರಾಹ್ಯ. ಏಕೆಂದರೆ ಎಲ್ಲಾ ಸಾಮಕರಿಗೂ ಅಪರಾಹ್ಣಕಾಲವೆ ಉಪಾಕರ್ಮದ ಕಾಲವಾದ್ದರಿಂದ. ಪೂರ್ವದಿನ ಅಪರಾಹ್ಣಕ್ಕೆ ಸ್ವಲ್ಪ ಹಸ್ತವಿದ್ದರೂ ಎರಡುದಿನವೂ ಅಪರಾಹ್ಣದಲ್ಲಿ ನಕ್ಷತ್ರ ವಿಲ್ಲದಿರುವಾಗಲೂ ಮರುದಿನವೇ ಗ್ರಾಹ್ಯವು.

3 ಯಾವ ಸಾಮಕರಿಗೆ ಪ್ರಾತಃಕಾಲ, ಸಂಗಮಕಾಲಗಳು ಕರ್ಮಕ್ಕೆ ಗ್ರಾಹ್ಯವೆಂದು ಹೇಳಿದೆಯೊ. ಅವರು ಹಿಂದಿನ ಅಪರಾಹ್ಣವ್ಯಾಪ್ತಿಯನ್ನು ಬಿಟ್ಟು ಮರುದಿನ ಸಂಗವ ಕಾಲಾನಂತರ ಇರುವ ಹಸ್ತವನ್ನೇ ಹಿಡಿಯಬೇಕು.

4 ಸೂರ್ಯನು ಕರ್ಕಾಟಕನಲ್ಲಿರುವಾಗ ಸಾಮಕರಿಗೆ ಉಪಾಕರ್ಮ ವಿಲ್ಲ. ಸಿಂಹದಲ್ಲಿ ಸೂರ್ಯನಿರುವಾಗ ಶ್ರಾವಣದಲ್ಲಿ ಹಸ್ತನಕ್ಷತ್ರ ಅಥವಾ ಹುಣ್ಣಿಮೆ ಇವರಿಗೆ ಗ್ರಾಹ್ಯ. ಬೇರೆ ಶಾಖೆಯವರಿಗೆ ಸಿಂಹದಲ್ಲಿ ರವಿ ಇರ ಬೇಕೆಂದಾಗಲಿ ಇರಬಾರದೆಂದಾಗಲಿ ವಿಧಿನಿಷೇಧಗಳಿಲ್ಲ.

5 ಸರ್ವರಿಗೂ ಸ್ವಗೃಹ್ಯ ಸೂತ್ರಗಳಲ್ಲಿ ಹೇಳಿದ ಕಾಲದಲ್ಲಿ ಗ್ರಹಣ ಸಂಕ್ರಾಂತಿ ಆಶೌಚಾದಿಗಳು ಬಂದರೆ ಸರ್ವಥಾ ಕರ್ಮಲೋಪವು ಬರುವಲ್ಲಿ ಶಾಖಾಂತರೋಕ್ತವಾದ ಕಾಲವನ್ನು ಅವರು ಹಿಡಿಯಬೇಕು ನರ್ಮದಾ ನದಿಯ ಉತ್ತರಕ್ಕೆ ಸಿಂಹದಲ್ಲಿ ರವಿಯಿದ್ದರೆ ಪಂಚಮಿ, ಪೂರ್ಣಿಮಾದಿಗಳು ಆಪಸ್ತಂಬ, ಬೋಧಾಯನ-ಸಾಮಕಾದಿಗಳಿಗೆ ಗ್ರಾಹ್ಯವಾಗಿವೆ, ನರ್ಮದೆಯ ದಕ್ಷಿಣದೇಶಕ್ಕೆ ಸೂರ್ಯನು ಕರ್ಕಾಟಕದಲ್ಲಿದ್ದರೂ. ಶ್ರಾವಣ ಪಂಚಮ್ಯಾದಿ ತಿಥಿಗಳು ಗ್ರಾಹ್ಯವು. ಇದೆವ್ಯವಸ್ಥೆಯೇ ಋಗ್ವೇದಿಗಳಿಗೂ ಎಂದರಿಯ ಬೇಕು. ಕರ್ಮಲೋಪವೇ ಆಗುವ ಸಂದರ್ಭದಲ್ಲಿ ಇದು.

6 ಎಲ್ಲರಿಗೂ ಪರ್ಜನ್ಯವಿಲ್ಲವೆ ಶ್ರಾವಣದಲ್ಲಿ ಸಸಿಗಳು ಹುಟ್ಟದೆ ಹೋದರೆ ಭಾದ್ರಪದದಲ್ಲಿ ಶ್ರವಣ ನಕ್ಷತ್ರ ಪಂಚಮಿ ಹಸ್ತ ಪೂರ್ಣಿಮೆಗಳು ಅವರವರಿಗೆ ಗ್ರಾಹ್ಯವು.

## ಪ್ರಥಮೋಪಾಕರ್ಮವು ಗುರುಶುಕ್ರಾಸ್ತ್ರಗಳಲ್ಲಿ ವರ್ಜ್ಯ

1 ಹೊಸದಾಗಿ ಉಪನಯನವಾದವರಿಗೆ ಗುರು–ಶುಕ್ರಾಸ್ತಗಳಲ್ಲಿ, ಮಲಮಾಸಾದಿಗಳಲ್ಲೂ, ಗುರುವು ಸಿಂಹದಲ್ಲಿರುವಾಗಲೂ ಪ್ರಥಮೋಪಾ ಕರ್ಮವು ವರ್ಜ್ಯ. ಶ್ರಾವಣಮಾಸದ ಪಂಚಮಿ, ಹಸ್ತ, ಶ್ರವಣನಕ್ಷತ್ರಗಳಿ ರುವ ಕಾಲವಲ್ಲಿ ಗುರುಶುಕ್ರಾಸ್ತಾದಿ ದೋಷದಿಂದ ಈ ಉಪಾಕರ್ಮವು ನಿಂತುಹೋದರೆ **ಭಾದ್ರಪದ ಮಾಸದ ಪಂಚಮಿ, ಶ್ರವಣ, ಹಸ್ತಾದಿ ಗಳನ್ನು ಹಿಡಿಯಬೇಕು.**

2 ಗುರುಶುಕ್ರಾಸ್ತಗಳಿದ್ದರೂ ಎರಡನೆ ಉಪಾಕರ್ಮವನ್ನು ಮಾಡ ಬಹುದು, ಮಲಮಾಸದಲ್ಲಿ ಈದ್ವಿತೀಯಾದಿ ಉಪಾಕರ್ಮವೂ ಸಹವರ್ಜ್ಯವು.

3 ಪ್ರಥಮೋಪಾಕರ್ಮದಲ್ಲಿ ಪುಣ್ಯಾಹ, ನಾಂದೀಶ್ರಾದ್ಧವನ್ನು ಮಾಡಿಯೇ ಇದನ್ನು ಆಚರಿಸಬೇಕು.

4 ಬ್ರಹ್ಮಚಾರಿಯು--ಮೌಂಜೀದಾರ, ಉಪವೀತ, ದಂಡ, ಅಜಿನ, ಕಟಿಸೂತ್ರ, ಹೊಸವಸ್ತ್ರ--ಇವುಗಳನ್ನು ಹೊಸದಾಗಿ ಧರಿಸಬೇಕು. ಇದನ್ನು ಬ್ರಹ್ಮಚಾರಿಯು ಪ್ರತಿವರ್ಷವೂ ಧರಿಸಬೇಕು.

## ಉಪಾಕರ್ಮ, ಉತ್ಸರ್ಜನ ಈ ಎರಡೂ ಬ್ರಹ್ಮಚಾರಿಗಳಿಗೂ ಗೃಹಸ್ಥರಿಗೂ ಎಲ್ಲರಿಗೂ ಆಚರಣೀಯವಾಗಿದೆ

5 ಉತ್ಸರ್ಜನ-ಉಪಾಕರ್ಮಗಳನ್ನು ಉಪಾಕರ್ಮದ ದಿನವೇ ಶಿಷ್ಟರು ಬಹುಜನರು ಆಚರಿಸುವುದು ಸಂಪ್ರದಾಯದಲ್ಲಿ "ಉಪಾಕರ್ಮ ದಿನೇऽಥವಾ" ಎಂಬ ವಚನಾನುಸಾರ ಕಂಡುಬಂದಿದೆ.

6 ಉತ್ಸರ್ಜನವನ್ನು ಬೆಳಿಗ್ಗೆ ಮಾಡಿದ ನಂತರ ಉಪಾಕರ್ಮವನ್ನು ಆಚರಿಸಬೇಕು. ಉತ್ಸರ್ಜನವನ್ನು ಗ್ರಾಮದ ಹೊರಗೆ ನದಿ, ಕೊಳ, ದೇವಾಲಯ ಮುಂತಾದ ಸ್ಥಳದಲ್ಲಿ ಆಚರಿಸಬೇಕು. ಮನೆಯಲ್ಲಿ ಉತ್ಸರ್ಜನವನ್ನು ಮಾಡಬಾರದು.

7 ಉತ್ಸರ್ಜನಾಂಗ ದೇವರ್ಷಿ ಪಿತೃ ತರ್ಪಣಗಳನ್ನು ಸ್ನಾನಮಾಡಿ ಮಾಡಬೇಕು. ಉತ್ಸರ್ಜನವಲ್ಲೇ ಇದನ್ನು ಆಚರಿಸಬೇಕು.

8 ಉತ್ಸರ್ಜನವನ್ನು ಮಾಡಿದ ನಂತರ ಅಪರಾಹ್ಣದಲ್ಲಿ ಉಪಾಕರ್ಮವನ್ನು ಮಾಡಬೇಕು--"ಉಪಾಕರ್ಮಾಪರಾಹ್ಣೇ ಸ್ಯಾತ್, ಉತ್ಸರ್ಗಃ ಪ್ರಾತರೇವಹಿ" ಎಂದು ಹೇಮಾದ್ರಿಯಲ್ಲಿ. ಗೋಭಿಲವಚನವನ್ನು ಉದಾಹರಿಸಿದೆ. (ಆದರೆ ಈಗ ಜನರು, ಅಪರಾಹ್ಣಕ್ಕೂ ಮೊದಲೆ ಆಚರಿಸುವುದು ಅಶಾಸ್ತ್ರೀಯವೆಂತ ತಿಳಿದಿದೆ)

9 ಉಪಾಕರ್ಮ–ಉತ್ಸರ್ಜನ ಈ ಎರಡನ್ನು ಒಬ್ಬನೆ ಮಾಡುವುದಾದರೆ ಗೃಹ್ಯಾಗ್ನಿಯಲ್ಲಿ ಮಾಡಬೇಕು. ಬೇರೆಜನರೊಂದಿಗೆ ಮಾಡುವುದಾದರೆ ಲೌಕಿಕಾಗ್ನಿಯಲ್ಲಿ ಮಾಡಬೇಕು.

10 ಚತುರವತ್ತಿಗಳು ಚತುರವದಾನವನ್ನೂ. ಪಂಚಾವತ್ತಿಗಳು ಜಾಮದಗ್ನ್ಯ ಗೋತ್ರದವನು ಇದ್ದರೆ ಅವರಿಗಾಗಿ ಪಂಚಾವದಾನ ಮಾಡಬೇಕೆಂದು ಹೇಳಿದೆ. ಚತುರವತ್ತಿಗಳಿಗೆ ಪಂಚಾವದಾನ ವೈಕಲ್ಪಿಕ (ಮಾಡಿದರೂ ಮಾಡಬಹುದು, ಬಿಡಲೂ ಬಹುದು)

## ವೈದ್ಯನಾಥೀಯ ಧರ್ಮಶಾಸ್ತ್ರದಲ್ಲಿ ಒಂದು ನಿರ್ಣಯ

ಗುರು ಶುಕ್ರಮೌಢ್ಯೆ ಮಲಮಾಸೇಚ ಪ್ರಥಮೋಪಾಕರಣಂ ನಿಷೇಧತಿ ವೃದ್ಧಮನುಃ

ಗುರುಭಾರ್ಗವಯೋರ್ಮೌಢ್ಯೇ ಮಲಮಾಸೇ ತಥೈವಚ ।
ಪ್ರಥಮೋಪಾಕೃತಿರ್ನಸ್ಯಾತ್ ಕುರ್ಯಾಚ್ಚೇತ್ಸವಿನಶ್ಯತಿ ॥

ಹೀಗೆ ಗುರುಶುಕ್ರಾಸ್ತಕಾಲಗಳಲ್ಲೂ ಮಲಮಾಸದಲ್ಲೂ ಪ್ರಥಮೋಪಾಕರ್ಮವು ಕೂಡದೆಂದು ಆಚರಿಸಿದರೆ ಅವನು ನಾಶವಾಗುತ್ತಾನೆಂದೂ ಹೇಳಿದೆ. ಆದರಿಂದ ಗುರುಶುಕ್ರಾಸ್ತ ಮಲಮಾಸ-ಗಳಲ್ಲಿ ಪ್ರಥಮೋಪಾಕರ್ಮವು ವರ್ಜ್ಯವಾಗಿದೆ. ಆದರೂ ಪ್ರಾಧಾನ್ಯೇನ ವಿಧಾನಾಚ್ಚ ಮನುನಾಧ್ಯಾಯ ಕರ್ಮಣಃ । ಪ್ರಥಮೋಪಾಕೃತಿಶ್ಚಾಪಿ ಕರ್ತವ್ಯೇತ್ಯಾಹ ಗೌತಮಃ ಎಂದು ಗೌತಮರು ಪ್ರಥಮೋಪಾಕರ್ಮವನ್ನು ಮಾಡಬೇಕೆಂದು ಹೇಳಿರುವರು ಅದು ಹೇಗೆ ಅಂದರೆ ಶಾಂತಿ ಮಾಡಿ ಮಾಡಬೇಕು, ಆಗ ದೋಷವಿಲ್ಲ.

ಶಾಂತಿಂಕೃತ್ವಾತಯೋರ್ವಾಪಿ ತಯೋರುದಿತಮಂತ್ರತೈಃ ।
ಕರ್ತವ್ಯಂ ಶ್ರಾವಣಂ ವಿಪ್ರೈರಿತಿ ಜೀವೇನಭಾಷಿತಮ್ ॥

ಅರ್ಥ–ಶ್ರಾವಣ, ಭಾದ್ರಪದ-ಆಷಾಢ ಮಾಸಗಳಲ್ಲಿ ದೋಷವಿಲ್ಲದ ಒಂದುಮಾಸದಲ್ಲಿ. ಪ್ರಥಮೋಪಾಕರ್ಮವನ್ನು ಮಾಡಬೇಕು. ಮೂರು

ಮಾಸಗಳಲ್ಲೂ. ದೋಷವಿದ್ದರೆ ಶ್ರಾವಣಮಾಸದಲ್ಲಿ ಶಾಂತಿಪೂರ್ವಕ ಆಚರಿಸಬೇಕು ಶಾಂತಿಯೂ ಸಹ ಗ್ರಹಯಜ್ಞದಲ್ಲಿ ಹೇಳಿದ ಮಂತ್ರಗಳಿಂದ ಕರ್ತವ್ಯ. ಗುರು, ಶುಕ್ರರಿಗೆ-ಬೃಹಸ್ಪತೇ ಅತಿಯದರ್ಯೋ: ಎಂದೂ, ಶುಕ್ರಂತೇ ಅನ್ಯದ್ಯಜತಂತೇ (ಪ್ರವಃ ಶುಕ್ರಾಯ) ಎಂದೂ. ಮಲಮಾಸವಾಗಿದ್ದರೆ ಸೋಮನಿಗೆ ಆಪ್ಯಾಯಸ್ವ ಎಂದು. ಸೂರ್ಯಗ್ರಹಣ, ಸಂಕ್ರಾಂತಿಗಳಲ್ಲಿ ಚಿತ್ರಂ ದೇವಾನಾಂ ಉದುತ್ಯಂ ಜಾತವೇದಸಂ ಸೂರ್ಯೋದೇವೀಮುಷಸಂ॥ ಆಕೃಷ್ಣೇನರಜಸಾ ದೇವೋವಃ ಸವಿತೋತ್ಪುನಾತು ಎಂದು ಸೂರ್ಯನಿಗೆ. ಚಂದ್ರಗ್ರಹಣವಾದರೆ ಸೋಮೋಧೇನುಂ ಎಂದು ಋಕ್ಕುಗಳಿಂದಲೂ, ನವೋ ನವೋ ಭವತಿ ಎಂದು ಚಂದ್ರನಿಗೆ ಶಾಂತಿಹೋಮವನ್ನು ಮಾಡಿ ಉಪಾಕರ್ಮಾಂಗ ಹೋಮ ಮಾಡಿ ನಂತರ **ಪ್ರಥಮೋಪಾಕರ್ಮವನು** ಮಾಡತಕ್ಕದ್ದೆಂದು ನಿರ್ಣಯ ಮಾಡಿದೆ. ಶಾಂತಿಮಾಡದೆ ಮಾಡಬಾರದು ಅಷ್ಟೆ. ಶಾಖಾಧಿಪತಿಯು ದೋಷಿಯಾಗಿದ್ದರೆ ಮಾಡಕೂಡದೆಂದೂ ಶುಕ್ರನು ಶಕ್ತನಾಗಿದ್ದು ಗುರು ಮೌಢ್ಯವಿದ್ದರೂ ಯಜುರ್ವೇದಿಗಳು ಉಪಾಕರ್ಮ ಮಾಡಬಹುದೆಂದೂ ಗುರುವು ಶಕ್ತನಾಗಿದ್ದಲ್ಲಿ ಶುಕ್ರಮೌಢ್ಯವಿದ್ದರೂ ಋಗ್ವೇದಿಗಳು ಆಚರಿಸಬಹುದೆಂದೂ ಕೆಲವರು ಹೇಳುವರು.

## ಜಯಂತೀ ನಿರ್ಣಯ

1 **ಶ್ರೀರಾಮ ಜಯಂತಿ** ಚೈತ್ರ ಶುದ್ಧ ನವಮಿ ಪುನರ್ವಸು ನಕ್ಷತ್ರದಲ್ಲಿ ಮಧ್ಯಾನ್ಹ ಕರ್ಕಾಟಕಲಗ್ನದಲ್ಲಿ ಗ್ರಹಪಂಚಕಗಳು ಉಚ್ಚಸ್ಥವಾಗಿರುವಾಗ ಸೂರ್ಯನು ಮೇಷದಲ್ಲಿರುವಾಗ ಶ್ರೀರಾಮನು ಹುಟ್ಟಿದ್ದೆಂದು ತಿಳಿದಿದೆ ಈ ದಿನ ಮಧ್ಯಾನ್ಹ ವ್ಯಾಪ್ತಿಯಿದ್ದ ನವಮಿಯಲ್ಲಿ ಉಪವಾಸವನ್ನು ವ್ರತವನ್ನು ಆಚರಿಸಬೇಕು. ಹಿಂದಿನದಿನ ಮಧ್ಯಾನ್ಹದಲ್ಲಿ ನವಮಿಯಿದ್ದರೆ ಪೂರ್ವತಿಥಿಯೇ ಗ್ರಾಹ್ಯ. ಎರಡು ದಿನಗಳಲ್ಲಿ ವ್ಯಾಪ್ತಿಯಿದ್ದರೂ ವ್ಯಾಪ್ತಿಯಿಲ್ಲದಿದ್ದರೂ ಮರುದಿನವೆ ಗ್ರಾಹ್ಯ, ಅಷ್ಟಮೀವೇಧವನ್ನು ನಿಷೇಧಿಸಿರುವುದೇ

ಕಾರಣ ಪೂರ್ವದಿನವಲ್ಲಿ ಮಧ್ಯಾಹ್ನವೆಲ್ಲಾ ವ್ಯಾಪ್ತಿಯಿದ್ದರೂ ಅದನ್ನು ಬಿಟ್ಟು ಮಾರನೇ ದಿನವೇ ಮಧ್ಯಾಹ್ನ ಏಕದೇಶವ್ಯಾಪ್ತಿಯಿದ್ದರೂ ಗ್ರಾಹ್ಯ.

2 ಅಷ್ಟಮೀವೇಧವಿದ್ದು ಪುನರ್ವಸು ನಕ್ಷತ್ರವಿದ್ದದ್ದನ್ನು ಬಿಟ್ಟು ಮಾರನೆ ದಿನ 2 ಮುಹೂರ್ತವಿದ್ದ ನವಮಿಯೇ ಗ್ರಾಹ್ಯವೆಂದು ಕೆಲವರು, ದಶಮಿಯು ಕಮ್ಮಿಯಾಗಿದ್ದು ಪಾರಣೆದಿನ ಸ್ಮಾರ್ತರಿಗೆ ಏಕಾದಶೀ ವ್ರತ ಬಂದರೆ ಅಷ್ಟಮಿವೇಧವಿದ್ದ ನವಮಿಯೇ ಉಪವಾಸಕ್ಕೆ ಗ್ರಾಹ್ಯ. ವೈಷ್ಣವರು ಮರುದಿನವನ್ನೇ ಹಿಡಿಯಬೇಕು.

**ಪರಶುರಾಮ ಜಯಂತಿ –** ಅಕ್ಷಯತೃತೀಯಾ ವೈಶಾಖಶುದ್ಧ ತೃತೀಯೆ, (ತದಿಗೆ) ರಾತ್ರಿಯ ಪ್ರಥಮ ಯಾಮಕ್ಕೂ ವ್ಯಾಪಿಸಿದ್ದರೆ ಪೂರ್ವದಿನ, ಎರಡುದಿನಗಳು ರಾತ್ರಿ ಪ್ರಥಮ ಯಾಮಕ್ಕೆ ವ್ಯಾಪಿಸಿದ್ದರೆ, ಸಮ ಅಥವಾ ವಿಷಮ ಏಕದೇಶ ವ್ಯಾಪ್ತಿಯಿದ್ದರೂ ಮರುದಿನವೇ ಗ್ರಾಹ್ಯ. ಪ್ರದೋಷ ಕಾಲದಲ್ಲಿ ಪರಶುರಾಮನ ಪೂಜೆಮಾಡಿ ಅರ್ಘ್ಯದಾನ ಮಾಡಬೇಕು.

**ನೃಸಿಂಹ ಜಯಂತಿ –** ವೈಶಾಖಶುದ್ಧ ಚತುರ್ದಶಿ ನೃಸಿಂಹ ಜಯಂತಿ.

1 ಸೂರ್ಯಾಸ್ತವಾಗುವ ಕಾಲದಲ್ಲಿ ಅದು ವ್ಯಾಪಿಸಿರಬೇಕು. ಎರಡು ದಿನ ವ್ಯಾಪ್ತಿಯಿರಲಿ ಇಲ್ಲದಿರಲಿ ಮುಂದಿನ ತಿಥಿಯೇ ಗ್ರಾಹ್ಯ.

2 ಸ್ವಾತೀನಕ್ಷತ್ರ, ಶನಿವಾರ ಮುಂತಾದ ಯೋಗವಿದ್ದಲ್ಲಿ ಪ್ರಶಸ್ತತಮ.

3 ತ್ರಯೋದಶಿ ದಿನ ಏಕಭೋಜನಮಾಡಿ ಚತುರ್ದಶಿಯಲ್ಲಿ ಮಧ್ಯಾಹ್ನ ತಿಲಾಮಲಕಗಳೊಡನೆ ಸ್ನಾನಮಾಡಿ ಉಪವಾಸವ್ರತವನ್ನು ಕೈಗೊಂಡು ಚತುರ್ದಶೀ ತಿಥಿಯ ಕೊನೆಯಲ್ಲಿ ಪಾರಣೆ ಮಾಡಬೇಕು. ಚತುರ್ದಶಿ ಸಾಯಂಕಾಲ ಕಲಶದಲ್ಲಿ ಪ್ರತಿಮೆಯಿಟ್ಟು ಆವಾಹನೆ ಮಾಡಿ ಷೋಡಶೋಪಚಾರ ಪೂಜೆ ಮಾಡಿ ಅರ್ಘ್ಯವನ್ನು ಕೊಡಬೇಕು.

ಅರ್ಘ್ಯದಾನ ಮಂತ್ರ — ಪರಿತ್ರಾಣಾಯ ಸಾಧೂನಾಂ ಜಾತೋವಿಷ್ಣೋ ನೃಕೇಸರಿ ಗೃಹಾಣಾರ್ಘ್ಯಂ ಮಯೋದತ್ತಂ ಸಲಕ್ಷ್ಮೀ ನೃಹರಿಃಸ್ವಯಂ

## ಸಂನ್ಯಾಸಿಗಳಿಗೆ ಹೇಳಿದ ಚಾತುರ್ಮಾಸ್ಯ

1 ಚಾತುರ್ಮಾಸ್ಯ ಸಂಕಲ್ಪಕ್ಕೆ ಅಂಗವಾಗಿ ಕ್ಷೌರ, ವ್ಯಾಸಪೂಜೆ ಮೊದಲಾದವು ಯತಿಗಳಿಗೆ ವಿಹಿತವಾಗಿವೆ. ಆಷಾಢಮಾಸದ ಪೂರ್ಣಿಮೆ ದಿನ ಈ ಸಂಕಲ್ಪ ಮಾಡಬೇಕು. ಇದಕ್ಕೆ ಉದಯದಲ್ಲಿ ಮೂರು ಮುಹೂರ್ತ ಕಾಲವಿರುವ ಪೂರ್ಣಿಮೆಯು ಗ್ರಾಹ್ಯ.

2 ಚಾತುರ್ಮಾಸ್ಯ ಮಧ್ಯದಲ್ಲಿ ಯತಿಯು ಕ್ಷೌರಮಾಡಿಸಿಕೊಳ್ಳ ಬಾರದು. ಆಷಾಢಶುದ್ಧ ಪೂರ್ಣಿಮೆಯಿಂದ ನಾಲ್ಕು ತಿಂಗಳು, ಅಥವಾ ಎರಡು ತಿಂಗಳು ಒಂದೇ ಸ್ಥಳದಲ್ಲಿ ವಾಸಮಾಡಬೇಕು. ವಚನವಿದೆ

ಚಾತುರ್ಮಾಸ್ಯಸ್ಯ ಮಧ್ಯೇತು ವಪನಂ ವರ್ಜಯೇದ್ಯತಿಃ ।
ಚತುರ್ಮಾಸಂ ದ್ವಿಮಾಸಂವಾ ಸದೈಕತ್ರ ಸಂವಸೇತ್ ॥

3 ಮೊದಲು ಕ್ಷೌರವನ್ನು ಮಾಡಿಸಿಕೊಂಡು ದ್ವಾದಶಮೃತ್ತಿಕಾ ಸ್ನಾನಗಳನ್ನು ಮಾಡಿ, ಪ್ರಾಣಾಯಾಮಾದಿ ವಿಧಿಯನ್ನು ಮಾಡಿ ವ್ಯಾಸ ಪೂಜೆಯನ್ನು ಆಚರಿಸಬೇಕು.

## ಆದರವಿಧಿಯ ಸಂಕ್ಷೇಪ

ದೇಶಕಾಲೌ ಸಂಕೀರ್ತ್ಯ, ಚಾತುರ್ಮಾಸ್ಯವಾಸ ಸಂಕಲ್ಪಂ ಕರ್ತುಂ ಶ್ರೀಕೃಷ್ಣ-ವೇದವ್ಯಾಸ-ಭಾಷ್ಯಕಾರಾಣಾಂ ಸಪರಿವಾರಾಣಾಂ ಪೂಜನಂ ಕರಿಷ್ಯೆ ಎಂದು ಸಂಕಲ್ಪಮಾಡಿ ಆವಾಹನೆ ಮಾಡಬೇಕು.

**ಶ್ರೀಕೃಷ್ಣಪಂಚಕಂ** — ಮಧ್ಯೆ ಶ್ರೀಕೃಷ್ಣಂ ಪೂರ್ವತಃ ಪ್ರಾದಕ್ಷಿಣ್ಯೇನ ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧಾನ್ ಚತುರ್ದಿಕ್ಷು ಆವಾಹ್ಯ ಶ್ರೀಕೃಷ್ಣಸ್ಯ ದಕ್ಷಿಣಭಾಗೆ-

**ಶ್ರೀವ್ಯಾಸಪಂಚಕಂ**–ಶ್ರೀವೇದವ್ಯಾಸಂ ಮಧ್ಯೇ–ಪೂರ್ವಾದಿದಿಕ್ಷುಸುಮಂತು ಜೈಮಿನಿ ವೈಶಂಪಾಯನ –ಪೈಲಾನ್ –ಇತಿ ಆವಾಹ್ಯ.

**ಶ್ರೀಕೃಷ್ಣಪಂಚಕಸ್ಯ** — ವಾಮಭಾಗೇ –ಶ್ರೀಭಾಷ್ಯಕಾರಂ – ಶಂಕರಾಚಾರ್ಯಂ —ತಸ್ಯಪೂರ್ವಾದಿದಿಕ್ಷು—ಪದ್ಮಪಾದ—ವಿಶ್ವರೂಪ – ತೋಟಕ —ಹಸ್ತಾಮಲಕಾಚಾರ್ಯಾನ್ ಆವಾಹ್ಯ.

ಶ್ರೀಕೃಷ್ಣಪಂಚಕೇ –ಕೃಷ್ಣಸ್ಯ ಪಾರ್ಶ್ವಯೋಃ ಬ್ರಹ್ಮರುದ್ರೌ, ಪೂರ್ವಾದಿ ಚತುರ್ದಿಕ್ಷು ಸನಕ ಸನಂದನಾದೀನ್, ಆವಾಹ್ಯ ಶ್ರೀಕೃಷ್ಣಪಂಚಕಸ್ಯ ಪುರತಃ ಗುರು—ಪರಮಗುರು –ಪರಮೇಷ್ಠಿಗುರೂನ್, ಪದ್ಮಭುವಂ (ಬ್ರಹ್ಮಾಣಂ) ವಸಿಷ್ಠ – ಶಕ್ತಿ ಪರಾಶರ ವ್ಯಾಸ –ಶುಕ – ಗೌಡಪಾದ – ಗೋವಿಂದ ಭಗವತ್ಪಾದ-ಶಂಕರಾಚಾರ್ಯಾನ್ ಆವಾಹ್ಯ. —ಪಂಚಕತ್ರಯಸ್ಯ ಆಗ್ನೇಯ ದಿಶಿ ಗಣೇಶಂ, ಈಶಾನ್ಯೇ ಕ್ಷೇತ್ರಪಾಲಂ। ವಾಯವ್ಯೇ ದುರ್ಗಾಂ। ನೈಋತ್ಯೇ ಸರಸ್ವತೀಂ–ಪ್ರಾಚ್ಯಾದಿಷು ಇಂದ್ರಾದಿ ಲೋಕಪಾಲಾನ್ ಆವಾಹ್ಯ ಜಪ ಜ ಯೇತ್ ನಾರಾಯಣಾಷ್ಟಾಕ್ಷರಿಮಂತ್ರೇಣ ಶ್ರೀಕೃಷ್ಣ ಪೂಜಾ(ಅಥವಾ ದ್ವಾದಶಾಕ್ಷರೀ ಮಂತ್ರೇಣ) ಅನ್ಯೇಷಾಂ ಪ್ರಣವಾದಿ ನಮೋಂತೈಃ ನಾಮಮಂತ್ರೈಃ ತೈಸ್ತೈಃ ಪೂಜಾಕಾರ್ಯಾ—ಪೂಜಾಂತೇ—

ಅಸತಿ ಪ್ರತಿಬಂಧೇ ಚತುರೋ ವಾರ್ಷಿಕಾನ್ ಮಾಸಾನ್ ಇಹ ವಸಾಮಿ ಇತಿ ಸಂಕಲ್ಪ್ಯ

ಅಹಂ ತಾವನ್ನಿವತ್ಸ್ಯಾಮಿ ಸರ್ವಭೂತಹಿತಾಯ ವೈ।
ಪ್ರಾಯೇಣ ಪ್ರಾವೃಷಿ ಪ್ರಾಣಿಸಂಕುಲಂ ವರ್ತ್ಮದೃಶ್ಯತೇ॥

ಅತಸ್ತೇಷಾ ಮಹಿಂಸಾರ್ಥಂ ಪಕ್ಷಾನ್ವೈ ಶ್ರುತಿಸಂಶ್ರಯಾನ್ ।
ಸ್ಥಾಸ್ಯಾಮಶ್ಚತುರೋ ಮಾಸಾನ್ ಅತ್ರೈವಾಸತಿಬಾಧಕೇ ॥

ಇತಿ ವಾಚಾ ಸಂಕಲ್ಪಂಕುರ್ಯಾತ್ ।

ಗೃಹಸ್ಥರು ಪ್ರತಿಯಾಗಿ ಹೇಳಬೇಕು ತತೋ ಗೃಹಸ್ಥಾಃ-ಪ್ರತಿಬ್ರೂಯುಃ
ನಿವಸಂತು ಸುಖೇನಾತ್ರ ಗಮಿಷ್ಯಾಮಃ ಕೃತಾರ್ಥತಾಂ ।
ಯಥಾಶಕ್ತಿಚ ಶುಶ್ರೂಷಾಂ ಕರಿಷ್ಯಾಮೋವಯಂ ಮುದಾ ॥ ಇತಿ
ತತೋ ವೃದ್ಧಾನುಕ್ರಮೇಣಯತೀನ್ ಗೃಹಸ್ಥಾಯತಯಶ್ಚ
ನಮಸ್ಕುರ್ಯುಃ ॥

ಈ ವಿಧಿಯು ಪೂರ್ಣಿಮೆಯಲ್ಲಿ ಆಗದಿದ್ದರೆ ದ್ವಾದಶೀದಿನದಲ್ಲಿ ಆಗಬಹುದು.

## ಕೃಷ್ಣಜನ್ಮಾಷ್ಟಮೀ-ಜಯಂತೀ ನಿರ್ಣಯ

1 ಶ್ರಾವಣ ಬಹುಳದಲ್ಲಿ ಶ್ರೀಕೃಷ್ಣಜನ್ಮಾಷ್ಟಮಿಯು ಬರುವುದು. ಇದು ಶುದ್ಧ, ವಿದ್ಧ ಎಂದು ಎರಡು ಬಗೆ. ಶುದ್ಧವೆಂದರೆ ಅಷ್ಟಮಿಯು ಸಪ್ತಮೀತಿಥಿ ಸಂಬಂಧವಿಲ್ಲದೆ ಹಗಲು ರಾತ್ರಿ ಪೂರ್ಣವಾಗಿದ್ದರೆ ಅದು ಶುದ್ಧ. ಸಪ್ತಮೀ ಸಂಬಂಧವಿದ್ದರೆ ವಿದ್ಧಾ ಎಂದು ಹೇಳುವುದು. ಅಲ್ಲದೆ ರೋಹಿಣೀನಕ್ಷತ್ರವಿಲ್ಲದ್ದು. ರೋಹಿಣೀನಕ್ಷತ್ರವಿರುವುದೆಂದೂ ಎರಡು ಬಗೆಯಿದೆ. ಶುದ್ಧಾಷ್ಟಮಿಯು ಸಮವಾಗಿರಲಿ ನ್ಯೂನವಾಗಿರಲಿ ವಿದ್ಧತಿಥಿಯೂ ಹೇಗೆ ಇರಲಿ, ಕೇವಲಾಷ್ಟಮಿಯೆ ಜನ್ಮಾಷ್ಟಮಿಯೆಂಬುದರಲ್ಲಿ ಸಂಶಯವಿಲ್ಲ. ಶುದ್ಧವು ಅಧಿಕವಾಗಿದ್ದರೂ ಕೇವಲಾಷ್ಟಮಿಯು ಹಿಂದಿನದ್ದೇ ಆಗುವುದು, ವಿದ್ಧತಿಥಿಯು ಅಧಿಕವಾಗಿದ್ದು ಪೂರ್ವದಿನದಲ್ಲೆ ನಿಶೀಥಕ್ಕೆ ವ್ಯಾಪಿಸಿದ್ದರೆ ಪೂರ್ವತಿಥಿಯೆ ಕೃಷ್ಣಜನ್ಮಾಷ್ಟಮಿಯೆಂದು ಅರಿಯಬೇಕು.

2 ದಿನದ್ವಯದಲ್ಲೂ ನಿಶೀಥಕ್ಕೆ ವ್ಯಾಪ್ತಿಯಿರಲಿ, ಇಲ್ಲದಿರಲಿ ಮರುದಿನವೇ ಗ್ರಾಹ್ಯ, ರೋಹಿಣಿನಕ್ಷತ್ರವಿರಬೇಕೆಂಬುದರಲ್ಲಿ ಸಂದೇಹವಿಲ್ಲ. ಶುದ್ಧ ತಿಥಿಯು ಅಧಿಕವಾಗಿದ್ದು ಪೂರ್ವದಿನದಲ್ಲೂ, ದಿನದ್ವಯದಲ್ಲೂ ರೋಹಿಣೀ ನಕ್ಷತ್ರಯೋಗವಿದ್ದರೆ ಪೂರ್ವದಿನದಲ್ಲೆ ಜನ್ಮಾಷ್ಟಮಿಯು. ಇದರಲ್ಲಿ ಮೂರನೆ ದಿನವೆ ರೋಹಿಣಿಯಿದ್ದು ಒಂದು ಮುಹೂರ್ತವಿದ್ದರೂ ಮರುದಿನವೇ ಗ್ರಾಹ್ಯ.

3 ವಿದ್ಧತಿಥಿಯು ಅಧಿಕವಾಗಿದ್ದು ಪೂರ್ವದಿನದಲ್ಲಿ ನಿಶೀಥಕ್ಕೆ ಮೊದಲೊ, ಅಥವಾ ನಿಶೀಥದಲ್ಲೊ ರೋಹಿಣಿಯಿದ್ದರೆ ಪೂರ್ವದಿನವೇ ಗ್ರಾಹ್ಯ.

4 ದಿನದ್ವಯದಲ್ಲೂ ಇದ್ದರೆ ಮರುದಿನವೇ ನಿಶೀಥದಲ್ಲೂ, ನಿಶೀಥ ದಲ್ಲಿರದೆ ನಂತರ ರೋಹಿಣಿಯಿದ್ದರೂ, ಮರುದಿನವೆ ಜನ್ಮಾಷ್ಟಮಿಯೆಂದು ಅರಿಯಬೇಕು.

5 ಕೆಲವರು ಕೇವಲಾಷ್ಟಮಿಯೇ ಜನ್ಮಾಷ್ಟಮಿಯೆಂದೂ ಅದೇ ರೋಹಿಣಿಯುಕ್ತವಾಗಿದ್ದರೆ ಜಯಂತಿಯೆಂದೂ ಹೇಳಿ, ಜಯಂತಿ ಅಷ್ಟಮಿ ಈ ಎರಡರ ವ್ರತವು ಒಂದೇ ಎಂದು ಹೇಳುವರು.

6 ಕೆಲವರು ಜನ್ಮಾಷ್ಟಮೀ ವ್ರತವನ್ನು ಜಯಂತಿ ವ್ರತವನ್ನು ಬೇರೆ ಯಾಗಿದೆ ಎಂದು ಹೇಳಿ, ರೋಹಿಣೀ ನಕ್ಷತ್ರವಿಲ್ಲದೆ ಹೋದರೆ ಜಯಂತೀವ್ರತ ಲೋಪವಾಗುವುದರಿಂದ, ಜನ್ಮಾಷ್ಟಮೀ ವ್ರತವನ್ನೆ ಆಚರಿಸಬೇಕೆಂದು ಹೇಳುವರು.

7 ಯಾವ ವರ್ಷದಲ್ಲಿ ಜಯಂತೀಯೋಗವು ಇದ್ದು ಜನ್ಮಾಷ್ಟಮಿ ಯು ಬರುವುದೊ ಆ ವರ್ಷ ಜಯಂತಿಯಲ್ಲಿ ಜನ್ಮಾಷ್ಟಮಿಯು ಒಳಸೇರು ವುದು. ಜಯಂತಿ ದಿನದಲ್ಲಿ ನಿಶೀಥದಲ್ಲಿ ಅಷ್ಟಮಿಯಿಲ್ಲದೆಯೂ ಕರ್ಮ ಕಾಲದ ವ್ಯಾಪ್ತಿಯನ್ನೆ ಹಿಡಿದು ಒಂದೆ ದಿನದಲ್ಲಿ ಜನ್ಮಾಷ್ಟಮೀ ವ್ರತವನು ಸೇರಿಸಿ ತಂತ್ರೇಣ ಕರಿಷ್ಯೆ ಎಂದು ಸಂಕಲ್ಪಿಸಿ ಆಚರಿಸಬೇಕು.

8 ಎರಡು ವ್ರತಗಳನ್ನೂ ಆಚರಿಸದಿದ್ದರೆ ಮಹಾ ದೋಷವಿರು ವುದರಿಂದ್ಕ ಅವಶ್ಯ ಕರ್ತವ್ಯವಾಗಿದೆ. ಇದೊಂದು ನಿತ್ಯಕರ್ಮ, ಫಲಶ್ರುತಿ ಯಂತೆ ಕಾಮ್ಯವೂ ಆಹುದು.

9 ಈ ಪಕ್ಷದಲ್ಲಿ ನಿಶೀಥದಲ್ಲಿ ವ್ಯಾಪ್ತಿಯಿರುವ ಪೂರ್ವಾಷ್ಟಮಿ ಯಲ್ಲಿ ಅಷ್ಟಮೀವ್ರತ ಮಾಡಿ ಜಯಂತಿ ದಿನದಲ್ಲಿ ಪಾರಣೆ ಮಾಡುವುದು ಯುಕ್ತವಲ್ಲ. ನಿತ್ಯವ್ರತಲೋಪವಾದರೆ ಪಾಪವು ಬರುವುದು.

10 ನಿರ್ಣಯಸಿಂಧುವಿನಲ್ಲಿ ಹೇಮಾದ್ರಿ ಮತಾನುಸಾರವಾಗಿ ಜನ್ಮಾಷ್ಟಮೀ ವ್ರತವೇ ನಿತ್ಯವೆಂದು ಹೇಳಿದೆ. ಸ್ವಪಕ್ಷದಲ್ಲಿ ಅಲ್ಲದೆ ಯಾವ ವರ್ಷ ಪೂರ್ವದಿನದಲ್ಲೇ ನಿಶೀಥದಲ್ಲಿ ಅಷ್ಟಮಿ ವ್ಯಾಪಿಸಿರುವುದೋ ಪರದಿನದಲ್ಲಿ ನಿಶೀಥ ಕಳೆದ ನಂತರ ಜಯಂತಿಯಿರುವುದೋ ಆ ವರ್ಷ ಎರಡು ಉಪವಾಸಗಳನ್ನು ಆಚರಿಸಬೇಕು. ಎರಡೂ ನಿತ್ಯವೆಂದು ಇವರ ಅಭಿಪ್ರಾಯ.

11 ಧರ್ಮಸಿಂಧುಕಾರನು – ಕೌಸ್ತುಭಾನುಸಾರ ಮಾಧವಮತದಂತೆ ಜಯಂತಿಯನ್ನು ಒಳಸೇರಿಸಿ ಅಷ್ಟಮೀವ್ರತಾನುಷ್ಠಾನವೇ ಯುಕ್ತವೆಂದು ಹೇಳಿರುವನು. ಆಯಾಯಾ ದೇಶದ ಶಿಷ್ಟಾಚಾರವಿರುವಂತೆ ಮಾಡುವುದು ಸೂಕ್ತ.

## ಪಾರಣೆಯ ಕಾಲ

1 ಕೇವಲ ಅಷ್ಟಮೀತಿಥಿಯ ನಿಮಿತ್ತದಿಂದ ವ್ರತವನ್ನು ಅದರ ಅಂಗಉಪವಾಸ ಮಾಡಿದ್ದರೆ ತಿಥಿಯು ಕಳೆದೊಡನೆ ಪಾರಣೆ ಮಾಡಬೇಕು.

2 ರೋಹಿಣೀ ನಕ್ಷತ್ರವಿದ್ದ ತಿಥಿಯಲ್ಲಿ ಉಪವಾಸವಿದ್ದರೆ ತಿಥಿಯೂ ನಕ್ಷತ್ರವೂ ಎರಡೂ ಕಳೆದನಂತರ ಪಾರಣೆ ಮಾಡಬೇಕು.

3 ತಿಥಿ, ನಕ್ಷತ್ರಗಳಲ್ಲಿ ಯಾವುದೋ ಒಂದು ಮಾತ್ರ ಕಳೆದಿರುವುದು ಹಗಲಲ್ಲಿ ಕಂಡರೆ, ಎರಡೂ ಕಳೆಯುವುದು ರಾತ್ರಿಯಲ್ಲಿ ಆದರೆ ಹಗಲೇ ಪಾರಣೆ ಮಾಡಬೇಕು.

4 ಯಾವಾಗ ಹಗಲಿನಲ್ಲಿ ತಿಥಿಯಾಗಲಿ ನಕ್ಷತ್ರವಾಗಲಿ ಕೊನೆ ಮುಟ್ಟಿಲ್ಲದಿದ್ದರೆ ನಿಶೀಥಕ್ಕೆ ಮುಂಚೆಯೇ ಯಾವುದಾದರೊಂದು ಮುಗಿದಾಗ ಪಾರಣೆ ಮಾಡಬೇಕು. ನಿಶೀಥಕ್ಕೆ ಮುಂಚೆ ಪೂರ್ವಕ್ಷಣದಲ್ಲಿ ಯಾವುದಾದರೂ ಮುಗಿದಲ್ಲಿ, ಎರಡೂ ಮುಗಿದಲ್ಲಿ ನಿಶೀಥದಲ್ಲೂ ಪಾರಣೆ ಮಾಡಬಹುದು. ಭೋಜನವು ಸಂಭವಿಸದೆ ಇದ್ದರೆ ಫಲಾಹಾರ ಮಾಡಬೇಕು. **ಅಶಕ್ತರಾದವರು,** ತಿಥಿಯಾಗಲಿ ನಕ್ಷತ್ರವಾಗಲಿ ಮುಗಿಯದಿದ್ದಲ್ಲಿ ಉತ್ಸ

ವವು ಮುಗಿದ ಮೇಲೆ ಬೆಳಿಗ್ಗೆ ದೇವರ ಪೂಜೆ, ವಿಸರ್ಜನೆ ಮಾಡಿ ಪಾರಣೆ ಮಾಡಬಹುದು. (ಪೂಜಾವಿಧಿಯನ್ನು ವ್ರತಚೂಡಾಮಣಿ ಮುಂತಾದವುಗಳನ್ನು ಕಂಡು ಆಚರಿಸಬೇಕು).

## ವಾಮನ ಜಯಂತೀ ಕಾಲ ನಿರ್ಣಯ

1 ಭಾದ್ರಪದ ಶುದ್ಧ ದ್ವಾದಶಿಯಲ್ಲಿ ಶ್ರವಣ ನಕ್ಷತ್ರವಿದ್ದಾಗ ಮಧ್ಯಾಹ್ನ ವಾಮನಾವತಾರ ಆದದ್ದು, ಆದರಿಂದ ಮಧ್ಯಾಹ್ನ ವ್ಯಾಪ್ತಿಯಿರುವ ದ್ವಾದಶಿಯೆ ಗ್ರಾಹ್ಯ, ಅದೂಸಹ ಶ್ರವಣನಕ್ಷತ್ರಯುಕ್ತವಾಗಿರಬೇಕು.

2 ಎರಡು ದಿನಗಳಲ್ಲಿ ಶ್ರವಣವಿದ್ದರೆ ಪೂರ್ವತಿಥಿಯೇ ಗ್ರಾಹ್ಯ.

3 ದ್ವಾದಶಿಯಲ್ಲಿ ಶ್ರವಣವಿಲ್ಲದೆ ಹೋದರೆ ಏಕಾದಶಿಯಲ್ಲೇ ಶ್ರವಣವಿದ್ದರೆ ದ್ವಾದಶಿಯನ್ನು ಬಿಟ್ಟು ಏಕಾದಶಿಯಲ್ಲೆ ಜಯಂತಿಯನ್ನು ಆಚರಿಸಬೇಕು.

4 ಶುದ್ಧೈಕಾದಶಿಯಲ್ಲಿ ಶ್ರವಣನಕ್ಷತ್ರವಿಲ್ಲದಿದ್ದರೂ, ದಶಮೀವೇಧವಿರುವ ಏಕಾದಶಿಯಲ್ಲೇ ಶ್ರವಣವಿದ್ದರೆ ಈ ತಿಥಿಯಲ್ಲೇ ವ್ರತವು ಕರ್ತವ್ಯ.

5 ಪೂರ್ವದಿನದಲ್ಲೆ ಮಧ್ಯಾಹ್ನವ್ಯಾಪ್ತಿಯಾದ ದ್ವಾದಶಿಯು ಇದ್ದು ಮರುದಿನ ಮಧ್ಯಾಹ್ನ ಬಿಟ್ಟು ಬೇರೆ ಕಾಲದಲ್ಲಿ ಶ್ರವಣವಿದ್ದರೆ ಪೂರ್ವತಿಥಿಯೇ ಗ್ರಾಹ್ಯ.

6 ಎರಡು ದಿನಗಳಲ್ಲೂ ಶ್ರವಣವಿಲ್ಲದೆ ಹೋದರೆ, ಮಧ್ಯಾಹ್ನವ್ಯಾಪ್ತಿಯಾದ ದ್ವಾದಶಿಯಲ್ಲೆ ವ್ರತವು. ದಿನದ್ವಯದಲ್ಲಿ ಮಧ್ಯಾಹ್ನವ್ಯಾಪ್ತಿಯಿರಲಿ, ಇಲ್ಲದಿರಲಿ, ಆವಾಗ ಏಕಾದಶೀಯುಕ್ತವಾದ ದ್ವಾದಶಿಯೆ ಗ್ರಾಹ್ಯ. ಪಾರಣೆಯು ಹಿಂದೆ ಹೇಳಿದಂತೆ. ಮಧ್ಯಾಹ್ನ ಸ್ನಾನಮಾಡಿ ವಾಮನ ಪೂಜೆ ಮಾಡಿ ಅರ್ಘ್ಯಕೊಡಬೇಕು.

## ಶರನ್ನವರಾತ್ರ ನಿರ್ಣಯ

1 ಆಶ್ವಯುಜ ಮಾಸದ ಶುದ್ಧ ಪ್ರತಿಪತ್ತಿನಿಂದ ಆರಂಭಿಸಿ ಮಹಾ ನವಮೀ ಪರ್ಯಂತ ಆಚರಿಸುವ ಕರ್ಮಕ್ಕೆ ನವರಾತ್ರವೆಂದು ಹೆಸರು. ಇದರಲ್ಲಿ ಪೂಜೆಯೇಪ್ರಧಾನ, ಉಪವಾಸ-ಸ್ತೋತ್ರ-ಜಪಾದಿಗಳು ಅಂಗ, ಕುಲಾಚಾರವಿದ್ದಂತೆ, ಉಪವಾಸ, ಏಕಭುಕ್ತ-ನಕ್ತ ಮೊದಲಾದವುಗಳಲ್ಲಿ ಒಂದನ್ನು ಆಚರಿಸುವುದು. ಸಪ್ತಶತೀ, ಲಕ್ಷ್ಮೀಹೃದಯಾದಿ ಸ್ತೋತ್ರ - ಜಪ ಮೊದಲಾದವುಗಳನ್ನು ಒಂಭತ್ತು ದಿನವೂ ಆಚರಿಸುವುದೇ ನವರಾತ್ರ.

ದೇವೀಪೂಜೆಯೇ ಪ್ರಧಾನವಾದ್ದರಿಂದ ಅನೇಕ ಕುಲಗಳಲ್ಲಿ ಸ್ತೋತ್ರ ಜಪಾದಿಗಳು, ಉಪವಾಸಾದಿಗಳು ಕಾಣುವುದಿಲ್ಲ.

2 ಈ ನವರಾತ್ರಾರಂಭವು ಸೂರ್ಯೋದಯವಾಗಿ 3 ಮುಹೂರ್ತ ಕಾಲ ವ್ಯಾಪಿಸಿದ ಪ್ರತಿಪತ್ತಿನಲ್ಲಿ ಕರ್ತವ್ಯವಾಗಿದೆ. ಅದಿಲ್ಲವಾದರೆ 2 ಮುಹೂರ್ತ ವ್ಯಾಪಿಸಿದ ಅಥವಾ 1 ಮುಹೂರ್ತ ವ್ಯಾಪಿಸಿದ ಪ್ರತಿಪತ್ತಿನಲ್ಲೂ ಆರಂಭಿಸಬಹುದು, ಆದರೆ ಅಮಾವಾಸ್ಯೆ ಸಂಬಂಧವಿರುವ ಪ್ರತಿಪತ್ತಿನಲ್ಲಿ ಆರಂಭಿಸಬಾರದು. ಇದು ಬಹುಗ್ರಂಥ ಸಮ್ಮತವಾಗಿದೆ.

3 ಆದರೂ ೧ ಮುಹೂರ್ತಕ್ಕೂ ಕಡಿಮೆಯಿದ್ದು ಸೂರ್ಯೋದಯಕ್ಕೂ ಮುಟ್ಟದ ಪ್ರತಿಪತ್ತು ಅಮಾವಾಸ್ಯೆ ವೇಧವಿದ್ದರೂ ಗ್ರಾಹ್ಯವೆಂದು ಧರ್ಮಸಿಂಧು ಹೇಳುತ್ತದೆ. ಮೊದಲನೆ ದಿನ ೬೦ಘಳಿಗೆ ಪ್ರತಿಪತ್ತು ೨ನೆ ದಿನ ೨೩ ಮುಹೂರ್ತ ಪರಿಮಿತವಾಗಿದ್ದರೆ ಪೂರ್ವತಿಥಿಯೇ ಗ್ರಾಹ್ಯ. ದ್ವಿತೀಯಾ ತಿಥಿವೇಧ ಕೂಡದೆಂದು ಹೇಳುವರು.

4 ಸೂರ್ಯೋದಯವಾದ ಮೇಲೆ ೧೦ಘಳಿಗೆ ನಡುವೆ ಆರಂಭವಾಗಬೇಕು, ಆಗದಿದ್ದರೆ ಅಭಿಜಿನ್ಮುಹೂರ್ತದಲ್ಲಿ ಆರಂಭವಾಗಬಹುದು. ಅಪರಾಣ್ಹದಲ್ಲಿ ಆರಂಭಕೂಡದು. ಪ್ರತಿಪತ್ತಿನಲ್ಲಿ ಮೊದಲಿನ ಹದಿನಾರು ಘಳಿಗೆ

ಕೂಡದು. ವೈಧೃತಿ, ಚಿತ್ತೆ ಮುಂತಾದವು ಇರುವ ಕಾಲ ನಿಷೇಧವಿದ್ದರೂ ಪ್ರತಿಪತ್ತನ್ನು ಮೀರಬಾರದು.

5 ಈ ನವರಾತ್ರಿಯ ಪೂಜಾಧಿಕಾರವು —ನಾಲ್ಕು ವರ್ಣದವರಿಗೂ ಇವೆ ಬ್ರಾಹ್ಮಣರು ಜಪ. ಹೋಮ, ನೈವೇದ್ಯ, ಬಲಿದಾನ ಇವುಗಳನ್ನು ಸಾತ್ವಿಕ ವಿಧಿಯಿಂದಲೇ ಆಚರಿಸಬೇಕು. ಮದ್ಯ ಮಾಂಸಾದಿಗಳನ್ನು ಉಪಯೋಗಿಸಕೂಡದು.

6 ಮದ್ಯ ಮಾಂಸಗಳನ್ನು ಉಪಯೋಗಿಸಿದರೆ ಬ್ರಾಹ್ಮಣ್ಯವೇ ಲುಪ್ತವಾಗುವುದು. ಮದ್ಯಪಾನೇ ಮರಣಾಂತ ಪ್ರಾಯಶ್ಚಿತ್ತವಿದೆ, ಮದ್ಯ ಸ್ಪರ್ಶ ಮಾಡಿದರೆ ಅಂಗವನ್ನು ಕತ್ತರಿಸಬೇಕೆಂದು ವಿಧಿಸುವ ಪ್ರಾಯಶ್ಚಿತ್ತವನ್ನು ಕಂಡಾಗ ಪಾತಿತ್ಯವೇ ಬರುವುದೆಂದು ಸ್ಪಷ್ಟವು. ಆದರಿಂದ ಬ್ರಾಹ್ಮಣರಿಗೆ ಅನ್ನ. ಫಲಪುಷ್ಪಾದಿಗಳಿಂದ ಸಾತ್ವಿಕ ಪೂಜೆಯೇ ಹೇಳಿದೆ.

7 ಹೀಗೆಯೆ ಕ್ಷತ್ರಿಯರಿಗೂ ವೈಶ್ಯರಿಗೂ ನಿಷ್ಕಾಮವಾಗಿ ಪೂಜಿಸುವವರಿಗೆ ಸಾತ್ವಿಕ ಪೂಜೆಯಲ್ಲೇ ಅಧಿಕಾರವು. ಇದರಿಂದ ಚಿತ್ತಶುದ್ಧಿ ಮೂಲಕ ಮೋಕ್ಷಲಾಭವಾಗುವುದು.

8 ಶೂದ್ರರು ಬ್ರಾಹ್ಮಣನ ಮೂಲಕ ಸಪ್ತಶತೀಪಾರಾಯಣ, ಜಪ ಹೋಮಾದಿಗಳನ್ನು ಸಾತ್ವಿಕ ಮಾರ್ಗದಲ್ಲೆ ಆಚರಿಸುವುದು ಶ್ರೇಯಸ್ಕರ. ಶೂದ್ರರೂ, ಸ್ತ್ರೀಯರೂ ಬ್ರಾಹ್ಮಣನ ಮೂಲಕ ಸಪ್ತಶತೀ ಪಾರಾಯಣ ಶ್ರವಣ ಮಾಡಬೇಕು. ಜಪ, ಹೋಮಾದಿಗಳನ್ನು ಸ್ವತಃ ಮಾಡಬಾರದು, ಬ್ರಾಹ್ಮಣನ ಮೂಲಕ ಮಾಡಿಸಿ ಶ್ರೇಯಸ್ಸನ್ನು ಹೊಂದಬೇಕು.

**9 ನವರಾತ್ರದ ಅನುಕಲ್ಪಗಳು —**

ತದಿಗೆಯಿಂದ ಸಪ್ತಮೀ ಪರ್ಯಂತ ೧, ಪಂಚಮಿಯಿಂದ ಪಂಚರಾತ್ರ ೨, ಸಪ್ತಮಿಯಿಂದ ೩ ರಾತ್ರಿಯು, ಅಷ್ಟಮಿ ನವಮಿ ಈ ೨ ದಿನ ಮಾತ್ರ,

ಅಥವಾ ಒಂದೊಂಮು ದಿನ. ಹೀಗೆ ಅನೇಕ ಕಲ್ಪಗಳಿವೆ, ಇವುಗಳು ಆಯಾಯ ಕುಲಗಳಲ್ಲಿ ಅಡ್ಡಿ ಆತಂಕ ಬಂದಾಗ ಆಚರಿಸುವ ಅನುಕಲ್ಪಗಳು.

10 ತಿಥಿಗಳು ವೃದ್ಧಿ, ಅಥವಾ ಕ್ಷಯುಗಳಿಂದ ಹೆಚ್ಚು ಕಡಿಮೆಯಾದರೂ ಪೂಜಾದಿಗಳನ್ನು ಆವೃತ್ತಿ ಮಾಡಿ ಮಾಡಬೇಕು, ತಿಥಿಕ್ಷಯವಾದರೆ ಒಂದೇ ದಿನ ಎರಡು ಸಲ ಪೂಜೆ ಪಾರಾಯಣಾದಿಗಳನ್ನು ಮಾಡಬೇಕು.

11 ದೇವ ಪೂಜೆಯು ನಿತ್ಯನಿಯತ, ಬಿಟ್ಟರೆ ಪಾಪ, ಅವಶ್ಯ ಕರ್ತವ್ಯ.

## ನವರಾತ್ರ ಕರ್ತವ್ಯಗಳು

ಕಲಶ ಸ್ಥಾಪನೆ, ತ್ರಿಕಾಲ, ಪೂಜೆ, ಅಥವಾ ದ್ವಿಕಾಲ, ಏಕಕಾಲ ಪೂಜೆ, ಕುಲ ದೇವತಾ ಪೂಜೆ, ಸಪ್ತಶತಿ ಪಾರಾಯಣ, ಜಪ, ಅಖಂಡ ದೀಪ, ಉಪವಾಸ, ಏಕಭುಕ್ತ, ನಕ್ತ ಯಾವುದಾದರೊಂದು ನಿಯಮ ಸುವಾಸಿನೀ ಭೋಜನ, ಕುಮಾರೀ ಭೋಜನ. ಕೊನೆಯಲ್ಲಿ ಸಪ್ತಶತೀ ಹೋಮ(ಚಂಡೀ ಹೋಮ) ಕುಲಾಚಾರ ಸಂಪ್ರದಾಯ ಬಂದಂತೆ ಮೇಲೆ ಹೇಳಿದ್ದನ್ನು ಆಚರಿಸಬೇಕು, ಕುಲದಲ್ಲಿ ಬಾರದೇ ಇದ್ದದ್ದನ್ನು ಶಕ್ತಿಯಿದ್ದರೂ ಅನುಷ್ಠಾನಕ್ಕೆ ತರಬಾರದೆಂದು ಶಿಷ್ಟಾಚಾರವಿದೆ. ಕಲಶ ಸ್ಥಾಪನೆಯಿದ್ದರೆ ರಾತ್ರಿ ಮಾಡಬಾರದು.

ಸೂ — ನವರಾತ್ರ ಆರಂಭ ಪ್ರಯೋಗವನ್ನು ಬೇರೆ ಗ್ರಂಥಗಳಿಂದ ತಿಳಿದು ಮಾಡಬೇಕು.

ಚಂಡೀಪಾಠ ಕ್ರಮ — ಉಪದ್ರವ ಶಾಂತಿಗೆ ಮೂರು ಸಲ ಪಠಿಸಬೇಕು. ಗ್ರಹಪೀಡಾ ಶಾಂತಿಗೆ ಐದು ಸಲ, ಮಹಾಭೀತಿಯಿದ್ದರೆ ಏಳುಸಲ, ಶಾಂತಿಗಾಗಿ ಒಂಬೊತ್ತು ಸಲ, ಸೌಖ್ಯಕ್ಕೂ ಸಂಪತ್ತಿಗಾಗಿ ಹದಿನೈದು ಸಲ. ಪುತ್ರ ಪೌತ್ರಾದಿ ಧನಧಾನ್ಯ ಸಂಪತ್ತಿಗಾಗಿ ಹದಿನಾರು ಸಲ, ಬಂಧಮೋಚನೆಗೆ

ಇಪ್ಪತ್ತೈದು ಸಲ, ಸಕಲ ಕಷ್ಟಗಳು-ತ್ರಿವಿಧ ಉತ್ಪಾತಾದಿಗಳ ನಾಶಕ್ಕೆ ಒಂದುನೂರು ಸಲ ಆವೃತ್ತಿ ಮಾಡಬೇಕು, ಸಹಸ್ರಾವೃತ್ತಿ ಮಾಡಿದರೆ ಸಕಲ ಮನೋರಥ ಸಿದ್ಧಿ, ಮೋಕ್ಷವೂ ಲಭಿಸುವುದು. ಫಲ ಕಾಮನೆಯಿಂದ ಪಠಿಸಿದರೆ ಸಂಕಲ್ಪ ಪೂರ್ವಕ ಪೂಜೆ ಕೊನೆಯಲ್ಲಿ ಬಲಿದಾನವು ಕರ್ತವ್ಯವಾಗಿದೆ, ವಿ ಪ್ರಚಾರವಲ್ಲಿ ವೇದಪಾರಾಯಣವೂ ಕರ್ತವ್ಯ.

ಕುಮಾರೀ ಪೂಜೆ ಎರಡು ವರ್ಷದ ಕನ್ನಿಕೆಯಿಂದ ಆರಂಭಿಸಿ ಹತ್ತು [illegible]ದ ಕನ್ನಿಕೆಯನ್ನು ಪೂಜಿಸಬೇಕು. ವಯಸ್ಸಿನ ಮೇಲೆ ಹೆಸರುಗಳೂ ಬೇರೆಬೇರೆಯಿದೆ. ಪ್ರತ್ಯೇಕವಾಗಿ ಪೂಜಾಮಂತ್ರಗಳೂ ಇವೆ. ಬೇರೆ ಗ್ರಂಥವನ್ನು ನೋಡಿ ಮಾಡಬೇಕು.

ಕುಮಾರೀ ಪೂಜೆ, ದೇವೀಪೂಜೆ ಚಂಡೀಪಾಠ ಈ ಮೂರನ್ನು [illegible]ತ್ತರ ವ್ಯ[illegible]ದಂತೆ ಆಚರಿಸಬೇಕು,

ಈ ನವರಾತ್ರೀ ಉತ್ಸವವು ಮಲಮಾಸದಲ್ಲಿ ನಿಷಿದ್ಧ. ಶುಕ್ರಾಸ್ತಾದಿ [illegible] ಆಗಬಹುದು. ಪ್ರಥಮಾರಂಭ ಕೂಡದು.

[illegible]ದಿಗಳು ಬಂದರೆ ಶಿಷ್ಟರು ಆಚರಿಸುವುದಿಲ್ಲ. ಸರ್ವಥಾ ಲೋಪವು [illegible]ವರೆ ಬ್ರಾಹ್ಮಣರ ಮುಖಾಂತರ ಮಾಡಿಸಬಹುದು. ಯಜಮಾನನು ಉಪವಾಸಾದಿ ನಿಯಮವನ್ನು ಆಚರಿಸಬೇಕು.

## ಸರಸ್ವತೀ ಆವಾಹನಾದಿಗಳು

ಆಶ್ವಯುಜ ಶುದ್ಧದಲ್ಲಿ ಮೂಲ ನಕ್ಷತ್ರದಲ್ಲಿ ಪುಸ್ತಕಗಳಲ್ಲಿ ಸರಸ್ವತೀ ಆವಾಹನೆ ಮಾಡಿ ಪೂಜಿಸಬೇಕು. ಶ್ರವಣ ನಕ್ಷತ್ರ ಬಂದಾಗ ವಿಸರ್ಜನೆ ಮಾಡಬೇಕು-ವಚನದಂತೆ **ಆವಾಹನಾದಿ ಕ್ರಮವು** –

ಮೂಲೇಷು ಸ್ಥಾಪನಂ ದೇವ್ಯಾಃ ಪೂರ್ವಾಷಾಢಾಸು ಪೂಜನಂ।
ಉತ್ತರಾಸು ಬಲಿಂದದ್ಯಾತ್ ಶ್ರವಣೇನ ವಿಸರ್ಜಯೇತ್ ॥

ಮೂಲೆ ಸರಸ್ವತ್ಯಾ ಆವಾಹನಂ ತದಂಗ ಪೂಜಾಂ ಚ ಕರಿಷ್ಯೇ ಎಂದು ಆವಾಹನ ಪೂಜೆಗಳನ್ನು ಮಾಡಬೇಕು. ಪೂರ್ವಾಷಾಢಾಸು ಪೂಜಾಂ ಕರಿಷ್ಯೆ. ಎಂದು ಪೂಜೆ ಮಾತ್ರ ಮಾಡಬೇಕು. ಉತ್ತರಾಷಾಢಾಸು, ಬಲಿ ದಾನಂ ತದಂಗಭೂತಾಂ ಪೂಜಾಂ ಚ ಕರಿಷ್ಯೆ ಎಂದು ಬಲಿದಾನ, ಪೂಜೆ ಗಳನ್ನು ಮಾಡಬೇಕು. 'ಶ್ರವಣೆ ವಿಸರ್ಜನು ತದಂಗ ಪೂಜಾಂಚ ಕರಿಷ್ಯೆ ಎಂದು ಪೂಜೆ ಮಾಡಿ ವಿಸರ್ಜನೆ ಮಾಡಬೇಕು'.

## ಆವಾಹನೆಯ ಕಾಲ

ಮೂಲನಕ್ಷತ್ರದ ಪ್ರಥಮ ಪಾದದಲ್ಲಿ ತ್ರಿಮುಹೂರ್ತ ವ್ಯಾಪ್ತಿಯಾಗಿ ದ್ದಾಗ ಆವಾಹನೆ ಮಾಡುವುದು. ಅದಿಲ್ಲವಾದರೆ ದ್ವಿತೀಯಾದಿ ಪಾದದಲ್ಲಿ ಮರುದಿನ ಆವಾಹನೆ ಮಾಡಬೇಕು, ವಿಸರ್ಜನೆಯನ್ನು ಶ್ರವಣನಕ್ಷತ್ರದ ಪ್ರಥಮ ಪಾದದಲ್ಲಿ ರಾತ್ರಿಯಲ್ಲಾದರೂ ಮಾಡಬೇಕು, ಆದರೆ ರಾತ್ರಿ ಮೊದಲನೆ ಯಾಮದಲ್ಲಿ ಆಚರಿಸಬೇಕು.

## (ದುರ್ಗಾಷ್ಟಮಿ) ಮಹಾಷ್ಟಮಿ ತಿಥಿ

1 ನವಮಿಯುಕ್ತವಾದ ಅಷ್ಟಮಿಯು ಒಂದು ಘಳಿಗೆಯಿದ್ದರೂ ಗ್ರಾಹ್ಯ ಸಪ್ತಮಿಯು ಸ್ವಲ್ಪವಿದ್ದರೂ ಅದನ್ನು ತ್ಯಜಿಸಬೇಕು.

2 ಹಿಂದಿನ ದಿನ ಸಪ್ತಮಿಯುಕ್ತವಾದ ಅಷ್ಟಮಿಯಿದ್ದು ಮರುದಿನ ಅಷ್ಟಮಿಯು ಉದಯದಲ್ಲಿ ಇಲ್ಲದಿದ್ದರೆ ಮಾತ್ರ ಹಿಂದಿನ ಅಷ್ಟಮಿಯೇ ಗ್ರಾಹ್ಯ.

3 ಈ ಅಷ್ಟಮಿಯು ಮಂಗಳವಾರವೆ ಬಂದರೆ ಬಹುಪ್ರಶಸ್ತ. ಪೂರ್ವದಿನವೆ ೬೦ ಘಳಿಗೆ ಅಷ್ಟಮಿಯಿದ್ದರೆ ಪೂರ್ವತಿಥಿಯಾದ್ದರಿಂದ ಇದನ್ನೇ ಹಿಡಿಯಬೇಕು, ಮರುದಿನ ಅಲ್ಪಕಾಲವಿರುವ ಅಷ್ಟಮಿಯು ನವಮಿಯುಕ್ತವಾದರೂ ತ್ಯಾಜ್ಯವೇ.

4 ನವಮಿಯುಕ್ಷಯಿಸಿ ದಶಮಿದಿನ ಸೂರ್ಯೋದಯವಾದ ಮೇಲೆ ಅನುವರ್ತಿಸದಿದ್ದರೆ, ಸಪ್ತಮೀಯುಕ್ತವಾದ ಅಷ್ಟಮಿಯೂ ಗ್ರಾಹ್ಯವೆಂದು ತಿಳಿಯಬೇಕು. ಅಷ್ಟಮೀದಿನ ಪುತ್ರವಂತರು ಉಪವಾಸವಿರಕೂಡದು, ಕುಲಾಚಾರವಿದ್ದರೆ ಕಿಂಚಿತ್ ಫಲಾಹಾರ ಮಾಡಬೇಕು.

## ಮಹಾ ನವಮಿ

ಬಲಿದಾನ ಬಿಟ್ಟು ಪೂಜೆ, ಉಪವಾಸಾದಿಗಳಿಗೆ ಅಷ್ಟಮೀ ವೇಧ ವಿರುವ ನವಮಿಯು ಗ್ರಾಹ್ಯ. ಅದೂ ಸಹ ಸಾಯಂಕಾಲ ಅಷ್ಟಮೀ ದಿನ ತ್ರಿಮುಹೂರ್ತವಿದ್ದರೆ ಗ್ರಾಹ್ಯ, ಅದಕ್ಕೂ ಕಮ್ಮಿಯಿದ್ದರೆ ಮುಂದಿನ ತಿಥಿಯೆ ಗ್ರಾಹ್ಯ. ಮಹಾಬಲಿದಾನಕ್ಕೆ ದಶಮೀವೇಧವಿರುವ ನವಮಿಯೆ ಗ್ರಾಹ್ಯ, ಶುದ್ಧವಾದ ನವಮಿ ಅಧಿಕವಾದದ್ದಾಗಲಿ ಪೂರ್ಣತಿಥಿಯಾದ್ದ ರಿಂದ ಪೂರ್ವದಿನದಲ್ಲೆ ಆಚರಿಸಬೇಕು. ಅಷ್ಟಮಿ ಆ ನವಮೀಗಳು ಮಧ್ಯಾಹ್ನಕ್ಕೆ ಅಥವಾ ಅಪರಾಹ್ಣಕ್ಕೆ ಕೂಡಿ ಬಂದಲ್ಲಿ ಎರಡು ದಿನಗಳ ಪೂಜೆಯನ್ನೂ ಅವುಗಳ ಸಂಧಿಪೂಜೆಯನ್ನು ಒಂದೇ ದಿನದಲ್ಲಿ ತಂತ್ರೇಣ ಅನುಷ್ಠಾನಮಾಡಬೇಕು. ಸಂಕಲ್ಪವನ್ನು ಅಷ್ಟಮೀನವಮೀ ಪೂಜಾಂ ತತ್ಸಂಧಿ ಪೂಜಾಂಚ ತಂತ್ರೇಣ ಎಂದು ಮಾಡಬೇಕು. ಅಷ್ಟಮಿಯು ಶುದ್ಧ ಅಥವಾ ಅಧಿಕವಾಗಿದ್ದರೆ ಹಿಂದಿನದಿನ ಅಷ್ಟಮೀ ಪೂಜೆ, ಮಾರನೆ ದಿನ ಸಂಧಿಪೂಜೆ, ನವಮೀ ಪೂಜೆಗಳು ತಂತ್ರೇಣ ಸಕೃತ್ ಅನುಷ್ಠೇಯಗಳು.

## ನವಮೀದಿನ ಹೋಮಾದಿಗಳು

ನವಮಿಯಲ್ಲಿ ಪೂಜೆ ಮಾಡಿ ಹೋಮ ಮಾಡಬೇಕು, ಅರುಣೋದ ಯದಿಂದ ಹಿಡಿದು ಸಾಯಂಕಾಲ ಪರ್ಯಂತ ಅಷ್ಟಮಿನವಮಿಗಳ ಸಂಧಿಕಾಲ ದಲ್ಲಿ ಆಚರಿಸಬೇಕು. ರಾತ್ರಿಹೋತ್ತು ಸಂಧಿಯಿದ್ದರೂ ಕೂಡದು ನವಮೀ ಯಲ್ಲೆ ಹೋಮ ಮಾಡಬೇಕು, ಹೋಮವು ನವಾಕ್ಷರಿಯಿಂದಲೋ, 'ಜಯಂತಿಮಂಗಳಾಕಾಳೀ' ಎಂಬ ಶ್ಲೋಕದಿಂದಲೂ, 'ನಮೋದೇವ್ಯೈ

ಮಹಾದೇವ್ಯೈ' ಎಂಬುದರಿಂದಲೊ ಸಪ್ತಸತೀಶ್ಲೋಕ, ಅಥವಾ ಮಂತ್ರ ಗಳಿಂದಲೋ ಕುಲಾಚಾರವಿದ್ದಂತೆ ಆಚರಿಸಬೇಕು.

## ಹೋಮದ್ರವ್ಯ

ಬಿಳಿ ಎಳ್ಳು ಮಿಶ್ರಮಾಡಿ ತುಪ್ಪ ಹಾಕಿದ ಗಟ್ಟಿಯಾದ ಪಾಯಸ. ಬರಿ ತಿಲದ್ರವ್ಯವೂ ಆಗಬಹುದು. ಜಪ ದಶಾಂಶ ಹೋಮ, ಹೋಮ ದಶಾಂಶ ತರ್ಪಣ, ತದ್ದಶಾಂಶ ಬ್ರಾಹ್ಮಣ ಸುವಾಸಿನೀ ಭೋಜನ.

## ಬಲಿದಾನ

ಬ್ರಾಹ್ಮಣರು ಕೂಷ್ಮಾಂಡದಿಂದ ಮಾಡಬೇಕು. ಅಥವಾ ಮಾಷ ಮಿಶ್ರವಾದ ಅನ್ನದಿಂದ ಮಾಡಬೇಕು. ಮದ್ಯಮಾಂಸಾದಿಗಳನ್ನು ಬ್ರಾಹ್ಮಣ ಬಲಿದಾನಕ್ಕೆ ಕೊಡಬಾರದು. ಅದರಿಂದ ಬ್ರಾಹ್ಮಣ್ಯವೇ ಭ್ರಂಶವಾಗುತ್ತದೆ, ಬಲಿದಾನ ಮಂತ್ರಗಳನ್ನು ಬೇರೆ ಗ್ರಂಥಗಳಿಂದ ಅರಿಯಬೇಕು.

ಎರಡು ಬಗೆಯ ಆಶೌಚವು ಬಂದರೂ ನವಮಿ ದಿನ ಬ್ರಾಹ್ಮಣನ ಮೂಲಕ ಹೋಮ, ದೇವತೋತ್ಥಾಪನಾದಿಗಳನ್ನು ಮಾಡಿಸಬೇಕು. ಯಜ ಮಾನ ಪಾರಣೆ ಮಾಡಿ ಆಶೌಚ ಕಳೆದ ನಂತರ ಬ್ರಾಹ್ಮಣ ಭೋಜನ, ದಕ್ಷಿಣಾದಾನ ಮಾಡಬೇಕು. ಪತ್ನಿಯು ಬಹಿಷ್ಠೆಯಾದರೂ ಪಾರಣೆಕಾಲ ದಲ್ಲಿ ಪಾರಣೆ ಮಾಡಿ ಶುದ್ಧಿಯಾದ ನಂತರ ಐದನೆ ದಿನ ದಾನಾದಿಗಳನ್ನು ಮಾಡಬೇಕು.

ವಿಧವೆಯು ಬಹಿಷ್ಠೆಯಾದರೆ ಅವರಿಗೆ ಭೋಜನ ನಿಷೇಧವಿರುವುದ ರಿಂದ ಶುದ್ಧಿಯಾದ ನಂತರವೇ ಪಾರಣೆ ಮಾಡಬೇಕು.

## ಆಯುಧ, ಅಶ್ವಾದಿ ವಾಹನಪೂಜಾ

ಇದು ರಾಜರಿಗೂ ಪ್ರಜೆಗಳಿಗೂ ಆವಶ್ಯ ಕರ್ತವ್ಯ. ಛತ್ರ-ಚಾಮ ರಾದಿ ರಾಜಚಿಹ್ನೆಗಳಿಗೂ, ಗಜ ಅಶ್ವ ಮುಂತಾದವುಗಳಿಗೂ, ಶಸ್ತ್ರಾಸ್ತ್ರ ಗಳಿಗೂ, ಭೇರಿ-ಶಂಖಾದಿಗಳಿಗೂ ಪೂಜೆ ಹೋಮಾದಿಗಳು ಕರ್ತವ್ಯ.

ಪರಾ—ಈಗ ರಾಜರೇ ಇಲ್ಲವಾದರೂ, ರಾಜಪ್ರತಿನಿಧಿಗಳು ಪ್ರಜಾ ನಾಯಕರು ಇರುವುದರಿಂದ ಅವರೂ ಆಚರಿಸಬೇಕು. ಬೇರೆ ಜನರು ಕುದುರೆ, ಆನೆ ಮುಂತಾದುವುಗಳನ್ನು ವಾಹನಗಳಾಗಿ ಉಪಯೋಗಿಸುವವರು ಪೂಜೆ ಮಾಡಬೇಕು,

## ಅಹರ ಕಾಲ

ಸ್ವಾತೀನಕ್ಷತ್ರಯುಕ್ತವಾದ ಆಶ್ವಯುಜ ಪಾಡ್ಯ ಅಥವಾ ಬಿದಿಗೆ ಯಿಂದ ನವಮೀಪರ್ಯಂತ ಕಾಲ. ಆಧುನಿಕರು ನವಮೀ ದಿನ ಮಾತ್ರ ಆಚರಿಸುವರು.

## ಪಾರಣೆ ಮತ್ತು ದೇವತಾಮೂರ್ತಿ ವಿಸರ್ಜನೆ

ದಾಕ್ಷಿಣಾತ್ಯರು ನವಮಿಯಲ್ಲಿ ಪಾರಣೆ ಮಾಡುವ ಆಚರಣೆಯಿರುವುದ ರಿಂದ ಅವತ್ತೇ ವಿಸರ್ಜನೆ ಮಾಡುವುದು - ಹೀಗೆಂದು ಧರ್ಮಸಿಂಧು ಹೇಳು ವುದು. ಯಾರಿಗೆ ದಶಮಿಯಲ್ಲೇ ಪಾರಣೆ, ವಿಸರ್ಜನೆ ಆಚರಣೆಯಲ್ಲಿ ಬಂದಿದೆ. ಅವರಿಗೆ ದಶಮೀ ದಿನವೇ ಎರಡನ್ನೂ ಆಚರಿಸಲು ಯುಕ್ತ ತಿಥಿಯು, ಈ ಆಚರಣೆಯು ಅಷ್ಟಮಿ, ನವಮಿ, ದಶಮಿ ಇವು ಪೂರ್ಣ ತಿಥಿಯಾಗಿದ್ದರೆ ಮಾತ್ರ. ಇದರ ವಿಶೇಷ ವಿಚಾರವನ್ನು ಧರ್ಮಶಾಸ್ತ್ರ ಗ್ರಂಥಗಳಿಂದ ತಿಳಿಯಬೇಕು.

## ವಿಜಯದಶಮೀ ನಿರ್ಣಯ

1 ದಶಮಿಯು ಪರದಿನದಲ್ಲಿ ಅಪರಾಹ್ಣಕ್ಕೆ ವ್ಯಾಪಿಸಿದ್ದರೆ ಮರು ದಿನವೇ ವಿಜಯದಶಮಿ. ಎರಡು ದಿನಗಳಲ್ಲಿ ಅಪರಾಹ್ಣಕ್ಕೆ ಇದ್ದು ಶ್ರವಣ ನಕ್ಷತ್ರ ಯೋಗವಿದ್ದರೂ, ಇಲ್ಲದಿದ್ದರೂ ಪೂರ್ವದಿನವೇ ಗ್ರಾಹ್ಯ.

2 ಎರಡು ದಿನಗಳಲ್ಲಿ ದಶಮಿ ಅಪರಾಹ್ಣಕ್ಕೆ ಇಲ್ಲವಾದರೂ ಶ್ರವಣ ಯೋಗವಿದ್ದರೂ, ಇಲ್ಲದಿದ್ದರೂ ಪೂರ್ವದಿನವೇ ಗ್ರಾಹ್ಯ.

3 ದಶಮಿಯು ಅಪರಾಹ್ಣಕ್ಕೆ ವ್ಯಾಪಿಸಿರಲಿ, ಇಲ್ಲದಿರಲಿ ಶ್ರವಣ ನಕ್ಷತ್ರವಿದ್ದ ದಶಮಿಯೇ ಗ್ರಾಹ್ಯ.

4 ಯಾವಾಗ ಪೂರ್ವದಿನದಲ್ಲೇ ಅಪರಾಹ್ಣ ದಶಮಿ ಇದ್ದು ಪರ ದಿನಗಳಲ್ಲಿ 3 ಮುಹೂರ್ತ ಮಾತ್ರವಿರುವುದೋ, ಆಗ ಶ್ರವಣ ನಕ್ಷತ್ರ ಯೋಗವಿರುವ ಪರದಿನವೇ ವಿಜಯದಶಮಿ ಎಂದು ಅರಿಯಬೇಕು.

5 ಅಪರಾಹ್ಣದಲ್ಲಿ ದಶಮಿ ಇಲ್ಲದಿದ್ದರೂ ಶ್ರವಣಯುಕ್ತವಾದ ದಶಮಿಯು ಉದಯಕ್ಕೆ ಇದ್ದರೆ ಕರ್ಮಕಾಲಕ್ಕೆ ಇರುವುದರಿಂದ ಗ್ರಾಹ್ಯ ವೆಂದೂ ಹೇಳಿದೆ. ಇದೂ ಸಹ ಪರದಿನದಲ್ಲಿ ಅಪರಾಹ್ಣವೇ ಗ್ರಾಹ್ಯ. ಹಾಗಿಲ್ಲವಾದರೆ ಪೂರ್ವ ತಿಥಿಯೇ ಗ್ರಾಹ್ಯ. ಇದೇ ಯುಕ್ತವೆಂದು ಸಿಂಧು ಕಾರನ ನಿರ್ಣಯ.

**ಅಪರಾಜಿತಾ ಪೂಜೆ, ಸೀಮೋಲ್ಲಂಘನೆ, ಶಮೀ ಪೂಜೆಗಳು**— ಇವು ದಶಮೀದಿನದಲ್ಲೇ ಗ್ರಾಹ್ಯ.

**ಅಪರಾಜಿತಾ ಪೂಜಾಕ್ರಮ**—ಅಪರಾಹ್ಣಕ್ಕೆ ಗ್ರಾಮದ ಈಶಾನ್ಯ ದಿಕ್ಕಿಗೆ ಹೋಗಿ ಶುಚಿಯಾದ ಸ್ಥಳದಲ್ಲಿ ಪದ್ಮವನ್ನು ಬರೆದು ಕುಟುಂಬ ಕ್ಷೇಮಾರ್ಥವಾಗಿ ಸಂಕಲ್ಪಮಾಡಿ, ಅದರಲ್ಲಿ ಅಪರಾಜಿತಾ ದೇವತಾ ಆವಾ ಹನೆ ಮಾಡಿ ಪೂಜಿಸಬೇಕು, ಅಪರಾಜಿತಾ, ಜಯಾ, ವಿಜಯಾ ಈ ಮೂರನ್ನೂ ಆವಾಹನೆ ಮಾಡಿ ಷೋಡಶೋಪಚಾರಗಳಿಂದ ಪೂಜಿಸಿ, ಪ್ರಾರ್ಥಿಸಬೇಕು. ಅನಂತರ ಸಮಸ್ತ ಜನರೂ ಗ್ರಾಮದ ಹೊರಗೆ ಈಶಾನ್ಯ ದಿಕ್ಕಿನಲ್ಲಿರುವ ಶಮೀವೃಕ್ಷವನ್ನು ಪೂಜಿಸಬೇಕು.

ಈ ಪೂಜಾವಿಧಿಯನ್ನು ಬೇರೆ ಗ್ರಂಥಗಳಿಂದ ತಿಳಿದು ಮಾಡಬೇಕು.

**ದೇಶಾಂತರ ಪ್ರಯಾಣಕ್ಕೆ ವಿಜಯ ಮುಹೂರ್ತವು ಉತ್ತಮವು.**

1 ಸ್ವಲ್ಪ ಸಂಧ್ಯಾಕಾಲ ಮೀರಿ ನಕ್ಷತ್ರಗಳು ಮಿನುಗುಟ್ಟುವಾಗ ಇರುವ ಕಾಲವೇ ವಿಜಯಕಾಲ. ಇದು ಸರ್ವಕಾರ್ಯಸಾಧಕ.

2 ಹನ್ನೊಂದನೆ ಮುಹೂರ್ತವೂ ವಿಜಯಕಾಲವೆಂದಿದೆ. ಈ ಕಾಲದಲ್ಲಿ ಜಯವನ್ನು ಸಾಧಿಸುವವರು ಎಲ್ಲರೂ ಯಾತ್ರೆ ಹೊರಡಬೇಕು. ಈ ಎರಡು ಮುಹೂರ್ತಗಳೂ ದಶಮಿಯಲ್ಲೇ ಇರಬೇಕು. ಏಕಾದಶಿಯಲ್ಲಿರಬಾರದು.

ಆಶ್ವಯುಗ್ ದಶಮೀ ವಿಜಯಾಖ್ಯಾಖಿಲೇ ಶುಭಾ ।
ಪ್ರಯಾಣೇ ತು ವಿಶೇಷೇಣ ಕಿಂ ಪುನಃ ಶ್ರವಣಾನ್ವಿತಾ ॥

ಎಂದು ಜ್ಯೋತಿಷ್ಯಶಾಸ್ತ್ರದಲ್ಲಿ ಹೇಳಿದೆ. ಆದರಿಂದ ಬೇರ ಕರ್ಮಗಳನ್ನು ಮಾಸವಿಶೇಷವನ್ನು ನಿರೀಕ್ಷಿಸದೇ ಚಂದ್ರಾದಿಗಳ ಅನುಕೂಲವಿಲ್ಲದಿದ್ದರೂ ಆಚರಿಸಬಹುದೆಂದು ಅಭಿಪ್ರಾಯ.

ಆದರೆ ಚೂಡಾಕರ್ಮ, ಉಪನಯನ, ವಿಷ್ಣು ಮೊದಲಾದ ದೇವತಾ ಪ್ರತಿಷ್ಠೆ ಇತ್ಯಾದಿಗಳನ್ನು ಮಾಡಬಾರದು. ಏಕೆಂದರೆ, ಮಾಸವಿಶೇಷವನ್ನು ಉತ್ತರಾಯಣ ಮುಂತಾದ ಕಾಲವಿಶೇಷವನ್ನು ಪ್ರತ್ಯೇಕ ವಿಧಿಸಿದೆ.

**ರಾಜರ ಪಟ್ಟಾಭಿಷೇಕಕ್ಕೆ ಉದಯದಲ್ಲಿರುವ ದಶಮಿಯೇ ಗ್ರಾಹ್ಯ.**

## ಮಹಾಶಿವರಾತ್ರಿ

1 ಮಾಘಬಹುಳ ಚತುರ್ದಶಿ ನಿಶೀಥವ್ಯಾಪಿಯಾಗಿದ್ದರೆ ಶಿವರಾತ್ರಿ ವ್ರತಕ್ಕೆ ಯೋಗ್ಯವಾದುದ್ದು, **ನಿಶೀಥ ಎಂದರೆ ರಾತ್ರಿಯ ಎಂಟನೆಯ ಮುಹೂರ್ತ.**

2 ಮರುದಿನ ಅರ್ಧರಾತ್ರಿಗೆ ಇದ್ದರೆ ಮರುದಿನವೇ ಶಿವರಾತ್ರಿ. ಪೂರ್ವದಿನಕ್ಕೆ ಚತುರ್ದಶಿ ಅರ್ಧರಾತ್ರಿಗೆ ಇದ್ದರೆ ಪೂರ್ವದಿನವೇ ॥

3 ಎರಡುದಿನಗಳಲ್ಲೂ ತಿಥಿಯ ವ್ಯಾಪ್ತಿಯಿಲ್ಲದಿದ್ದರೆ ಮರುದಿನವೆ. ಎರಡು ದಿನಗಳಲ್ಲೂ ಪೂರ್ಣ ಅರ್ಧರಾತ್ರಿಗೆ ವ್ಯಾಪ್ತಿಯಿದ್ದರೂ ಏಕದೇಶ ವ್ಯಾಪ್ತಿಯಿದ್ದರೂ ಅರ್ಧರಾತ್ರಿಗೆವ್ಯಾಪ್ತಿಯಿದ್ದರೂ ಪೂರ್ವದಿನವೆ ಎಂದು ಹೇಮಾದ್ರಿಗ್ರಂಥಾನುಸಾರಿ ಕೌಸ್ತುಭದ ಅಭಿಪ್ರಾಯ ।

4 ಆದರೆ ಮಾಧವರು ನಿರ್ಣಯಸಿಂಧು–ಪುರುಷಾರ್ಥ ಚಿಂತಾಮಣಿ ಕಾರರು ಮರುದಿನವೇ ಎಂದು ಹೇಳುವರು ।

5 ಮರುದಿನ ನಿಶೀಥಕ್ಕೆ ಏಕದೇಶವ್ಯಾಪ್ತಿಯಿದ್ದರೆ, ಸಂಪೂರ್ಣ ವ್ಯಾಪ್ತಿಯಿದ್ದರೂ ಪೂರ್ವದಿನವೆ ಗ್ರಾಹ್ಯ । ಪೂರ್ವದಿನ ನಿಶೀಥದಲ್ಲಿ ಏಕದೇಶವ್ಯಾಪ್ತಿಯಿದ್ದಾಗಲೂ, ಮರುದಿನ ಸಂಪೂರ್ಣವ್ಯಾಪ್ತಿಯಿದ್ದರೂ ಪರದಿನವೆ ಗ್ರಾಹ್ಯ ।

ಈ ವ್ರತವು ಭಾನುವಾರ, ಅಥವಾ ಮಂಗಳವಾರ ಬಂದರೆ ಬಹಳ ಪ್ರಶಸ್ತ. ಶಿವಯೋಗವಿದ್ದರೂ ಅತಿ ಪ್ರಶಸ್ತ. ಉಪವಾಸಮಾಡಿ ಸಾಯಂ ಕಾಲ ಕಪ್ಪುಎಳ್ಳಿನಿಂದ ಸ್ನಾನಮಾಡಿ ಭಸ್ಮ, ರುದ್ರಾಕ್ಷಿ ಧರಿಸಿ ಶಿವಾಲಯಕ್ಕೆ ಹೋಗಿ ನಾಲ್ಕುಯಾಮಗಳೂ ಪೂಜಿಸಬೇಕು. ನಾಲ್ಕುಯಾಮಗಳ ಪೂಜೆಗೂ ಪ್ರತ್ಯೇಕ ಸಂಕಲ್ಪ ಮಾಡಬೇಕು. ಅಥವಾ ಒಂದಾವರ್ತಿ ಪೂಜೆಮಾಡಲು ಸಂಕಲ್ಪಿಸಿ ಆಚರಿಸಬೇಕು.

ಶಿವರಾತ್ರಿದಿನ ದಕ್ಷಿಣದವರೆಲ್ಲರೂ ರುದ್ರಮಂತ್ರದಿಂದಲೆ ಏಕಾದಶ ವಾರ ಶತವಾರ ಅಭಿಷೇಕ ಪೂಜೆಯನ್ನು ಮಾಡುವರು. ಚಾಲತಿಯಲ್ಲಿರುವಂತೆ ಮಾಡಬಹುದು. **ಪಾರ್ಥಿವೇಶ್ವರನ ಪೂಜೆಯನ್ನು ಮಾಡಬಹುದು.** ಅದರವಿಧಿ ಮಣ್ಣಿನ ಲಿಂಗದಲ್ಲಿ ಶಿವಪೂಜೆ ಮಾಡುವುದು, ಒಂದು ಅಂಗುಷ್ಠದ ಎತ್ತರ ಲಿಂಗವಿರಬೇಕು. ಓಂಹರಾಯ ನಮಃ ಎಂದು ಹುತ್ತದ ಮಣ್ಣನ್ನು ತೆಗೆದು ಶೋಧಿಸಿ ನೀರುಹಾಕಿ ಮರ್ದಿಸಿ ಒಂದು ಉಂಡೆಯಿಂದ ಓಂ ಮಹೇ ಶ್ವರಾಯನಮಃ ಎಂದುಹೇಳಿ ಲಿಂಗವನ್ನು ಮಾಡಿ ಓಂ ಶೂಲಪಾಣಯೇ ನಮಃ ಎಂದು ಶಿವ ಇಹಪ್ರತಿಷ್ಠಿತೋ ಭವ ಎಂದು ಬಿಲ್ವಪತ್ರಸಹಿತವಾದ ಪೀಠದಲ್ಲಿ ಸ್ಥಾಪನೆಮಾಡಿ ಪೂಜಿಸಬೇಕು.

ಧ್ಯಾಯೇನ್ನಿತ್ಯಂ ಮಹೇಶಂ ರಜತಗಿರಿನಿಭಂ ಚಾರುಚಂದ್ರಾವತಂಸಂ ರತ್ನಾಕಲ್ಪೋಜ್ಜ್ವಲಾಂಗಂ ಪರಶುಮೃಗವರಾಭೀತಿ ಹಸ್ತಂ ಪ್ರಸನ್ನಂ । ಪದ್ಮಾಸೀನಂ ಸಮಂತಾತ್ ಸ್ತುತ ಮಮರಗಣೈಃ ವ್ಯಾಘ್ರ ಕೃತ್ತಿಂವಸಾನಂ

ವಿಶ್ವಾದ್ಯಂ ವಿಶ್ವವಂದ್ಯಂ ನಿಖಿಲಭಯಹರಂ ಪಂಚವಕ್ತ್ರಂ ತ್ರಿಣೇತ್ರಂ-ಎಂದು ಧ್ಯಾನವಮಾಡಿ ಆವಾಹನೆಮಾಡಬೇಕು. ಸರ್ವತ್ರ ಪಂಚಾಕ್ಷರಿಯೊಂದಿಗೆ ಪೂಜಿಸಬೇಕು.

ಓಂ ಪಿನಾಕಧೃಷೇನಮಃ ಶ್ರೀಸಾಂಬಸದಾಶಿವ ಇಹಾಗಚ್ಛ ಇಹಪ್ರತಿಷ್ಠ ಇಹ ಸಂನಿಹಿತೋಭವ, ಇತ್ಯಾವಾಹಯಾಮಿ.

ಓಂ ನಮಃಶಿವಾಯ. ಪಾದ್ಯಂ, ಅರ್ಘ್ಯಂ, ಆಚಮನಂ.

ಓಂ ಪಶುಪತಯೇನಮಃ ಇತಿಮೂಲೇನ ಸ್ನಾನಾದಿ ಮಂತ್ರಪುಷ್ಪಾಂಜಲ್ಯಂತಾನಿ ದತ್ವಾ

ಓಂ ಶರ್ವಾಯ ಕ್ಷಿತಿಮೂರ್ತಯೇ ನಮ ಇತಿ ಪ್ರಾಚ್ಯಾಂ ।

ಓಂ ಭವಾಯ ಜಲಮೂರ್ತಯೇ ನಮ ಇತಿ ಈಶಾನ್ಯಾಂ ।

ಓಂ ರುದ್ರಾಯ ಅಗ್ನಿಮೂರ್ತಯೇ ನಮ ಇತಿ ಉದೀಚ್ಯಾಂ ।

ಓಂ ಉಗ್ರಾಯ ವಾಯುಮೂರ್ತಯೇ ನಮ ಇತಿ ವಾಯವ್ಯಾಂ ।

ಓಂ ಭೀಮಾಯ ಆಕಾಶಮೂರ್ತಯೇ ನಮ ಇತಿ ಪ್ರತೀಚ್ಯಾಂ ।

ಓಂ ಪಶುಪತಯೇ ಯಜಮಾನಮೂರ್ತಯೇ ನಮ ಇತಿ ನೈಋತ್ಯಾಂ ।

ಓಂ ಮಹಾದೇವಾಯ ಸೋಮಮೂರ್ತಯೇ ನಮ ಇತಿ ದಕ್ಷಿಣಸ್ಯಾಂ ।

ಈಶಾನಾಯ ಸೂರ್ಯಮೂರ್ತಯೇನಮಃ ಇತಿ ಆಗ್ನೇಯ್ಯಾಂ

ಇತಿ ಪೂಜಯೇತ್. ತತಃ ಸ್ತುತ್ವಾ ನಮಸ್ಕೃತ್ಯ, ಮಹಾದೇವಾಯ ನಮ ಇತಿ ವಿಸರ್ಜಯೇತ್. ಇತಿ ಸಂಕ್ಷೇಪವಿಧಿ.

## ಸೂತಿಕಾ ಶುದ್ಧಿ : (ಬಾಣಂತಿಗೆ ಶುದ್ಧಿಯು)

ಹತ್ತು ದಿನಕಳೆದನಂತರ ಬಾಣಂತಿಯನ್ನು ಸ್ನಾನವಾದ ಮೇಲೆ ಮುಟ್ಟಿಕೊಳ್ಳಬಹುದು. ನಾಮಕರಣ. ಜಾತಕರ್ಮಾದಿಗಳು ಒದಗಿದಾಗ ಇದರಲ್ಲಿ ಅಧಿಕಾರವಿದೆ. ಜಾತೇಷ್ಟಿ, ವಿವಾಹ ಉಪನಯನಇತ್ಯಾದಿ ಕರ್ಮಗಳಲ್ಲಿ ಪುತ್ರನನ್ನು ಹೆತ್ತತಾಯಿಗೆ ಇಪ್ಪತ್ತು ದಿನಗಳು ಕಳೆವಮೇಲೆ, ಹೆಣ್ಣುಮಗುವನ್ನು ಪಡೆದವಳಿಗೆ ಒಂದುತಿಂಗಳ ನಂತರವೇ ಶುದ್ಧಿಯು, ಅಧಿಕಾರವುಬರುವುದು.

## ಜನನಕಾಲದಲ್ಲಿ ದುಷ್ಟನಕ್ಷತ್ರ ತಿಥ್ಯಾದಿದೋಷಗಳಿದ್ದರೆ ಈ ಕೆಳಗೆ ಹೇಳಿದ ಶಾಂತಿಗಳನ್ನು ಆಚರಿಸಬೇಕು

೧ ಕೃಷ್ಣಚತುರ್ದಶೀಜನನ ಶಾಂತಿ ೨ ಸಿನೀವಾಲೀಕುಹೂಜನನ

೩ ದರ್ಶಜನನ ಶಾಂತಿ ೪ ಮೂಲನಕ್ಷತ್ರ ಜನನ

೫ ಆಶ್ಲೇಷಾಜನನ ೬ ಜ್ಯೇಷ್ಠಾನಕ್ಷತ್ರ ಜನನ

೭ ವ್ಯತೀಪಾತ ವೈಧೃತಿ ಸಂಕ್ರಾಂತಿ ಜನನಶಾಂತಿ

೮ ಏಕನಕ್ಷತ್ರಜನನ ಶಾಂತಿ (ತಂದೆಯನಕ್ಷತ್ರ, ಸಹೋದರನನಕ್ಷತ್ರ ಅಥವಾ ತಾಯಿ ನಕ್ಷತ್ರ ಇವರಲ್ಲಿ ಹುಟ್ಟಿದವರೆ ಈ ಶಾಂತಿ)

೯ ಗ್ರಹಣಕಾಲದಲ್ಲಿ ಜನನವಾದರೆ ಶಾಂತಿ

೧೦ ನಕ್ಷತ್ರಗಂಡಾಂತಶಾಂತಿ

೧೧ ತಿಥಿಗಂಡಾಂತ, ಲಗ್ನಗಂಡಾಂತ ಶಾಂತಿ

೧೨ ದಿನಕ್ಷಯಾದಿ ಶಾಂತಿ ೧೩ ವಿಷಘಟೀ ಶಾಂತಿ

೧೪ ಯಮಳ ಜನನಶಾಂತಿ (ಅವಳಿಜವಳಿ ಮಕ್ಕಳು ಹುಟ್ಟಿದರೆ)

೧೫ ತ್ರಿಕಪ್ರಸವಶಾಂತಿ (ಮೂರುಗಂಡು ಹುಟ್ಟಿದ ನಂತರ ಒಂದು ಹೆಣ್ಣುಹುಟ್ಟಿದರೂ, ಮೂರುಹೆಣ್ಣುಹುಟ್ಟಿದ ಮೇಲೆ ಒಂದು ಗಂಡುಶಿಶು ಹುಟ್ಟಿದರೂ ಈ ಶಾಂತಿಯನ್ನು ಮಾಡಬೇಕು.)

೧೬ ಸದಂತ ಜನನಶಾಂತಿ (ಹಲ್ಲುಸಮೇತ ಶಿಶುಹುಟ್ಟಿದರೆ)

೧೭ ಪ್ರಸವವೈಕೃತ ಶಾಂತಿ (ಹುಟ್ಟುವಾಗ ವಿಕಾರವಾಗಿಹುಟ್ಟಿದರೆ) ಜನ್ಮಕಾಲದಲ್ಲಿ ತಾಯಿಗೂ ತಂದೆಗೂ ಮಗನಿಗೂ ಅರಿಷ್ಟವೆಂದು ತಿಳಿದಲ್ಲಿ ಗೋಮುಖ ಪ್ರಸವ ಶಾಂತಿಯನ್ನು ಆಚರಿಸಿ, ಅನಂತರ ನಕ್ಷತ್ರಾದಿಶಾಂತಿ ಯನ್ನು ಆಚರಿಸಬೇಕು.

## ಅಶೌಚದಲ್ಲಿ ಕರ್ತವ್ಯಕರ್ಮಗಳು ಮತ್ತು ವರ್ಜ್ಯಕರ್ಮಗಳು

ಅಶೌಚವು ಎರಡುಬಗೆ, ಜನನಾಶೌಚ, ಮೃತಾಶೌಚ ಎಂದು, ಜನನಾ ಶೌಚವನ್ನು (ವೃದ್ಧಿಯೆಂದು) ಕನ್ನಡಿಗರು ಹೇಳುತ್ತಾರೆ. ಮೃತಾ ಶೌಚವನ್ನು (ಕ್ಷಯಸೂತಕ) ವೆನ್ನುತ್ತಾರೆ, **ಸಂಸ್ಕೃತದಲ್ಲಿ ಸೂತಕ ಎಂದರೆ ಜನನಾಶೌಚ, ಮೃತಾಶೌಚವು**

೧ ಈ ಎರಡು ಅಶೌಚಗಳಲ್ಲೂ ಪ್ರಾಣಾಯಾಮವನ್ನು (ಮಂತ್ರ ವಿಲ್ಲದೆ) ಕುಂಭಕ ಮಾಡಬೇಕು. ಸಂಧ್ಯಾವಂದನೆಯಲ್ಲಿ ಮಾರ್ಜನೆ ಮಂತ್ರ ಗಳನ್ನು ಮನಸ್ಸಿನಲ್ಲೇ ಉಚ್ಚರಿಸಬೇಕು. ಅರ್ಘ್ಯವನ್ನು ಕೊಡುವಾಗ ಗಾಯ ತ್ರಿಯನ್ನು ಗಟ್ಟಿಯಾಗಿ ಉಚ್ಚರಿಸಿ ಸೂರ್ಯನಿಗೆ ಅರ್ಘ್ಯಪ್ರದಾನ ಮಾಡ ಬೇಕು. ಉಪಸ್ಥಾನವನ್ನು ಮಾಡಬಾರದು, ಸೂರ್ಯನನ್ನು ಧ್ಯಾನಿಸಿ ನಮಸ್ಕರಿಸಬೇಕು ಗಾಯತ್ರೀಜಪ ಬೇಕಾಗಿಲ್ಲ, ಅರ್ಘ್ಯಾಂತಾ ಮನಸೀಸಂಧ್ಯಾ ಎಂದು ವಚನವೆ ಪ್ರಮಾಣ. ಕೆಲವರು ಮನಸ್ಸಿನಲ್ಲೇ ಗಾಯತ್ರೀಜಪ ಹತ್ತು ಮಾತ್ರಮಾಡಬೇಕೆಂದು ಹೇಳುವರು. ಎರಡು ಪಕ್ಷವಿದ್ದರೂ. ಶಿಷ್ಟಾಚಾರ ವನ್ನು ತಿಳಿದು ಮಾಡಬಹುದು,

೨ ವೈಶ್ವದೇವ ಬ್ರಹ್ಮಯಜ್ಞಾದಿಗಳು ವರ್ಜ್ಯವು, ವೇದಾ ಭ್ಯಾಸವೂ ವರ್ಜ್ಯ,

೩ ಔಪಾಸನ-ಹೋಮ ಪಿಂಡ ಪಿತೃಯಜ್ಞಗಳನ್ನು ಭಿನ್ನಗೋತ್ರ ದವರಿಂದ ಮಾಡಿಸಬೇಕು. ಕೆಲವರು ಶ್ರೌತಕರ್ಮದಲ್ಲಿ ಸದ್ಯಃ ಶುದ್ಧಿ

ಉಂಟೆಂದು ಹೇಳಿರುವುದರಿಂದ ಅಗ್ನಿಹೋತ್ರ ಹೋಮವನ್ನು ಸ್ನಾನಮಾಡಿ ಮಾಡಬೇಕೆಂದು ಹೇಳುವರು.

೪ ಆಶೌಚಾಪವಾದ ಶಾಸ್ತ್ರವು ಸರ್ವತ್ರ ಬೇರೆ ಗತಿಯಿಲ್ಲದಿರುವಾಗ ಹೇಳಿದ್ದು..

ಶಾಸ್ತ್ರವಾದ್ದರಿಂದ, ಬ್ರಾಹ್ಮಣನು ಬೇರೆ ಇದ್ದರೆ ಅವನ ಮುಖಾಂತರ ಮಾಡಿಸಬೇಕೆಂದೂ, ಯಾರೂ ಇಲ್ಲದೆ ಹೋದರೆ ತಾನೆ ಮಾಡಬೇಕೆಂದೂ ಹೇಳಿರುತ್ತಾರೆ.

೫ ಸ್ಥಾಲೀಪಾಕ ಮಾಡಬಾರದು, ಆಶೌಚ ಕಳೆದ ಮೇಲೆ ಮಾಡಬೇಕು.

೬ ಸರ್ವಥಾ ಲೋಪವಾಗುವುದಿದ್ದರೆ ಬ್ರಾಹ್ಮಣದ್ವಾರಾ ಮಾಡಿಸಬೇಕು.

೭ ಅನ್ವಾಧಾನ ಆದಮೇಲೆ ಆಶೌಚವು ತಿಳಿದರೆ ಬ್ರಾಹ್ಮಣದ್ವಾರ ಇಷ್ಟಿ-ಸ್ಥಾಲೀಪಾಕಗಳನ್ನು ಮಾಡಿಸಬೇಕು. ಸ್ನಾನಮಾಡಿ ತಾನೆ ಉದ್ದೇಶ ತ್ಯಾಗಮಾಡಬೇಕು.

೮ ದರ್ಶಮೊದಲಾದ ಶ್ರಾದ್ಧ (ತರ್ಪಣಾದಿಗಳು) ಬಂದರೆ ಬಿಟ್ಟೇ ಬಿಡಬೇಕು.

೯ ಪ್ರತಿ ಸಾಂವತ್ಸರಿಕ ಶ್ರಾದ್ಧವನ್ನು ಮಾತ್ರ ಆಶೌಚವು ಕಳೆದ ನಂತರ ಹನ್ನೊಂದನೆದಿನ ಮಾಡಬೇಕು, ಈದಿನವೂ ಆಗದಿದ್ದಲ್ಲಿ ಅಮಾವಾಸ್ಯೆ ವ್ಯತೀಪಾತಾದಿ ಪರ್ವದಿನದಲ್ಲಿ ಆಚರಿಸಬೇಕು.

೧೦ ಇದೇರೀತಿ ಪತ್ನಿಯು ಬಹಿಷ್ಠೆಯಾಗಿದ್ದರೂ ಪಿಂಡಪಿತೃಯಜ್ಞ ದರ್ಶಶ್ರಾದ್ಧಗಳನ್ನು ಆಚರಿಸಬಹುದು.

೧೧ ಅನ್ವಾಧಾನವಾದನಂತರ ರಜೋದೋಷಕಂಡರೆ ಇಷ್ಟಿ,ಸ್ಥಾಲೀಪಾಕಗಳು ಕರ್ತವ್ಯ. ಬೇರೆಕಾಲವಾದರೆ ದಾನ ಪ್ರತಿಗ್ರಹ ಅಧ್ಯಯನಗಳು ವರ್ಜ್ಯವು

೧೨ ಅಶೌಚದಲ್ಲಿ ಪರಾನ್ನವನ್ನೂ ತಾನು ಊಟಮಾಡಬಾರದು. ಊಟಮಾಡುವಾಗ ಅಶೌಚವು ತಿಳಿದರೆ ಬಾಯಲ್ಲಿದ್ದ ಗ್ರಾಸವನ್ನು ತೆಗೆದು ಸ್ನಾನಮಾಡಬೇಕು ತಿಂದರೆ ಒಂದುದಿನ ಉಪವಾಸವಿರಬೇಕು ಎಲ್ಲಾ ಅನ್ನವನ್ನು ಊಟಮಾಡಿದರೆ ಮೂರುದಿನ ಉಪವಾಸವಿರಬೇಕು.

೧೩ "ಸೂತಕೇ ಮೃತಕೇಚೈವ ನ ದೋಷೋ ರಾಹುದರ್ಶನೇ" ಎಂಬ ವಚನದಂತೆ ಅಶೌಚ ವಿದ್ದವನೂ ಸಹ ಗ್ರಹಣಕಾಲದಲ್ಲಿ ಸ್ನಾನಮಾಡಿ ತರ್ಪಣ, ದಾನ ಜಪಮೊದಲಾದವುಗಳನ್ನು ಮಾಡತಕ್ಕದ್ದು.

ಶಾಸ್ತ್ರವೆ ನಮಗೆ ಶುದ್ಧಿಯಿದೆ ಇಲ್ಲವೆಂಬುದಕ್ಕೆ ಪ್ರಮಾಣ, ಇಲ್ಲಿ ತರ್ಕವಿಲ್ಲ.

೧೪ ಇದರಂತೆ ಸಂಕ್ರಾಂತಿಕಾಲದಲ್ಲೂ ಸ್ನಾನ, ದಾನಾದಿಗಳನ್ನು ಆಚರಿಸಬೇಕು.

೧೫ ಆಪತ್ಕಾಲದಲ್ಲಿ ನಾಂದಿಯಿಟ್ಟನಂತರ ಉಪನಯನ ವಿವಾಹಗಳಲ್ಲಿ ಅಶೌಚವಿಲ್ಲ. ಹೀಗೆಯೆ ಮಧುಪರ್ಕ ಕೊಟ್ಟನಂತರ ಋತ್ವಿಜರಿಗೂ ಅಶೌಚವಿಲ್ಲ, ಯಜಮಾನನಿಗೆ ದೀಕ್ಷಣೀಯೇಷ್ಟಿ ನಂತರ ಆಶೌಚವಿಲ್ಲ ಆದೂ ಸಹ ಅವಭೃಥಕ್ಕೆಮುಂಚೆ ಅನಂತರ ಅಶೌಚವಿರುವುದು.

೧೬ "ವ್ರತೇಷುನಾಶೌಚಮ್" ಎಂದೆ ಹೇಳಿದೆ. ಆದರಿಂದ ಅನಂತ ವ್ರತಾದಿಗಳನ್ನು ಬೇರೆಯವರಿಂದ ಮಾಡಿಸಬಹುದು.

ರೂಢಿಯಲ್ಲಿ ಶಿಷ್ಟರು ಒಪ್ಪದೆ ಆಶೌಚಕಳೆದ ನಂತರವೇ ವ್ರತವನ್ನು ಮಾಡುವರು.

೧೭ ಮೊದಲೆ ಅನ್ನಸತ್ರ ನಡೆಯಿಸಲು ಉಪಕ್ರಮಿಸಿದ್ದಾಗ ಆಅನ್ನ ದಾನ ಸ್ವೀಕಾರಾದಿಗಳಲ್ಲಿ ದೋಷವಿಲ್ಲ ಆದರೆ ಅಶೌಚವಿಲ್ಲದ ಜನರಿಂದಬಡಿಸಲು ಏರ್ಪಡಿಸಬೇಕು **ಪೂರ್ವಸಂಕಲ್ಪಿತಾನ್ನೇಷು ನ ದೋಷಃ ಪರಿಕೀರ್ತಿತಃ ||** ಎಂಬುದೇ ಪ್ರಮಾಣ.

೧೮ ನೀರು ಹಾಲು ಮೊಸರು ತುಪ್ಪ ಹಣ್ಣು ಗೆಡ್ಡೆಗೆಣಸು, ಹುರಿದ ಅಕ್ಕಿ ಮುಂತಾದವುಗಳು ಜಾತಾಶೌಚವಿರುವ ಗೃಹಸ್ಥನ ಮನೆಯಲ್ಲಿರುವು

ದನ್ನು ತಾನೇ ಸ್ವೀಕರಿಸುವಲ್ಲಿ ದೋಷವಿಲ್ಲ. ಆವರೆ ಅಶೌಚಿಯು ಕೈಯಿಂದಲೆ ಸಾಕ್ಷಾತ್ ತೆಗೆದುಕೊಳ್ಳಬಾರದು ಕೆಲವರು ಅಪಕ್ವವಾದ ಹಸಿಅಕ್ಕಿಮುಂತಾದ ಧಾನ್ಯಗಳನ್ನು ಸ್ವೀಕರಿಸಬಹುದೆಂದು ಹೇಳುವರು.

## ಸಂನ್ಯಾಸ

1 ಬ್ರಹ್ಮಚಾರಿಯಾಗಿದ್ದು ವೇದಾಧ್ಯಯನವನ್ನು ಸಾಂಗವಾಗಿ ಮಾಡಿ ಸಮಾವರ್ತನೆಯ ಕೊನೆಯಲ್ಲಿ ಗೃಹಸ್ಥನೂ ಆಗಿ ಗೃಹಸ್ಥಧರ್ಮವನ್ನು ಅನುಷ್ಠಾನ ಮಾಡಿ, ಪುತ್ರನಲ್ಲಿ ಎಲ್ಲವನ್ನುವಹಿಸಿ ವಿರಕ್ತನಾಗಿದ್ದರೆ ಮುಮುಕ್ಷುವಾಗಿದ್ದು ಕ್ರಮವಾಗಿ ಆಶ್ರಮ ಸಂನ್ಯಾಸವನ್ನು ವಹಿಸಬೇಕು. ಇದು ಆಶ್ರಮ ಸಮುಚ್ಚಯಪಕ್ಷ.

2 ಮೊದಲೆ ವಿರಕ್ತನಾಗಿದ್ದರೆ ಬ್ರಹ್ಮಚರ್ಯಾಶ್ರಮದಿಂದಲೆ ನೇರಾ ಸಂನ್ಯಾಸಾಶ್ರಮವನ್ನು ಸ್ವೀಕರಿಸಬಹುದು. ಇದು ಆಶ್ರಮ ವಿಕಲ್ಪಪಕ್ಷ. “ಬ್ರಹ್ಮಚರ್ಯಾದೇವ ಪ್ರವ್ರಜೇತ್ ಗೃಹಾದಾವನಾದ್ವಾ” (ಅಥಪುನರವ್ರತೀ ವ್ರತೀವಾ ಸ್ನಾತಕೋsಸ್ನಾತಕೋವಾ ಉತ್ಸನ್ನಾಗ್ನಿಃ ಅನಗ್ನಿಕೋವಾ)“ಯದ ಹರೇವಿರಜೇತ್, ತದಹರೇವ ಪ್ರವ್ರಜೇತ್” ಎಂದುಇದಕ್ಕೆ ಆಧಾರವಚನ ವಿದೆ.

ಪ್ರವ್ರಜೇದ್ ಬ್ರಹ್ಮಚರ್ಯಾದ್ವಾ ಪ್ರವ್ರಜೇಚ್ಚ ಗೃಹಾದಪಿ

ವನಾ ದ್ವಾಪ್ರವ್ರಜೇದ್ ವಿದ್ವಾನ್ ಆತುರೋವಾತಿದುಃಖಿತಃ

ಎಂಬವಚನದಂತೆ ಆತುರನು (ಸಾಯುವಸ್ಥಿತಿಯಲ್ಲಿರುವವನು) ಚೋರ ವ್ಯಾಘ್ರಾದಿಗಳಿಂದ ಹೆದರಿ ದುಃಖಿತನಾದವನೂ ಸಹ ಸಂನ್ಯಾಸ ಮಾಡಬಹುದು.

## ಆತುರಸಂನ್ಯಾಸ

ಆತುರ ಸಂನ್ಯಾಸದಲ್ಲಿ ಆದರ ವಿಧಿ ಅನುಷ್ಠಾನಗಳೇನೂ ಇಲ್ಲ. ಶಕ್ಯವಲ್ಲ ಕೇವಲ ಪ್ರೈಷೋಚ್ಚಾರಣೆ ಮಾಡಿ ಸಂನ್ಯಾಸಮಾಡಬೇಕು. ಪ್ರೈಷೋಚ್ಚಾ

ರಣೆಯೆಂದರೆ–ಓಂ ಭೂಃ ಸನ್ಯಸ್ತಂಮಯಾ। ಓಂ ಭುವಃ ಸನ್ಯಸ್ತಂ ಮಯಾ। ಓಂ ಸುವಃ ಸನ್ಯಸ್ತಂಮಯಾ ಎಂದು ಮೂರುಸಲ, ಮಂದ್ರ ಮಧ್ಯಮ-ಉಚ್ಚಸ್ವರದಿಂದ ಹೇಳಬೇಕು ಇದೂಸಹ ಆತುರನಿಗೆ ಆಗಲಾರದು. ಸಣ್ಣಧ್ವನಿಯಲ್ಲಿ ಉಚ್ಚರಿಸಿದರೆ ಸಾಕು. ಸಂಕಲ್ಪ ಪ್ರೈಷೋಚ್ಚಾರ ಅಭಯ ದಾನ ಈ ಮೂರು ಪ್ರಧಾನ

## ಶಕ್ತನಾಗಿರುವ ವಿರಕ್ತನಿಗೆ
## ವಿಧಿವತ್ತಾಗಿ ಸಂನ್ಯಾಸಾಶ್ರಮ ಸ್ವೀಕಾರ

ಪರಮಹಂಸಾಶ್ರಮವೇ ವೇದೋಕ್ತವಾದ ಸಂನ್ಯಾಸ, ಇದು ಜ್ಞಾನಾಂಗ ವಿವಿದಿಷಾ ಸಂನ್ಯಾಸ, ಶಿಖಾಯಜ್ಞೋಪವೀತ ತ್ಯಾಗ ಮಾಡಬೇಕು. ಏಕದಂಡಧಾರಣ, ಕಾಷಾಯವಸ್ತ್ರ ಇದು ತತ್ತ್ವಜ್ಞಾನವು ಬರುವವರೆಗೂ ನಿಯತ.

1 ಈ ಸಂನ್ಯಾಸಕ್ಕೆ ಹೇಳಿದಕಾಲ ಉತ್ತರಾಯಣ, ಆತುರನಿಗೆ ದಕ್ಷಿಣಾಯನವೂ ಆಗಬಹುದು

2 ಬ್ರಹ್ಮವಿದ್ಯಾ ಸಂಪನ್ನನಾದ ಸದ್ಗುರುವನ್ನು ತಿಳಿದು ಅವರಲ್ಲಿ ಮೂರುತಿಂಗಳಿದ್ದು ಯತಿಧರ್ಮಗಳನ್ನು ತಿಳಿಮಕೊಂಡು ಸಂನ್ಯಾಸಕ್ಕೆ ಮುಂಚೆ ಗಾಯತ್ರೀಜಪ, ರುದ್ರಜಪ-ಕೂಷ್ಮಾಂಡ ಹೋಮಾದಿಗಳಿಂದ ಆತ್ಮ ಶುದ್ಧಿಯನ್ನು ಮಾಡಿಕೊಂಡು ಉಕ್ತತಿಥಿಯಲ್ಲಿ ಸನ್ಯಾಸಕ್ಕೆ ಸಂಕಲ್ಪಮಾಡಿ ಕೃಚ್ಛ್ರಾಚರಣೆ ಮಾಡಬೇಕು.

3 ಏಕಾದಶಿಯಲ್ಲೋ ದ್ವಾದಶಿಯಲ್ಲೋ, ಬ್ರಹ್ಮರಾತ್ರಿಯು ಬರು ವಂತೆ ಉಕ್ತಶ್ರಾದ್ಧಗಳನ್ನು ಆರಂಭಿಸಬೇಕು.

4 ಅಷ್ಟಶ್ರಾದ್ಧಗಳು-ದೇವಶ್ರಾದ್ಧ. ಋಷಿಶ್ರಾದ್ಧ, ದಿವ್ಯಶ್ರಾದ್ಧ ಮನುಷ್ಯಶ್ರಾದ್ಧ ಭೂತಶ್ರಾದ್ಧ ಪಿತೃಶ್ರಾದ್ಧ ಆತ್ಮಶ್ರಾದ್ಧ ಹೀಗೆ ೮ ಶ್ರಾದ್ಧ ಗಳು ಕರ್ತವ್ಯವಾಗಿವೆ.

5 ಆಶ್ವಲಾಯನರು ಪಿಂಡಸಹಿತ ಪಾರ್ವಣಪ್ರಯೋಗಮಾಡಬೇಕು. ಆಪಸ್ತಂಬ-ಹಿರಣ್ಯಕೇಶೀಯಾದಿಗಳು ಅಗ್ನೌಕರಣ ಪಿಂಡರಹಿತ ಸಾಂಕಲ್ಪಿಕ ಪ್ರಯೋಗ ಮಾಡಬೇಕು. ಶ್ರಾದ್ಧಾಂಗ ತರ್ಪಣವನ್ನು ಯವದಿಂದ ಮೊದಲೇಮಾಡಬೇಕು.(ಅನ್ನಶ್ರಾದ್ಧ ಅಥವಾ ಆಮಶ್ರಾದ್ಧ ಮಾಡಬಹುದು) ಎಲ್ಲವೂ ನಾಂದೀಶ್ರಾದ್ಧದಂತೆ, ಸವ್ಯದಲ್ಲಿ ನೆಡೆಯಬೇಕು, ಅಪಸವ್ಯವಿಲ್ಲ, ತಿಲಕ್ಕೆ ಬದಲುಯವ, ಯುಗ್ಮಬ್ರಾಹ್ಮಣರು ದೇವರಸ್ಥಾನಕ್ಕೆ ಇಬ್ಬರು, ಇತರ ೮ ಶ್ರಾದ್ಧಗಳಿಗೆ ಒಟ್ಟು ೧೬ ಹದಿನಾರು ಒಟ್ಟಿನಲ್ಲಿ ೧೮ ಜನರನ್ನು ಕೂರಿಸಬೇಕು. ಸಂನ್ಯಾಸ ಗ್ರಹಣ ಸಾವಿತ್ರೀಪ್ರವೇಶ ಬ್ರಹ್ಮಾನ್ವಾಧಾನ ವಿರಜಾಹೋಮ ಗೃಹಸ್ಥನಾಗಿದ್ದರೆ ಪುತ್ರಾದಿಗಳಿಗೆ ಆಶೀರ್ವಾದಮಾಡಿ ಮನೆಬಿಟ್ಟು ಹೊರಡಬೇಕು. ಸರ್ವತ್ಯಾಗ ವಿಧಿಯಂತೆ ಏಷಣಾತ್ರಯ ಸಂನ್ಯಾಸ ಮಾಡಬೇಕು. ಪ್ರೈಷೋಚ್ಚಾರಮಾಡಿ ಗುರುವನ್ನು ಆಶ್ರಯಿಸಿ ಅವನಿಂದ ಉಪದೇಶಹೊಂದಬೇಕು, ಪರ್ಯಂಕಶೌಚ ಯೋಗಪಟ್ಟ-ಇವುಗಳು ಅವಶ್ಯಕರ್ತವ್ಯಗಳಾಗಿವೆ. ಪ್ರಯೋಗ ವಿಧಿಯನ್ನು ನೋಡಿ ಮಾಡಬೇಕು.

## ಆತುರ ಸಂನ್ಯಾಸ ವಿಧಿ

1 ಅತ್ಯಂತ ಆತುರನಾಗಿದ್ದರೆ ಕೇವಲ ಪ್ರೈಷಮಾತ್ರ ಉಚ್ಚರಿಸಬೇಕು, ಅದರಮೇಲೂ ಬದುಕಿದ್ದರೆ, ಸ್ವಸ್ಥನಾಗಿದ್ದರೆ, ಮಹಾವಾಕ್ಯೋಪದೇಶವನ್ನು ಕಾಷಾಯಮದಂಡಗ್ರಹಣಾದಿಗಳನ್ನು ಮಾಡಿಕೊಂಡು ಸ್ವೀಕರಿಸಬೇಕು.

2 ಸ್ವಲ್ಪಶಕ್ತನಾಗಿದ್ದರೆ ಈ ಮುಂದೆ ಹೇಳಿದಂತೆ ಆತುರನೂ ಸಹ ಈ ವಿಧಿಯನ್ನು ಆಚರಿಸಬೇಕು. ಮಂತ್ರಸ್ನಾನವನ್ನು ಮಾಡಿ ಶುದ್ಧವಸ್ತ್ರವನ್ನು ಧರಿಸಿ–ಜ್ಞಾನ ಪ್ರಾಪ್ತಿದ್ವಾರಾ ಮೋಕ್ಷಸಿದ್ಧ್ಯರ್ಥಂ ಆತುರೋಕ್ತವಿಧಿನಾ ಸಂನ್ಯಾಸಮಹಂಕರಿಷ್ಯೆ ಎಂದು ಸಂಕಲ್ಪಮಾಡಿ, ಐದು ಕೇಶಗಳನ್ನು ಶಿಖೆಯಲ್ಲಿ ಉಳಿಸಿ ವಪನಮಾಡಿಸಿಕೊಂಡು, ಸ್ನಾನಮಾಡಿ ಸಂಧ್ಯಾದಿಗಳನ್ನು

ಯಥಾಶಕ್ತಿ ಮಾಡಿ, ಔಪಾಸನ ಮಾಡಿ ಆತ್ಮನಲ್ಲಿ ಅಗ್ನಿ ಸಮಾರೋಪವನ್ನು ಮಾಡಬೇಕು.

3 ಅಗ್ನಿಹೊತ್ರಿಯಾಗಿದ್ದರೆ ಪ್ರಾಜಾಪತ್ಯಾದಿಸ್ಥಾನದಲ್ಲಿ ಪೂರ್ಣಾಹುತಿಯನ್ನುಮಾಡಿ ಶ್ರೌತಾಗ್ನಿಯನ್ನು ಆತ್ಮನಲ್ಲಿ ಸಮಾರೋಪ ಮಾಡಬೇಕು. ಅಗ್ನಿಯನ್ನು ತ್ಯಜಿಸಿದವರಿಗೆ ಪುನರಾಧಾನ ಮಾಡಿದರೆ ಮಾತ್ರ ಸಮಾರೋಪವು. ಇಲ್ಲವಾದರೆ ಇಲ್ಲ ವಿಧುರಾದಿಗಳಿಗೆ ಅಗ್ನಿಯೆ ಇಲ್ಲವಾದ್ದರಿಂದ ಸಮಾರೋಪವೂ ಇಲ್ಲ. ತತಸ್ತ್ರೋಯಮಾದಾಯ ಅಪ್ಸುಜುಹೋತಿ ಏಷಹವಾ ಅಗ್ನೇರ್ಯೋನಿಃ ಯಃ ಪ್ರಾಣಃ ಪ್ರಾಣಂಗಚ್ಛಸ್ವಾಹಾಃ ಅಪೋವೈಸರ್ವಾ ದೇವತಾಃ ಸರ್ವಾಭ್ಯೋ ದೇವತಾಭ್ಯೋ ಜುಹೋಮಿಸ್ವಾಹಾ(ಇ)ಭೂಃ ಸ್ವಾಹೇತಿ-ಜಲೇಜಲ್ಯೈಃ ಹುತ್ವಾ, ಹುತಶೇಷಂ ಜಲಂ ಆಶುಃಶಿಶಾನ ಇತಿ ಮಂತ್ರೇಣ ಅಭಿಮಂತ್ರ್ಯ, ಪುತ್ರೈಷಣಾ ವಿತ್ತೈಷಣಾ-ಲೋಕೈಷಣಾ ಮಯಾತ್ಯಕ್ತಾಃ ಸ್ವಾಹಾ ಇತಿ ಕಿಂಚಿತ್ ಪಿಬೇತ್ ಅಭಯಂ ಸರ್ವಭೂತೇಭ್ಯೋ.ಮತ್ತಃಸ್ವಾಹಾ ಇತಿ ಪ್ರಾಚ್ಯಾಂ ಜಲಂದ್ವಿತೀಯಂಪಿಬೇತ್ ಸಂನ್ಯಸ್ತಂಮಯೇತಿ

ತೃತೀಯಂ ನಿಃಶೇಷಂಪಿಬೇತ್ ।

ತತಃ ಪೂರ್ವವತ್ ಸಾವಿತ್ರೀಪ್ರವೇಶಃ ಅನಂತರ ಪ್ರೈಷೋಚ್ಚಾರ

ಓಂಭೂಃ ಸಂನ್ಯಸ್ತಂ ಮಯಾ ಓಂ ಭುವಃ ಸನ್ಯಸ್ತಂ ಮಯಾ ಓಂ ಸ್ವಃ ಸಂನ್ಯಸ್ತಂ ಮಯಾ ಓಂ ಭೂರ್ಭುವಃಸ ಂನ್ಯಸ್ತಂಮಯಾ

ಈ ರೀತಿ. ಮೊದಲು ಮಂದವಾಗಿ ಮಧ್ಯಮವಾಗಿ-ನಂತರ ಗಟ್ಟಿಯಾಗಿ ಹೇಳಬೇಕು (ಸಾಧ್ಯವಾದರೆ ಹೇಳಿ), ಅಭಯಂಸರ್ವಭೂತೇಭ್ಯೋ ಮತ್ತಃ ಸ್ವಾಹಾ ಎಂದು (ನೀರನ್ನೂ ಕೈಯಲ್ಲಿ ಹಿಡಿದು ಬಿಡಬೇಕು).

(ಶಿಖೆಯನ್ನೂ ಕಿತ್ತು ಉಪವೀತವನ್ನು ಕತ್ತರಿಸಿ) " ಭೂಃ ಸ್ವಾಹಾ " ಎಂದು ನೀರಿನಲ್ಲಿ ಹೋಮಮಾಡಬೇಕು. ಪುತ್ರ ಗೃಹದಲ್ಲಿ ಇರಬಾರದು. ಅತ್ಯಂತ ಆತುರನಾಗಿದ್ದರೆ ಪ್ರೈಷಮಾತ್ರ ಹೇಳಬೇಕೆಂದು ಹೇಳಿದ್ದೇವೆ.

# ೧ ಜೀವತ್‌ಪಿತೃಕಾಧಿಕಾರ ನಿರ್ಣಯ

ತಂದೆಯು ಮಾತ್ರ ಬದುಕಿರುವ ಪುತ್ರನು (ಜೀವತ್ಪಿತೃಕ), ಈತನಿ
ಾವಯಾವುದು ಕರ್ತವ್ಯ, ಯಾವುದು ನಿಷಿದ್ಧ ಮಾಡಬಾರದ್ದು ಎಂಬ
ನ್ನು ಇಲ್ಲಿ ತಿಳಿಸಿದೆ

ಪಾದುಕೇಚೋತ್ತರೀಯಂಚ ತರ್ಜನ್ಯಾಂ ರೂಪ್ಯಧಾರಣಂ
ನ ಜೀವತ್ಪಿತೃಕಃ ಕುರ್ಯಾತ್ ಜ್ಯೇಷ್ಠೇಭ್ರಾತರಿ ಜೀವತಿ ॥

1 ಈ ವಚನವಂತೆ ಜ್ಯೇಷ್ಠಭ್ರಾತೃ ಬದುಕಿರುವಾಗ ಕನಿಷ್ಠ ಜೀವ
ತೃಕನಾದರೂ, ಮರದ ಪಾದುಕೆಗಳನ್ನೂ ಹಾಕಬಾರದು, ಉತ್ತರೀಯ
ನ್ನು ಉತ್ತರೀಯ ಸ್ಥಾನವಲ್ಲಿ ತೃತೀಯ ಯಜ್ಞೋಪವೀತವನ್ನೂ ತರ್ಜನಿ
ಯಲ್ಲಿ ಬೆಳ್ಳಿಉಂಗುರವನ್ನೂ ಧರಿಸಬಾರದು. ಎರಡನೆಹೊದಿಯುವ ವಸ್ತ್ರ
ನ್ನು ಜೀವತ್‌ಪಿತೃಕರು ಎಲ್ಲರೂ ಧರಿಸಬಹುದು. ಏಕವಸ್ತ್ರವನ್ನು
ೀವತಾರ್ಚನೆ ಮಾಡುವಾಗಲೂ, ಊಟಮಾಡುವಾಗಲೂ ಧರಿಸಬಾ
ರೆಂಬ ನಿಷೇಧವಿದೆ.

2 ತಂದೆ, ತಾತ, ಜ್ಯೇಷ್ಠಭ್ರಾತೃಗಳು ಬದುಕಿದ್ದು ಆಧಾನಮಾಡ
ರುವಾಗ ಕ್ರಮವಾಗಿ ಪುತ್ರನೂ, ಪೌತ್ರ, ಕನಿಷ್ಠಭ್ರಾತ ಇವರು ಅಗ್ನಿಯ
ಧಾನಮಾಡಬಾರದು.

3 ಜ್ಯೇಷ್ಠನು ವಿವಾಹ ಮಾಡಿಕೊಳ್ಳದಿರುವಾಗ ಕನಿಷ್ಠ ತಮ್ಮನ
ವಾಹ ಮಾಡಿಕೊಳ್ಳಬಾರದು.

ಜ್ಯೇಷ್ಠನು ಕಾರಣಾಂತರದಿಂದ ವಿವಾಹವಾಗದೆ ಇದ್ದರೆ ಅವನಅನುಜ್ಞೆ
ಗೆದುಕೊಂಡು ಕನಿಷ್ಠ ವಿವಾಹವಾಗಬಹುದು.

4 ಪಿತೃ-ಪಿತಾಮಹ ಜ್ಯೇಷ್ಠಪುತ್ರರು ಇವರು ಸೋಮಯಾಗ ಮಾಡದೇಇರುವಾಗ, ಇಷ್ಟಿಗಳನ್ನು ಅರಂಭಮಾಡದೇ ಬದುಕಿರುವಾಗ ಪುತ್ರ ಪೌತ್ರ, ಕನಿಷ್ಠ-ಇವರಿಗೆ ಸೋಮಯಾಗದಲ್ಲಿ ಅಧಿಕಾರವಿಲ್ಲ. ಹೀಗೆಯೆ ಪೂರ್ಣ ಮಾಸೇಷ್ಟಿ, ದರ್ಶೇಷ್ಟಿ, ಅಗ್ನಿಹೋತ್ರಹೋಮಗಳಲ್ಲೂ ಅಧಿಕಾರ ವಿರುವುದಿಲ್ಲ, ಇದೇರೀತಿ ಸಂನ್ಯಾಸದಲ್ಲೂ ಸೋದರನಾದ ತಮ್ಮನಿಗೆ ಅಧಿ ಕಾರವಿಲ್ಲ. ಸಂನ್ಯಾಸಮಾಡುವಲ್ಲಿ ದೋಷವೆಯೆಂದು ಧರ್ಮಸಿಂಧು.

ಇದು ಮಾತ್ರವಿಚಾರಣೀಯ, ಸನ್ಯಾಸಕ್ಕೆ ಮುಖ್ಯವೈರಾಗ್ಯ ಮೋಕ್ಷದ ಅಭಿಲಾಷೆಯೇ ಮುಖ್ಯ ಕಾರಣವಾದ್ದರಿಂದ ಈ ನಿಷೇಧವು ಸಲ್ಲದು, ಪಿತೃ ಮೊದಲಾದವರು ಅನುಜ್ಞೆಯನ್ನು ಕೊಟ್ಟರೆ ಆಗಬಹುದೆಂದು,. ಅದು ದೋಷವಾಗುವುದಿಲ್ಲವೆಂಬುದು ಶಾಸ್ತ್ರಜ್ಞರ ಅಭಿಪ್ರಾಯವಿದೆ, ಅಧಿಕಾರಿ ಯಾದ ತಂದೆಯು ಇರುವಾಗ ಆಜ್ಞೆಕೊಡುವುದರಲ್ಲೂ ದೋಷವಿದೆಯೆಂದೂ ಹೇಳುತ್ತಾರೆ.

5 ಪಿತ್ರಾದಿಗಳಿಗೆ ಪಾತಿತ್ಯ (ಕರ್ಮಭ್ರಷ್ಟತೆಯಿದ್ದರೆ) ಕುರುಡುತನ, ಕಿವುಡತನ, ಅಂಗವೈಕಲ್ಯಾದಿ ದೋಷಗಳಿದ್ದರೆ, ಆಜ್ಞೆಮಾಡುವಲ್ಲಿ ಜೀವತ್ ಪಿತೃಕನಿಗೆ ಯಾವದೋಷವೂ ಇಲ್ಲ.

6 ಜೀವತ್‌ಪಿತೃಕನಿಗೆ ಪಿತೃಕಾರ್ಯವಾದ ಅಮಾವಾಸ್ಯಾಶ್ರಾದ್ಧ ತರ್ಪಣ, ಪೈತೃಕದಾನಗಳಲ್ಲಿ ಅಧಿಕಾರವಿಲ್ಲ, ಜೀವತ್‌ಪಿತನು ತಾಯಿದು ಶ್ರಾದ್ಧಕ್ಕಾಗಿ ಉದ್ದೇಶಪಟ್ಟು ಗಯೆಗೆ ಹೋಗಬಾರದು.

### ವಿಶೇಷಾಧಿಕಾರ

7 ವಿಶೇಷವಚನ (ಅಪವಾದಶಾಸ್ತ್ರ) ದುತೆ ನವಮಿದಿನ ಅಷ್ಟಕಾ ಶ್ರಾದ್ಧವನ್ನು, ತಾಯಿಯ ಮೃತಾಹದಲ್ಲಿ ಪ್ರತಿಸಾಂವತ್ಸರಿಕ ಶ್ರಾದ್ಧವನ್ನು ಪಿಂಡಸಹಿತವಾಗಿಯೇ ಮಾಡಬೇಕು.

## ೨ ಜೀವತ್ಪಿತೃಕ ಶ್ರಾದ್ಧನಿರ್ಣಯ

8 ತಂದೆಯು ಸಂನ್ಯಾಸಮಾಡಿದಲ್ಲೂ, ಅಥವಾ ಪತಿತನಾಗಿದ್ದು ಜೀವಂತನಾಗಿದ್ದರೂ ಅಮಾವಾಸ್ಯಾಶ್ರಾದ್ಧ (ತರ್ಪಣ) ಮಹಾಲಯ ಸಂಕ್ರಾಂತಿ-ಗ್ರಹಣಾದಿ ನಿಮಿತ್ತದ ಶ್ರಾದ್ಧಗಳನ್ನು ತಂದೆಯ ತಂದೆ ಮೊದಲಾದ ಎಂದರೆ ಪಿತಾಮಹ ಪ್ರಪಿತಾಮಹ-ಪ್ರಪ್ರಪಿತಾಮಹರನ್ನು ಉದ್ದೇಶಿಸಿ ಮಾಡಬಹುದು, ಆದರೆ ಪಿಂಡವಿಲ್ಲದೆ ಕೇವಲ ಸಂಕಲ್ಪಶ್ರಾದ್ಧರೂಪದಲ್ಲಿ ಮಾಡಬೇಕು.

9 ಆಶ್ವಯುಜ ಶುದ್ಧ ಪ್ರತಿಪತ್ತಿನಲ್ಲಿ ದೌಹಿತ್ರನು ಜೀವತ್‌ಪಿತೃಕನಾಗಿದ್ದರೆ ಪಿಂಡಸಹಿತವಾಗಿ ಮಾತಾಮಹಶ್ರಾದ್ಧವನ್ನು ಮಾಡಬಹುದು.

10 ಹಾಗೂ ಅಣ್ಣತಮ್ಮಂದಿರುಗಳ ಮಕ್ಕಳು ಪುತ್ರರಿಲ್ಲದದೊಡ್ಡಪ್ಪ ಚಿಕ್ಕಪ್ಪಂದಿರುಗಳಿಗೆ ಪ್ರತಿಸಾಂವತ್ಸರಿಕ ಶ್ರಾದ್ಧವನ್ನು ಪಿಂಡಹಾಕಿ ಮಾಡಬಹುದು.

11 ಕನಿಷ್ಠಸಹೋದರನು (ಜೀವತ್ಪಿತೃಕನಾದರೂ) ಪುತ್ರರಿಲ್ಲದ ಜ್ಯೇಷ್ಠ ಭ್ರಾತೃವಿಗೆ ಪ್ರತಿಸಾಂವತ್ಸರಿಕ ಮಾಡಬಹುದು.

12 ಹೀಗೆಯೆ ಸೌತಿಯಮಗನು ಮಲತಾಯಿಗೆ ಶ್ರಾದ್ಧವನ್ನು ಮಾಡಬಹುದು. ಹೀಗೆಯೆ ದೌಹಿತ್ರನು ಮಕ್ಕಳಿಲ್ಲದ ಮಾತಾಮಹನಿಗೆ ಪ್ರತಿಸಾಂವತ್ಸರಿಕವನ್ನು ಮಾಡಬಹುದು.

13 ಚಿಕ್ಕಪ್ಪ, ದೊಡ್ಡಪ್ಪ, ಸಹೋದರ ಮೊದಲಾದವರಿಗೆ ಪುತ್ರರಿಲ್ಲದೆ ಹೋದರೆ ಅವರವರ ಪತ್ನಿಯರು ಇದ್ದರೆ ಅವರೇ ಅಧಿಕಾರಿಗಳು, ಸಹೋದರ ಪುತ್ರಮೊದಲಾದವರಿಗೆ ಶ್ರಾದ್ಧಾಧಿಕಾರವಿಲ್ಲ.

14 ಪುತ್ರರಿಲ್ಲದ ಹೆಂಡತಿಗೆ ಪತಿಯೇ ಶ್ರಾದ್ಧಾಧಿಕಾರಿಯು, ಸವತಿ ಮಕ್ಕಳಿದ್ದರೆ ಈ ಮಕ್ಕಳೆ ಅಪುತ್ರಭಾರ್ಯೆಗೆ ಅಧಿಕಾರಿಗಳು, ಪತಿಯು ಅಧಿಕಾರಿಯಲ್ಲ.

15 ದೌಹಿತ್ರ ಮತ್ತು ಸಹೋದರನ ಪುತ್ರರಿದ್ದರೆ, ಮೃತಪಟ್ಟವನಿಗೆ ಆಸ್ತಿವಿಭಾಗವಾಗಿದ್ದರೆ ದೌಹಿತ್ರನೆ ಅಧಿಕಾರಿಯು. ವಿಭಾಗವಾಗಿಲ್ಲದಿದ್ದರೆ ಸಹೋದರನ ಮಗನು ಅಧಿಕಾರಿಯು.

## ಜೀವತ್‌ಪಿತೃಕನಿಗೆ ತರ್ಪಣಾಧಿಕಾರ

16 ಜೀವತ್‌ಪಿತೃಕನಿಗೆ ತನ್ನ ಪಿತೃಪಿತಾಮಹಾದಿ ಮಾನುಷ ತರ್ಪಣಾಧಿಕಾರವಿಲ್ಲದಿದ್ದರೂ, ನಿಷೇಧವಿದ್ದರೂ ಅಗ್ನಿಷ್ವಾತ್ತಾದಿ ದೇವ ಪಿತೃಗಳ ತರ್ಪಣದಲ್ಲಿ ಅಧಿಕಾರವಿದೆ. ನಿಷೇಧವಿಲ್ಲ. ಸ್ನಾನಾಂಗ ತರ್ಪಣದಲ್ಲೂ ಬ್ರಹ್ಮಯಜ್ಞಾಂಗವಾದ ದೇವರೂಪ ಪಿತೃತರ್ಪಣದಲ್ಲಿ ಅಧಿಕಾರವಿದೆ. ತನ್ನ ಮಾತೃಶ್ರಾದ್ಧದಲ್ಲಿ ಅಧಿಕಾರವಿರುವಂತೆ ಮಾತೃಶ್ರಾದ್ಧಾಂಗತರ್ಪಣದಲ್ಲಿ ಅಧಿಕಾರವಿರುತ್ತದೆ. ಒಟ್ಟಿನಲ್ಲಿ ಯಾರಶ್ರಾದ್ಧದಲ್ಲಿ ಅಧಿಕಾರವಿದೆಯೊ, ಆಶ್ರಾದ್ಧದ ಅಂಗವಾದ ತರ್ಪಣದಲ್ಲಿ ಅಧಿಕಾರವಿದೆಯೆಂಬರ್ಥ.

17 ಜೀವತ್ಪಿತಾಪಿ ಕುರ್ವೀತ ತರ್ಪಣಂ ಯಮಭೀಷ್ಮಯೋಃ ॥ ಶ್ರಾದ್ಧಾಂಗ ತರ್ಪಣಬಿಟ್ಟು ಉಳಿದ ಪಿತೃತರ್ಪಣವನ್ನು ಜೀವತ್ಪಿತೃಕನು ತಿಲದಿಂದ ಮಾಡಬಹುದು.

18 ಶ್ರಾದ್ಧಮಧ್ಯದಲ್ಲಿ ಜೀವತ್ಪಿತೃಕನು ಮಂಡಿಯನ್ನು ಊರಬಾರದು. ನೀವೀಬಂಧನವನ್ನು ಮಾಡಕೂಡದು.

19 ನದಿ ಮುಂತಾದವುಗಳಲ್ಲಿ ಸ್ನಾನಮಾಡಿ ತರ್ಪಣದ ಕೊನೆಯಲ್ಲಿ ಸಮಂತ್ರಕವಾಗಿ ವಸ್ತ್ರವನ್ನು ಹಿಂಡಬಾರದು.

## ೩ ಜೀವತ್‌ಪಿತೃಕನಿಗೆ ಹಲವುಶ್ರಾದ್ಧಗಳಲ್ಲಿ ಅಧಿಕಾರವು

20 ಪಿತನು ಸಂನ್ಯಾಸವನ್ನು ತೆಗೆದುಕೊಂಡು ಜೀವಂತನಾಗಿದ್ದರೆ, ತಾಯಿ ಮತ್ತು ಮಾತಾಮಹರಿಲ್ಲದ ಪುತ್ರನು ಈ ಮುಂದೆ ಹೇಳಿದ ಪಾರ್ವಣ ಮಾಡಬೇಕು

1 ಪಿತುಃ ಪಿತೃ- ಪಿತಾಮಹ ಪ್ರಪಿತಾಮಹ

2 ಪಿತುರ್ಮಾತೃ ಪಿತಾಮಹೀ ಪ್ರಪಿತಾಮಹೀ

3 ಪಿತುರ್ಮಾತಾಮಹ-ಮಾತೃಪಿತಾಮಹ ಮಾತೃಪ್ರಪಿತಾಮಹ ಎಂಬ ಮೂರುವರ್ಗದವರಿಗೆ ಪಾರ್ವಣತ್ರಯವನ್ನು ಏಕೋದ್ದಿಷ್ಟಗಣವನ್ನು ಕುರಿತು ಶ್ರಾದ್ಧಮಾಡಬೇಕು.

4 ತನ್ನತಾಯಿಗೆ-ಪಿತುಃ ಪತ್ನ್ಯಾಃ ಎಂದು, ತನ್ನ ದೊಡ್ಡಪ್ಪ ಚಿಕ್ಕಪ್ಪ ಇವರಿಗೆ ಪಿತುರ್ಭ್ರಾತುಃ ಎಂದೂ, ತನ್ನಮಾತಾಮಹನಿಗೆ ಪಿತುಃ ಶ್ವಶುರಸ್ಯ ಇತ್ಯಾದಿಯಾಗಿ ಪಿತೃಸಂಬಂಧವನ್ನು ಮೊದಲುಮಾಡಿಕೊಂಡೇ ಸಂಕಲ್ಪಮಾಡಿಯೆ ಮಹಾಲಯಶ್ರಾದ್ಧವನ್ನು ಮಾಡಬೇಕು. ಇದೇರೀತಿ ಯಾಗಿ ದರ್ಶಾದಿಶ್ರಾದ್ಧಗಳನ್ನು ಮಾಡಬೇಕು.

5 ತಂದೆಗೆ ಸಂನ್ಯಾಸವಾಗಿಲ್ಲವಾದರೆ ತೀರ್ಥಶ್ರಾದ್ಧವನ್ನು ಜೀವತ್ ಪಿತನೇ ತನ್ನ ಪಿತೃಃಪಿತಾಮಹಾದಿಗಳಿಗೆ ಮಾಡಬೇಕು ಇದೇರೀತಿ ನಾಂದಿಗೂ ಇಟ್ಟುಕೊಳ್ಳಬೇಕು.

6 ಬ್ರಹ್ಮಯಜ್ಞವನ್ನು ಮಾಡಿದ ಮೇಲೆ ನಿತ್ಯ ಪಿತೃತರ್ಪಣ ವನ್ನು ಸಂನ್ಯಾಸಮಾಡಿದ್ದ ಜೀವತ್‌ಪಿತೃವುಳ್ಳ ಮಗನು ಮೇಲ್ಕಂಡರೀತಿ ಯಲ್ಲೇ ಆಚರಿಸಬೇಕು.

7 ತಾಯಿಯ ವಾರ್ಷಿಕಶ್ರಾದ್ಧವನ್ನೂ, ಪುತ್ರರಿಲ್ಲದ ಮಾತಾಮಹ ವಾರ್ಷಿಕ ಶ್ರಾದ್ಧವನ್ನೂ, ಪುತ್ರರಿಲ್ಲದ ಪಿತೃವ್ಯ ಶ್ರಾದ್ಧವನ್ನೂ, ಮಾಡುವಾಗ ಕ್ರಮವಾಗಿ ಈ ಮುಂದೆ ಸೂಚಿಸಿರುವಂತೆ ಉದ್ದೇಶಿಸಿ ಆಚರಿಸಬೇಕು.

೧ ಮಾತೃ-ಪಿತಾಮಹೀ ಪ್ರಪಿತಾಮಹೀನಾಂ

೨ ಮಾತಾಮಹ ಮಾತುಃ ಪಿತಾಮಹ ಮಾತುಃ ಪ್ರಪಿತಾಮಹಾನಾಂ

೩ ಪಿತೃವ್ಯ-ಪಿತಾಮಹ ಪ್ರಪಿತಾಮಹಾನಾಂ ಎಂದು ಉದ್ದೇಶಿಸಿ ಶ್ರಾದ್ಧವನ್ನು ಆಚರಿಸಬೇಕು.

## ೪ ತಂದೆ ಮೊದಲಾದವರು ಅಶಕ್ತರಾಗಿದ್ದು ಅವರಪ್ರತಿನಿಧಿಯಾಗಿ ಅನುಜ್ಞೆಯಿಂದ ತಾನುಮಾಡುವಾಗ ಹೇಗೆ? ಆಚರಿಸಬೇಕು

೧ ಪಿತುಃ ಶರ್ಮಣಃ ಯಜಮಾನಸ್ಯ ಪಿತೃ-ಪಿತಾಮಹ ಪ್ರಪಿತಾಮಹಾನಾಂ ಇತ್ಯಾದಿಯಾಗಿ ಉದ್ದೇಶಿಸಿ ಶ್ರಾದ್ಧವನ್ನು ಆಚರಿಸಬೇಕು.

8 ಸಮಸ್ತ ಪಿತೃಕಾರ್ಯಗಳಲ್ಲೂ ತನ್ನ ಸಹೋದರರು ಅವಿಭಕ್ತ ಕುಟುಂಬದವರಾದರೆ ಜ್ಯೇಷ್ಠಪುತ್ರನೆ ಅಧಿಕಾರಿಯಾಗುವನು. ವಿಭಕ್ತ ಕುಟುಂಬದವರಾದರೆ (ಆಸ್ತಿವಿಭಾಗ ಮಾಡಿಕೊಂಡಿದ್ದರೆ) ಬೇರೆ ಬೇರೆಯಾಗಿಯೆ ವಾರ್ಷಿಕಶ್ರಾದ್ಧದಿಗಳನ್ನು ಆಚರಿಸಬೇಕು.

9 ಸೌತಿಮಕ್ಕಳಲ್ಲಿ ಜ್ಯೇಷ್ಠಸಹೋದರನಿದ್ದರೂ ಕನಿಷ್ಠನೆ ತನ್ನ ಮಾತೃವಿನ ವಾರ್ಷಿಕವನ್ನು ಅನ್ವಷ್ಟಕಾದಿ ಶ್ರಾದ್ಧಗಳನ್ನು ಆಚರಿಸಬೇಕು.

10 ತಂದೆ-ತಾತ ಇಬ್ಬರೂ ಬದುಕಿದ್ದರೂ, ಅಥವಾ ಸಂನ್ಯಾಸವಾಗಿದ್ದರೂ ಪಿತಾಮಹನ ಪಿತೃ-ಪಿತಾಮಹ ಪ್ರಪಿತಾಮಹರನ್ನು ಉದ್ದೇಶಿಸಿ ಆಚರಿಸಬೇಕು. ಹೀಗೆಯೇ ವೃದ್ಧಿಶ್ರಾದ್ಧ (ನಾಂದೀಶ್ರಾದ್ಧ) ತೀರ್ಥಶ್ರಾದ್ಧ, ದರ್ಶಾದಿಶ್ರಾದ್ಧಗಳನ್ನು ಆಚರಿಸಬೇಕು.

11 ಪಿತೃವರ್ಗದ ಮೂರು ಜನರು ಬದುಕಿದ್ದರೂ, ಸಂನ್ಯಾಸ ಮಾಡಿದ್ದರೂ ಯಾವಶ್ರಾದ್ಧವನ್ನು ಮಾಡಬೇಕಾಗಿಲ್ಲ.

12 ಪಿತೃವು ಮೃತಪಟ್ಟು ಪಿತಾಮಹನು ಬದುಕಿದ್ದರೆ ಪಿತಾಮಹನ ಮೇಲಿರುವವರಿಗೆ ಪ್ರಪಿತಾಮಹ ವೃದ್ಧಪ್ರಪಿತಾಮಹಯೋಃ, ಎಂದು ಉದ್ದೇಶಿಸಿ ಮಾಡಬೇಕು. ಹೀಗೆ ಪಿತೃ-ಪಿತಾಮಹ ಇಬ್ಬರೂ ಮೃತಪಟ್ಟು ಪ್ರಪಿತಾಮಹನು (ಮುತ್ತಾತನು) ಬದುಕಿದ್ದರೆ ಪ್ರಪಿತಾಮಹನ ಮೇಲಿರುವ ಇಬ್ಬರಿಗೆ ಆಚರಿಸಬೇಕು. ಹೀಗೆಯೆ ಎಲ್ಲವನ್ನೂ ಊಹಿಸಿ ತಿಳಿದು ಆಚರಿಸಬೇಕು.

## ಜೀವತ್‌ಪಿತೃಕನಿಗೆ ವೈಶ್ವದೇವಾಧಿಕಾರವಿಲ್ಲ

13 ಪಿತೃವಿನಿಂದ ವಿಭಾಗವಾಗದ ಪುತ್ರರು ಬೇರೆ ವೈಶ್ವದೇವ ಮಾಡಬೇಕಾಗಿಲ್ಲ. ಪಿತೃಪಾಕೋಪಜೀವೀಸ್ಯಾತ್ ಭ್ರಾತೃಪಾಕೋಪಜೀವಕಃ। ಎಂದು ತಂದೆಯಪಾಕ, ಸಹೋದರನ ಪಾಕವನ್ನು **ಉಪಜೀವಿಸಿಕೊಂಡ ವನು ಪ್ರತ್ಯೇಕ ವೈಶ್ವದೇವ ಮಾಡಕೂಡದು.**

14 ವಿಭಕ್ತ ಕುಟುಂಬವದವರಾವರೆ ಪ್ರತ್ಯೇಕವೈಶ್ವದೇವ ಮಾಡಬೇಕು.

15 ವೈಶ್ವದೇವವೆಂಬುದು ದೇವಯಜ್ಞ-ಭೂತಯಜ್ಞ-ಪಿತೃಯಜ್ಞ ಈ ಮೂರೂಸೇರಿ ಯಜ್ಞವಾದ್ದರಿಂದ ಜೀವತ್ಪಿತೃಕನೂಸಹ ಪಂಚಮಹಾಯಜ್ಞದಲ್ಲಿ ಬರುವ ಪಿತೃಯಜ್ಞಕ್ಕೆ ಅಧಿಕಾರಿಯು, ಅವನೂ ಮಾಡಬೇಕು. **ತೈತ್ತಿರೀಯಶಾಖೆಯವರಿಗೆ** ವೈಶ್ವದೇವಕ್ಕೆ ಪಂಚಮಹಾಯಜ್ಞಗಳು ಭಿನ್ನೈಸಿಪೆಯಾದರೂ ವಿಭಕ್ತರಾದ ಜೀವತ್‌ಪಿತೃವುಳ್ಳವರು ಈ ಪಿತೃಯಜ್ಞವನ್ನು ಆಚರಿಸಬೇಕು. ಏಕೆಂದರೆ, ದೇವರೂಪಿಯಾದ ಪಿತೃದೇವತೆಗಳು ಈವೈಶ್ವದೇವದ ದೇವತೆಗಳು ಪಿತೃ-ಪಿತಾಮಹಾದಿ ಮಾನವರೂಪಿಗಳಲ್ಲ. ಆದ್ದರಿಂದ ಆಗಬಹುದು.

ವಪನಂ ಪಿಂಡದಾನಂಚ ಪ್ರೇತಕರ್ಮಚ ಸರ್ವಶಃ

ನ ಜೀವತ್ ಪಿತೃಕಃ ಕುರ್ಯಾದ್ಗುರ್ವಿಣೀಪತಿ ರೇವಚ ॥

ಎಂದು ಹೇಳಿದಂತೆ ಜೀವತ್‌ಪಿತೃವುಳ್ಳವನು ವಪನವನ್ನು ಸಮಸ್ತ ಪ್ರೇತ ಕರ್ಮವನ್ನು. (ಅಂದರೆ ಪ್ರೇತದಹನ-ವಹನ ಸಪಿಂಡೀಕರಣಾಂತವಾದ ಔರ್ಧ್ವದೈಹಿಕ ಕ್ರಿಯೆಯೆಂದರ್ಥ) ಇದನ್ನು ಮಾಡಬಾರದು.

ಈ ನಿಷೇಧವು ಗರ್ಭಿಣೀಪತಿಗೂ ಅನ್ವಯಿಸಿದೆ. ವಿಶೇಷವಚನ ಅಪವಾದಶಾಸ್ತ್ರದಂತೆ ಚೌಲ, ಉಪನಯ ಮೊದಲಾದ ಅವಶ್ಯಕರ್ತವ್ಯವಾದ

ಕಾರ್ಯಗಳಲ್ಲೂ ತೀರ್ಥಕ್ಷೇತ್ರದಲ್ಲಿ ಮಾಡಬೇಕಾದ ಪ್ರಾಯಶ್ಚಿತ್ತದಲ್ಲೂ ಮಾತೃಮರಣವಾದಾಗಲೂ ಇವರು ವಪನವನ್ನು ಅವಶ್ಯಮಾಡಿಕೊಳ್ಳಬೇಕು

ವಚನ- ಗಂಗಾಯಾಂ ಭಾಸ್ಕರಕ್ಷೇತ್ರೇ ಮಾತಾಪಿತ್ರೋರ್ಗುರೋರ್ಮೃತೌ ।
ಆಧಾನೇ ಸೋಮಪಾನೇಚ ವಪನಂ ಸಪ್ತಸು ಸ್ಮೃತಮ್ ॥

ಈ ಶ್ಲೋಕದಲ್ಲಿ ಗುರೋಃ ಎಂಬುದಕ್ಕೆ ದತ್ತುಪುತ್ರನು ಜನಕಪಾಲಕರೆಂಬುವ ಮಾತಾಪಿತೃಗಳೆಂದರ್ಥ, ಬೇರೆವಚನದಲ್ಲಿ ತೀರ್ಥಗಳಲ್ಲಿ ಕ್ಷೌರವನ್ನು ಮಾಡಿಕೊಳ್ಳಬೇಕೆಂದು ಹೇಳಿದ್ದರಿಂದ ಪುನಃ ಇಲ್ಲಿ ಗಂಗೆಯನ್ನು ಭಾಸ್ಕರಕ್ಷೇತ್ರವನ್ನು ವಿಶೇಷವಾಗಿ ಎತ್ತಿ ಹೇಳಿದ್ದರಿಂದ ವಿಶೇಷವಾಗಿ ಕ್ಷೌರವನ್ನು ಕರ್ತವ್ಯವೆಂದೇ ತಿಳಿಸುವುದು.

16 ಜೀವತ್‌ಪಿತೃವುಳ್ಳವನಿಗೆ ಪಿಂಡದಾನ ನಿಷೇಧಮಾಡಿರುವುದರ ತಾತ್ಪರ್ಯವೇನೆಂದರೆ ನಾಂದೀಶ್ರಾದ್ಧದಲ್ಲೂ ತೀರ್ಥಶ್ರಾದ್ಧದಲ್ಲೂ ತನ್ನ ತಂದೆಯು ಸನ್ಯಾಸಿಯಾಗಿ ಮೃತಪಟ್ಟಲ್ಲಿ ಅವನ ಅಮಾವಾಸ್ಯೆಶ್ರಾದ್ಧದಲ್ಲೂ ಮಹಾಲಯಾದಿ ಶ್ರಾದ್ಧಗಳಲ್ಲೂ ಪಿಂಡವಿಲ್ಲದೆ ಕೇವಲ ಸಂಕಲ್ಪ ಶ್ರಾದ್ಧ ಮಾಡಬೇಕೆಂಬುದೇ ಅರ್ಥವು.

17 ಆದರೆ ಮಹಾಪಿತೃಯಜ್ಞದಲ್ಲೂ ಸೋಮಯಾಗದಲ್ಲೂ **ಮಾತೃ-ಮಾತಾಮಹಾದಿಗಳ ವಾರ್ಷಿಕಶ್ರಾದ್ಧದಲ್ಲೂ, ಗಯೆಯಲ್ಲೂ ಅನ್ವಷ್ಟಕ್ಯಾದಿಗಳಲ್ಲೂ ಪಿಂಡದಾನ ಮಾಡಬೇಕೆಂಬುದು ವಿಹಿತವೇ ಆಗಿದೆ.**

18 "ಪಿಂಡದಾನಂ ಪ್ರಕುರ್ವೀತ ಮಾತಾಪಿತ್ರೋಃ ಕ್ಷಯಾಹನಿ" ಎಂದು ಹೇಳಿದ ಶ್ರಾದ್ಧವಿಧಿಯಂತೆ ಪಿಂಡದಾನ ಕರ್ತವ್ಯವೆಂಬುದು ತಿಳಿದು ಬಂದಿದ್ದರೂ ಪುನಃ ಪಿಂಡದಾನ ವಿಧಾನ ಮಾಡಿದ್ದು ತಂದೆತಾಯಿಗಳ ವಾರ್ಷಿಕಶ್ರಾದ್ಧವು ಬಂದಾಗ ಗರ್ಭಿಣೀಪತಿಯಾಗಿದ್ದರೂ. ನಿಷಿದ್ಧಕಾಲವಾಗಿದ್ದರೂ ತಾನು ಇದನ್ನು ಪರಿಗಣಿಸದೆ ಮೃತಾಹದಲ್ಲಿ ಪಿಂಡದಾನ ಮಾಡ

ಬೇಕೆಂದು ಒತ್ತಾಯಮಾಡಿ ತಿಳಿಸುವುದಕ್ಕಾಗಿ ಎಂದು ಅರಿಯಬೇಕು. ಆದ ರಿಂದ ಸಾಮಾನ್ಯ ನಿಷೇಧವಿದ್ದರೂ ಈ ವಿಶೇಷವಿಧಿಯಿಂದ ಮಾತಾಪಿತೃಗಳ ಶ್ರಾದ್ಧದಲ್ಲಿ ಪಿಂಡದಾನ ನಿಷಿದ್ಧವಲ್ಲ. ಅವಶ್ಯ ಕರ್ತವ್ಯವೆಂದು ತಿಳಿಯಬೇ ವುದು. ಹೀಗೆಯೇ ಸಪಿಂಡೀಕರಣ ಮಾಸಿಕಾದಿಗಳಲ್ಲಿಯೂ ಪಿಂಡದಾನ ಕರ್ತವ್ಯವೆಂದು ಅರಿಯಬೇಕು.

## ವಿಶೇಷ ವಿಚಾರ

19 ಜೀವತ್ಪಿತೃಕನು ತನ್ನ ತಾಯಿಗೂ, ಪುತ್ರರಿಲ್ಲದ ಮಲತಾಯಿಗೂ ಮಕ್ಕಳಿಲ್ಲದ ಸಪತ್ನೀಪುತ್ರರೂ ಇಲ್ಲದ ತನ್ನ ಹೆಂಡತಿಗೂ, ಪುತ್ರರಿಲ್ಲದ ದೊಡ್ಡಪ್ಪ-ಚಿಕ್ಕಪ್ಪಂದಿರಿಗೂ, ಪುತ್ರರಿಲ್ಲದ ಮಾತಾಮಹ-ಮಾತಾಮಹಿ ಯರಿಗೂ, ದಾಹ ಮೊದಲಾದ ಪ್ರೇತಕರ್ಮಗಳನ್ನು ಮಾಡಬೇಕು.

20 ಉಪನಯನವಾಗದೆ ಇದ್ದರೂ ಜೀವತ್ಪಿತೃಕನು ತಾಯಿಯ ಉತ್ತರಕ್ರಿಯಾ ಸಂಸ್ಕಾರವನ್ನು ಮಾಡಬಹುದು. ಚೌಲವಾಗದ ಮೂರು ವರ್ಷತುಂಬದಿರುವನೂಸಹ ಮಂತ್ರವಿಲ್ಲದೆ ದಾಹಸಂಸ್ಕಾರವನ್ನು ಮಾಡಿ ಉಳಿದಿದ್ದನ್ನು ಇನ್ನೊಬ್ಬರಿಂದ ಮಾಡಿಸಬೇಕು.

21 ಚೂಡಾಕರ್ಮವಾಗಿದ್ದು ಮೂರುವರ್ಷಗಳುತುಂಬಿದ ಜೀವತ್ಪಿ ತೃಕನು ಸಮಂತ್ರಕವಾಗಿ ಪ್ರೇತಕರ್ಮವನ್ನು ಮಾಡಬೇಕು. ಈತನು ಬ್ರಹ್ಮ ಚಾರಿಯಾಗಿದ್ದರೆ ತಾಯಿತಂದೆಗಳಿಗೂ ಮಾತಾಮಹನಿಗೂ ಅಂತ್ಯಕರ್ಮವನ್ನು ಮಾಡಬಹುದು, ಆದರೆ ಬೇರೆಯವರಿಗೆ ಮಾಡಬಾರದು.

22 ಪತಿಯೂ, ದೌಹಿತ್ರನೂ ಇದ್ದರೆ ತನ್ನಹೆಂಡತಿಗೆ ಪತಿಯೆ ದಾಹಾದಿಸಂಸ್ಕಾರವನ್ನು ಮಾಡಬೇಕು. ಆದರೆ ಆ ಕಾಲದಲ್ಲಿ ಪತಿಗೆ ವಪನ ಕಾರ್ಯವಿಲ್ಲ.

23 ಪುತ್ರರಿಲ್ಲದವನಿಗೆ ಪತ್ನಿಯೂ ದೌಹಿತ್ರನೂ ಇದ್ದರೆ ಪತ್ನಿಯೇ ಪತಿಗೆ ದಾಹಾದಿಗಳನ್ನು ಮಾಡಬೇಕು. ಪದ್ಧತಿಯಂತೆ ದಾಹಸಂಸ್ಕಾರವನ್ನು ಸಮಂತ್ರಕವಾಗಿಮಾಡಿ ತಾನು ಸಂಕಲ್ಪಮಾತ್ರ ಮಾಡಿ ಉಳಿದಿದ್ದನ್ನು ಬ್ರಾಹ್ಮಣನ ಮೂಲಕ ಮಾಡಿಸಬೇಕು.

24 ಪತಿ, ಅಥವಾ ಸೌತಿಯಮಗ ಇದ್ದರೆ ಸೌತಿಪುತ್ರನೆ ಮಾಡಬೇಕು ಪತಿಯು ಮಾಡಬಾರದು.

25 ಸೌತಿಯಮಗ, ದೌಹಿತ್ರ ಇಬ್ಬರೂ ಇದ್ದರೆ ಸೌತಿಯಮಗನೆ ಮಾಡಬೇಕು.

26 ಪುತ್ರರಿಲ್ಲದೆ ವಿಧವೆ–ವಿಧುರ ಈ ಇಬ್ಬರಿಗೂ ಸಹೋದರನ ಮಗ ಮತ್ತು ದೌಹಿತ್ರರಿದ್ದರೆ ದೌಹಿತ್ರನೆ ಅಧಿಕಾರಿಯೆಂದು ಬಹುಸಂಮತ ವಾದ ಪಕ್ಷ.

27 ವಿಧವೆಗೆ ತನ್ನಗಂಡನ ಸಹೋದರನ ಮಗನೆ ಮಾಡಬೇಕು ವಿಧುರನಿಗೆ ತನ್ನಸಹೋದರನ ಮಗನೇ ಮಾಡಬೇಕೆಂದು ಭಟ್ಟಮತವಿದೆ.

28 ಪುತ್ರನಿಲ್ಲದವನಿಗೆ, ಪತ್ನಿಯೂ ಸಹೋದರನ ಮಗನೂಇದ್ದರೆ ಪತ್ನಿಯೇ ಕರ್ಮಾಧಿಕಾರಿಯಾಗುವಳು.

29 ಪುತ್ರರು ಹತ್ತಿರದಲ್ಲಿ ಇಲ್ಲದಿದ್ದರೆ ಪೌತ್ರ ಮೊದಲಾದವರಿಗೂ ಪಿತಾಮಹ-ಪಿತಾಮಹಿ ಮುಂತಾದವರ ಉತ್ತರಕ್ರಿಯೆಗೆ ಅಧಿಕಾರವಿರುವುದು ಸಪಿಂಡರಲ್ಲಿ ಸಗೋತ್ರ ಸಪಿಂಡರು ಮೃತಪಟ್ಟರೆ ಜೀವತ್ಪಿತೃಕನು ಸಕೃತ್, ಸಕೃತ್ ತಿಲಾಂಜಲಿದಾನ ಮಾಡಬೇಕು; ಇದೇರೀತಿ **ಮಾತಾಮಹ ಆಚಾರ್ಯ ಮೊದಲಾದವರಿಗೂ ಮಾಡಬೇಕು.**

30 ಸಪಿಂಡರಲ್ಲಿ ಸಗೋತ್ರ ಸಪಿಂಡರು ಮೃತಪಟ್ಟರೆ ಜೀವತ್ಪಿಕೃನು ಸಕೃತ್ ಸಕೃತ್ ತಿಲಾಂಜಲಿ ದಾನಮಾಡಬೇಕು. ಇದೇ ರೀತಿ ಮಾತಾಮಹ ಆಚಾರ್ಯ ಮೊದಲಾದವರಿಗೂ ಮಾಡಬೇಕು.

# ಶ್ರಾದ್ಧ ಮತ್ತು ದಾಹ ಮೊದಲಾದ ಉತ್ತರ ಕ್ರಿಯಾದಿಗಳ ಅನುಕ್ರಮ

1 ತಾಯಿಯೋ ತಂದೆಯೊ ಮೃತಪಟ್ಟರೆ ದಾಹಮೊದಲಾದ ಉತ್ತರಕ್ರಿಯೆಗಳಿಗೆ ಔರಸಪುತ್ರನು (ಹೊಟ್ಟೆಯಲ್ಲಿ ಹುಟ್ಟಿದ ಮಗನೇ) ಮುಖ್ಯಾಧಿಕಾರಿಯು, ಔರಸಪುತ್ರರು ಅನೇಕರು ಇದ್ದರೆ ಜ್ಯೇಷ್ಠಪುತ್ರನೇ ಅಧಿಕಾರಿ.

2 ಜ್ಯೇಷ್ಠನು ಇಲ್ಲದಿದ್ದರೆ, ಅಥವಾ ಹತ್ತಿರದಲ್ಲಿಲ್ಲದಿದ್ದರೆ, ಪತಿತನಾಗಿ ಕರ್ಮಭ್ರಷ್ಟನಾಗಿದ್ದರೆ, ಇವನ ತಮ್ಮನೇ ಅಧಿಕಾರಿ (ಉತ್ತರಕ್ರಿಯಾದಿಗಳನ್ನು ಮಾಡಬೇಕು)

ಕನಿಷ್ಠರಲ್ಲೂ ಕೊನೆಯಮಗನೆ ಅಧಿಕಾರಿಯೆಂದು ಕೆಲವರು ಹೇಳುವುದು ತಪ್ಪು ಅದಕ್ಕೆ ಪ್ರಮಾಣವಚನವಿಲ್ಲ.

3 ಪುತ್ರರಿಗೆ ಆಸ್ತಿವಿಭಾಗವಾಗಿದ್ದರೆ ಕನಿಷ್ಠರಿಂದ ಧನವನ್ನು ಸ್ವೀಕರಿಸಿ ಜ್ಯೇಷ್ಠನೇ ಮೊದಲಿನಿಂದ ಸಪಿಂಡೀಕರಣ ಪರ್ಯಂತರ ಹೇಳಿದ ಕ್ರಿಯೆಗಳನ್ನು ಮಾಡಬೇಕು. ಸಾಂವತ್ಸರಿಕ (ವಾರ್ಷಿಕ) ಶ್ರಾದ್ಧವನ್ನು ಬೇರೆ ಬೇರೆ ಮಾಡಬೇಕು.

4 ಆಸ್ತಿವಿಭಾಗವಾಗಿಲ್ಲದೆ ಒಂದೆ ಕುಟುಂಬದಲ್ಲಿದ್ದರೆ ವಾರ್ಷಿಕಾದಿ ಶ್ರಾದ್ಧಗಳನ್ನು ಒಬ್ಬನೆ ಮಾಡಬೇಕು. ಇತರ ತಮ್ಮಂದಿರುಗಳು ಇವನೊಂದಿಗೆ ಸೇರಿ ಬ್ರಹ್ಮಚರ್ಯ-ಪರಾನ್ನತ್ಯಾಗ ಇತ್ಯಾದಿ ನಿಯಮಗಳನ್ನು ಪಾಲಿಸುತ್ತಾ ಶ್ರಾದ್ಧಕ್ಕೆ ನೆರವಾಗಬೇಕು. ಈರೀತಿ ಒಬ್ಬನೆ ಮಾಡಿದರೂ ಆವರಫಲವನ್ನು ಎಲ್ಲರೂ ಪಡೆಯುವರು.

5 ಪುತ್ರರು ಒಂದೇ ಕಡೆಯಲ್ಲಿದ್ದರೆ, ದೇಶಾಂತರ ಹೋಗಿದ್ದರೆ ಅಥವಾ ಬೇರೆ ಮನೆಯಲ್ಲಿ ವಾಸವಾಗಿದ್ದರೂ, ಅವಿಭಕ್ತರಾದರೂ ಸಹ ಪ್ರತ್ಯೇಕ ವಾರ್ಷಿಕ ಪ್ರತಿಸಾಂವತ್ಸರಿಕ ಶ್ರಾದ್ಧವನ್ನು ಮಾಡಬೇಕು.

6 ಜ್ಯೇಷ್ಠನಿಲ್ಲದಿರುವಾಗ ಕನಿಷ್ಠನು ಮಾಡುವಾಗ ಮೊದಲಿನಿಂದ ಷೋಡಶ ಶ್ರಾದ್ಧಗಳನ್ನು ಮಾತ್ರ ಮಾಡಬೇಕು. ಸಪಿಂಡೀಕರಣವನ್ನು ಮಾಡಕೂಡದು. ವರ್ಷಪರ್ಯಂತರ ಜ್ಯೇಷ್ಠನು ಬರುವುದನ್ನು ನಿರೀಕ್ಷಿಸ ಬೇಕು. ವರ್ಷದ ಮಧ್ಯೆ ಆತ ಬಂದರೆ ಅವನೇ ಸಪಿಂಡೀಕರಣ ಮಾಡ ಬೇಕು. ವರ್ಷವಾದರೂ ಬರಲಿಲ್ಲವೆಂದು ತಿಳಿದರೂ, ಬರುವ ಸಂಭವವೇ ಕಾಣದಿದ್ದರೂ ಕನಿಷ್ಠನೇ ಸಪಿಂಡಿಯನ್ನು ಮಾಡಬೇಕು.

7 ವರ್ಷದೊಳಗೆ ಕನಿಷ್ಠನು ಸಪಿಂಡಿಯನ್ನು ಮಾಡಿದ್ದರೂ ಜ್ಯೇಷ್ಠಪುತ್ರನು ಪುನಃ ಮಾಡಬೇಕು (ಪುನಃ ಮಾಡುವಾಗ ಪ್ರೇತಶಬ್ದೋ ಚ್ಚಾರ ಕೂಡದು.)

8 ಪುತ್ರರಲ್ಲದ ಮತ್ತೊಬ್ಬರು ದಾಹಾದಿ ಸಪಿಂಡಿಪರ್ಯಂತ ಉತ್ತರಕ್ರಿಯೆಗಳನ್ನು ಮಾಡಿದ್ದರೆ ಸಪಿಂಡಿಯನ್ನು ಮಾಸಿಕ ಅನುಮಾಸಿಕ ಗಳನ್ನು ಪುತ್ರನೇ ಪುನಃ ಮಾಡಬೇಕು.

9 ಕನಿಷ್ಠನು ಸಾಗ್ನಿಕನಾದರೆ (ಧಾರಾಗ್ನಿಯನ್ನಿಟ್ಟವನಾದರೆ) ಸಪಿಂಡಿಯನ್ನು ಹನ್ನೆರಡನೆದಿನ ಮಾಡಬಹುದು.

10 ಔರಸ ಪುತ್ರನಿಲ್ಲದಿದ್ದರೆ ದತ್ತುಪುತ್ರನು ಉತ್ತರಕ್ರಿಯಾದಿ ಕ್ರಿಯೆಗೂ ಶ್ರಾದ್ಧಗಳಿಗೂ ಅಧಿಕಾರಿ. (ದತ್ತನೆಂದರೆ ವಿಧಿವತ್ತಾಗಿ ಮಾತಾ ಪಿತೃಗಳು ಸ್ವೀಕರಿಸಿದ ಪುತ್ರನೆಂದರ್ಥ). ದತ್ತಪುತ್ರನಿಲ್ಲದಿದ್ದರೆ ಪೌತ್ರ ಮೊಮ್ಮಗ, ಮೊಮ್ಮಗನಿಲ್ಲದಿದ್ದರೆ ಪ್ರಪೌತ್ರ (ಮರಿಮಗ).

11 ಕೆಲವರು ಔರಸಪುತ್ರನಿಲ್ಲದೆ ಹೋದರೆ, ಪೌತ್ರ, ಪ್ರಪೌತ್ರ, ಇವರಾರೂ ಇಲ್ಲದಿದ್ದರೆ ದತ್ತುಪುತ್ರನು ಅಧಿಕಾರಿಯೆಂದು ಹೇಳುತ್ತಾರೆ.

12 ಉಪನಯನ ಆಗಿರುವ ಪೌತ್ರನಿದ್ದರೂ ಉಪನಯನವಾಗದ ಔರಸಪುತ್ರನೇ ದಾಹಾದಿಗಳಿಗೆ ಅಧಿಕಾರಿಯು, ಆದರೆ ಚೂಡಾಕರ್ಮ ವಾಗಿರಬೇಕು. ಮತ್ತು ಹೆಚ್ಚಿನ ವಯಸ್ಸಾಗಿರಬೇಕು.

13 ಮೂರುವರ್ಷ ತುಂಬಿದ್ದು ಚೌಲವಾಗದಿದ್ದರೂ ಅಧಿಕಾರವಿದೆ, ಉಪನಯನವಾಗದವನಿಂದಲೂ ಮಂತ್ರವನ್ನು ಹೇಳಿಸಿ ಮಾತಾಪಿತೃಗಳ ಉತ್ತರಕ್ರಿಯೆಯನ್ನು ವಾರ್ಷಿಕಶ್ರಾದ್ಧವನ್ನು ಮಾಡಿಸಬೇಕು. ಈತನು ಅಶಕ್ತನಾಗಿದ್ದರೆ ಅಗ್ನಿದಾಹಮಾತ್ರ ಮಂತ್ರಸಹಿತವಾಗಿ ಇವನಿಂದ ಮಾಡಿಸಿ ಉಳಿದ ಕರ್ಮವನ್ನು ಇನ್ನೊಬ್ಬರ ಮೂಲಕ ಮಾಡಿಸಬೇಕು. ಇದೇ ರೀತಿ ಶ್ರಾದ್ಧದಲ್ಲೂ ದರ್ಶಮಹಾಲಯಾದಿಗಳಲ್ಲೂ ಸಂಕಲ್ಪಮಾತ್ರ ಮಾಡಿಸಿ, ಉಳಿದ ಕರ್ಮವನ್ನು ಮತ್ತೊಬ್ಬನಿಂದ ಮಾಡಿಸಬೇಕು.

14 ದತ್ತುಪುತ್ರನಾದರೆ ಉಪನಯನವಾಗಿದ್ದರೆ ಈ ಕರ್ಮಗಳಿಗೆ ಅಧಿಕಾರಿಯಾಗುವನು.

15 ದತ್ತನೂ ಇಲ್ಲದೆ ಪ್ರಪೌತ್ರ (ಮರಿಮಗನೂ) ಇಲ್ಲದೆ ಇದ್ದರೆ ಇಂತಹ ಪತಿಗೆ ಪತ್ನಿಯೇ ಅಧಿಕಾರಿ, ಹಾಗೆಯೆ ಪತ್ನಿಗೆ ಪತಿಯೇ ಅಧಿಕಾರಿ. ದಾಹಮೊದಲಾದ ಉತ್ತರಕ್ರಿಯೆಯನ್ನು ವಾರ್ಷಿಕ ಶ್ರಾದ್ಧಾದಿಗಳನ್ನು ಮಾಡಬೇಕು.

16 ಪತಿಗೂ ಸೌತಿಯ ಮಗನಿದ್ದರೆ ಪತ್ನಿಯ ಕರ್ಮದಲ್ಲಿ ಅಧಿಕಾರ ವಿಲ್ಲ, 'ವಿದಧ್ಯಾದೌರಸಃ ಪುತ್ರಃ ಜನನ್ಯಾ ಔರ್ಧ್ವದೇಹಿಕಂ' ಎಂದು ಶಾಸ್ತ್ರ ವಚನವಿದೆ ತದಭಾವೆ ಸಪತ್ನೀಜಃ ಎಂದಿದೆ. ಹೆಂಡತಿಯೂ ಸಹ ಸಮಂತ್ರಕವಾಗಿಯೇ ಉತ್ತರಕ್ರಿಯೆ ಮಾಡಬೇಕು, ಅಥವಾ ಈಕೆಯ ಹೆಸರಿನಲ್ಲಿ ಮತ್ತೊಬ್ಬ ಮಾಡಬೇಕು. ಅಶಕ್ತಳಾದರೆ ಅಗ್ನಿಸಂಸ್ಕಾರ ಮಾತ್ರ ಮಂತ್ರಪೂರ್ವಕ ಮಾಡಬೇಕು. ಉಳಿದ ಕರ್ಮವನ್ನು ಮತ್ತೊಬ್ಬನು ಮಾಡಬೇಕು. ಹೀಗೆ ಶ್ರಾದ್ಧದಲ್ಲಿ ಸಂಕಲ್ಪಮಾತ್ರ ಈಕೆ ಮಾಡಿ ಉಳಿದದ್ದನ್ನು ಮತ್ತೊಬ್ಬನು ಮಾಡಬೇಕು.

17 ಅವಿಭಕ್ತನಾದ, ಸಹೋದರನಿಗೆ ಸಂಸೃಷ್ಟನಾಗಿದ್ದವನಿಗೆ ಧನ ವನ್ನು ತೆಗೆದುಕೊಳ್ಳುವ ಅಧಿಕಾರವಿದ್ದರೂ ಪತ್ನಿಗೆ ಪತಿಯಕರ್ಮಾಧಿಕಾರವು ವಿಭಕ್ತರಾದ ಸಹೋದರರು ಸೇರಿಕೊಂಡಿದ್ದರೂ ಪತಿಯಧನಕ್ಕೆ ಪತ್ನಿಯು

ಭಾಗಿ. 1 ಸಂಸೃಷ್ಟನೆಂದರೆ-ಮೊದಲು ವಿಭಕ್ತನಾಗಿದ್ದು ತನ್ನಧನವನ್ನು ಸಹೋದರರ ಧನದೊಂದಿಗೆ ಸೇರಿಸಿ ಒಟ್ಟುಮಾಡಿ ಒಂದೇಪಾಕವನ್ನು ಅವಲಂಬಿಸಿದವನು.

18 ಪತ್ನಿಯಿಲ್ಲವಾದರೆ ವಿಭಕ್ತನಾಗಿ ಬೇರೆಯಾಗಿದ್ದ ಸಹೋದರನ ಮಗಳೆ ಕರ್ಮಾಧಿಕಾರಿ ಮತ್ತು ಧನಕ್ಕೆ ಹಕ್ಕುಬಾಧ್ಯಳು.

19 ಅವರಲ್ಲೂ ವಿವಾಹಿತಳಾದವಳೆ ಪಿಂಡಹಾಕುವುದಕ್ಕೆ ಅಧಿಕಾರಿ (ಹಕ್ಕಿರುವಳು) ವಿವಾಹಿತಳಾಗದವಳು ಧನಕ್ಕೆ ಭಾಗಿಯಾಗುವಳು.

20 ಮಗಳಿಲ್ಲದಿದ್ದರೆ ದೌಹಿತ್ರನೆ ತಾತನ ಧನಕ್ಕೆ ಭಾಗಿ, ಮತ್ತು ಕರ್ಮಾಧಿಕಾರಿ.

21 ದೌಹಿತ್ರನಿಲ್ಲದಿದ್ದರೆ ಸಹೋದರ, ಸಹೋದರನಿಲ್ಲದಿದ್ದರೆ ಸಹೋದರನ ಮಗ ಅಧಿಕಾರಿ.

22 ಅವಿಭಕ್ತನಿಗೆ ಮತ್ತು ಸಂಸೃಷ್ಟನಿಗೂ ಪತ್ನಿಯಿಲ್ಲದಿದ್ದರೆ ಸಹೋದರನೇ ಅಧಿಕಾರಿ.

23 ಸೋದರನು ಸೋದರನಲ್ಲದವನೂ ಒಂದುಕಡೆ ಇದ್ದರೆ ಸೋದರನೇ ಅಧಿಕಾರಿ, ಅವರಲ್ಲೂ ಜ್ಯೇಷ್ಠ ಕನಿಷ್ಠರಿದ್ದರೆ ಕನಿಷ್ಠನೇ ಅಧಿಕಾರಿ. ಕನಿಷ್ಠನಿಲ್ಲದಿದ್ದರೆ ಜ್ಯೇಷ್ಠ ಸಹೋದರನೇ ಅಧಿಕಾರಿ.

24 ಕನಿಷ್ಠರು ಅನೇಕರಿದ್ದರೆ ಮೃತಪಟ್ಟವನಿಗೆ ಹತ್ತಿರದ ಕನಿಷ್ಠನೇ ಅಧಿಕಾರಿ, ಇವನಿಲ್ಲದಿದ್ದರೆ ಇವನ ಒತ್ತಿನವನು.

25 ಹೀಗೆಯೇ ಅನೇಕರು ಜ್ಯೇಷ್ಠರಿದ್ದರೆ ಮೃತಪಟ್ಟವನ ಒತ್ತಿನವನು ಅಧಿಕಾರಿಯು, ಸೋದರಭ್ರಾತೃ ಇಲ್ಲವಾದರೆ ಸೌತಿಯ ಮಗನ ಸಹೋದರನು.

26 ಭ್ರಾತೃ ಇಲ್ಲವಾದರ ಭ್ರಾತೃಪುತ್ರ. ಅವರಲ್ಲೂ ಒಡಹುಟ್ಟಿದ ಭ್ರಾತೃವಿನ ಪುತ್ರನೆ ಮುಖ್ಯ, ಇವನಿಲ್ಲವಾದರೆ ಸೌತಿಮಕ್ಕಳಾದ ಭ್ರಾತೃವಿನ ಪುತ್ರ, ಇವನೂ ಇಲ್ಲವಾದರೆ ತಂದೆ, ತಂದೆಯೂ ಇಲ್ಲವಾದರೆ ತಾಯಿ, ತಾಯಿಯಿಲ್ಲವಾದರೆ ಸೊಸೆ, ಸೊಸೆಯಿಲ್ಲದಿದ್ದರೆ ಭಗಿನಿ (ಅಕ್ಕ) ಭಗನಿಯಿಲ್ಲ ವಾದರೆ ಭಗಿನೀಪುತ್ರ (ಅಕ್ಕನಮಗ) ಇವನೂ ಇಲ್ಲವಾದರೆ, ಪಿತೃವ್ಯ (ದೊಡ್ಡಪ್ಪ ಚಿಕ್ಕಪ್ಪಂದಿರುಗಳು) ಇವರ ಮಕ್ಕಳು ಮೊದಲಾದ ಜ್ಞಾತಿಗಳು ಸಪಿಂಡರು) ಸಪಿಂಡರೂ ಇಲ್ಲದೆ ಇದ್ದರೆ **ಸೋದಕರು,** ಇವರೂ ಇಲ್ಲದೇ ಇದ್ದರೆ ಗೋತ್ರದಲ್ಲಿ ಹುಟ್ಟಿದವರು.

27 ಗೋತ್ರಜರು ಇಲ್ಲವಾದರೆ ಮಾತಾಮಹ (ತಾಯಿಯ ತಂದೆ) ಅಥವಾ ಮಾತುಲ (ಸೋದರಮಾವ) ಅವನ ಮಗ ಮುಂತಾದ ಮಾತೃವಿನ ಸಪಿಂಡರು-ಅಧಿಕಾರಿಗಳು.

28 ಮಾತೃಸಪಿಂಡರು ಇಲ್ಲವಾದರ ತನ್ನ ಪಿತೃಷ್ವಸೃ ಸೋದ ರತ್ತೆಯ ಮಕ್ಕಳು, ಮಾತೃಷ್ವಸೃ (ತಾಯಿಯ ಸೋದರಿಯರು ಚಿಕ್ಕಮ್ಮ ದೊಡ್ಡಮ್ಮ) ನವರ ಮಕ್ಕಳು.

29 ಇವರೂ ಇಲ್ಲವಾದರೆ ತಂದೆಯ ಸೋದರತ್ತೆ ಮಕ್ಕಳು, ತಂದೆಯ-ತಾಯಿಯ ಅಕ್ಕತಂಗಿಯರ ಮಕ್ಕಳು, ತಂದೆಯ ಸೋದರ ಮಾವನ ಮಕ್ಕಳೆಂಬ ಪಿತೃಬಾಂದವರು, ಅಧಿಕಾರಿಗಳು.

30 ಹೀಗೆ ಮಾತೃವಿನ-ಸೋದರತ್ತೆ ಮಕ್ಕಳೂ. ಮಾತೃವಿನ ಮಾತೆಯ ಅಕ್ಕತಂಗಿಯರ ಮಕ್ಕಳು, ಇಂತೆಂಬ ಮಾತೃಬಾಂಧವರು, ಪಿತೃ ಬಂಧುಗಳಿಲ್ಲವಾದರೆ ಇವರು ಅಧಿಕಾರಿಗಳು.

31 ಇವರಾರೂ ಇಲ್ಲವಾದರೆ ಶಿಷ್ಯ ಶಿಷ್ಯನಿಲ್ಲವಾದರೆ ಜಾಮಾತ (ಅಳಿಯ) ಇವನೂ ಇಲ್ಲವಾದರೆ, ಶ್ವಶುರ (ಹೆಣ್ಣುಕೊಟ್ಟಮಾವ ಜಾಮಾತ ನಿಗೆ ಶ್ವಶುರ) ಇವನೂ ಇಲ್ಲವಾದರೆ ಸ್ನೇಹಿತ, ಇವನೂ ಇಲ್ಲವಾದರೆ ಇವನ ಆಸ್ತಿಯನ್ನು ಹಣವನ್ನೂ ಸ್ವೀಕರಿಸುವವನು.

ಬ್ರಾಹ್ಮಣೇತರರಿಗೆ ಆದರೆ ರಾಜನು (ರಾಜ್ಯಾಧಿಕಾರಿಯು) ಈತನ ಧನವನ್ನು ಸ್ವೀಕರಿಸಿ ಬೆ.ರೆಯುವರಿಂದ ಉತ್ತರಕ್ರಿಯೆಯನ್ನು ಮಾಡಿಸಬೇಕು.

32 ಬ್ರಾಹ್ಮಣಾದಿವರ್ಣದವರು ಸಾಯುವ ಸ್ಥಿತಿಯಲ್ಲಿದ್ದರೆ ಇವರು ಒಬ್ಬ ಧರ್ಮಪುತ್ರನನ್ನು ಸ್ವೀಕರಿಸಿ ಅವನಿಂದ ಮಾಡಿಸಬೇಕು.

## ಸ್ತ್ರೀಯರ ದಾಹಾದಿ ಅಧಿಕಾರಿಗಳ ಅನುಕ್ರಮ

1 ಅವಿವಾಹಿತಸ್ತ್ರೀಯು ಮೃತಪಟ್ಟರೆ ಅವಳಿಗೆ ತಂದೆಯೆ ಅಧಿಕಾರಿ ಅವನಿಲ್ಲವಾದರೆ ಸಹೋದರರು.

2 ವಿವಾಹಿತಳಾಗಿದ್ದರೆ ಇವಳಿಗೆ ಪುತ್ರರಿಲ್ಲದಿದ್ದರೆ ಸ ವ ತಿ ಯ ಮಕ್ಕಳು, ಅವರೂ ಇಲ್ಲವಾದರೆ ಪೌತ್ರರು, ಪ್ರಪೌತ್ರರು ಇವರಾರೂ ಇಲ್ಲವಾದರೆ ಪತಿಯೇ ಅಧಿಕಾರಿ. ಪತಿಯು ಇಲ್ಲದಾದರೆ ಮಗಳು, ಮಗಳಿಲ್ಲ ವಾದರೆ ದೌಹಿತ್ರ ಇವನಿಲ್ಲವಾದರೆ ಪತಿಯ ಸಹೋದರರು, ಇವರಿಲ್ಲವಾದರೆ ಪತಿಯ ಸಹೋದರನ ಮಗ, ಇವನೂ ಇಲ್ಲವಾದರೆ ಪಿತಾ, ಪಿತೃ ಇಲ್ಲವಾದರ ಸಹೋದರ, ಸಹೋದರನಿಲ್ಲವಾದರೆ ಸಹೋದರನ ಪುತ್ರಾದಿಗಳು.

ಸರ್ವತ್ರ ಪುತ್ರಭಿನ್ನರಿಗ ಪುತ್ರನು ಹತ್ತಿರವಲ್ಲಿ ಇಲ್ಲದಿದ್ದರೆ ಅಥವಾ ಪುತ್ರನಿಲ್ಲದೆ ಹೋದರೆ ಮಾತ್ರ ಕರ್ತೃತ್ವವು ಬರುವುದೆಂದು ತಿಳಿಯಬೇಕು.

## ಪುತ್ರಭಿನ್ನರಿಗೆ ಮೃತನ ಉತ್ತರಕ್ರಿಯೆಗಳಲ್ಲಿ ಎಲ್ಲಿಯ ಪರ್ಯಂತ ಅಧಿಕಾರ

1 ಪುತ್ರರು ಹತ್ತಿರದಲ್ಲಿ ಇಲ್ಲದಿರುವಾಗ ಪುತ್ರಭಿನ್ನರು ಮೃತನ ದಹನ ಸಂಸ್ಕಾರದಿಂದ ಆರಂಭಿಸಿ ಏಕೋದ್ದಿಷ್ಟಪರ್ಯಂತ ಕರ್ಮಗಳನ್ನು ಮಾಡಬೇಕು, ಆದರೆ ಸಪಿಂಡೀಕರಣ ಮಾಡಬಾರದು.

2 ಪುತ್ರರೆ ಇಲ್ಲವಾದರೆ ಬೇರೆಜನರೂ ಸಪಿಂಡಿಯನ್ನು ಮಾಡಬೇಕು.

3 ಅವರಲ್ಲೂ ಸಪಿಂಡರೆ ಮೊದಲಾದವರು ದಹನಕಾರ್ಯದಿಂದ ಆರಂಭಿಸಿ ದಶಾಹಕ್ರಿಯೆಗಳನ್ನು ಮಾಡಬೇಕು. ಈ ದಶಾಹಕ್ರಿಯೆಗಳಿಗೆ **ಪೂರ್ವಕ್ರಿಯೆಯೆಂದು ಹೆಸರು.**

4 ಹನ್ನೊಂದನೆ ದಿನದ ಕ್ರಿಯೆಯನ್ನು ಆರಂಭಿಸಿ ಸಪಿಂಡಿಕರಣಾಂತ ಕ್ರಿಯೆಗಳು ಮಧ್ಯಮ ಕ್ರಿಯೆಯೆಂದು ಉಕ್ತವಾಗಿದೆ. ಇವುಗಳನ್ನು ಸಪಿಂಡರೇ ಮೊದಲಾದವರು ಅವಶ್ಯ ಮಾಡಬೇಕೆಂಬ ನಿಯಮವಿಲ್ಲ. (ಕೃತಾಕೃತ),

5 ಸಪಿಂಡಿಯಾದ ಮೇಲೆ ಮಾಡುವ ಅನುಮಾಸಿಕ ತಿಂಗಳು ಮಾಸಿಕಗಳು, ಆಬ್ದಿಕಾದಿಕ್ರಿಯೆಗಳು ಉತ್ತರಕ್ರಿಯೆಗಳೆಂದು ಹೇಳಲ್ಪಟ್ಟಿವೆ, ಇವುಗಳನ್ನು ಸಪಿಂಡರೆ ಮೊದಲಾದ ಕರ್ತೃಗಳು ಮಾಡಬೇಕಾಗಿಲ್ಲ.

ಇದೂಸಹ ಮೃತನ ವೃತ್ತಿಗಳನ್ನೂ, ಸ್ಥಿರಾಸ್ತಿ, ಚರಾಸ್ತಿ ಧನಾದಿಗಳನ್ನು ಸ್ವೀಕರಿಸದೆ ಇರುವಾಗ ಹೇಳಿದ್ದು.

6 ಮೃತನ ಆಸ್ತಿ ಅಥವಾ ಧನವನ್ನು ಸ್ವೀಕರಿಸಿದ್ದರೆ ಸಪಿಂಡ ಮೊದಲಾದವರೂ ಸಹ ಮೇಲೆ ಹೇಳಿದ ಮಧ್ಯಮ-ಉತ್ತರಕ್ರಿಯೆಗಳನ್ನು ಅವಶ್ಯ ಮಾಡಲೇಬೇಕು.

7 ರಾಜ ಅಥವಾ ಸರ್ಕಾರದ ಅಧಿಕಾರಿಗಳು ವಾರಸ್ದಾರರಿಲ್ಲದ ಮೃತಾತ್ಮನ ಹಣವನ್ನು ತೆಗೆದುಕೊಂಡು ಮೃತನ ಜಾತಿಯವರಿಂದ ಉತ್ತರ ಕ್ರಿಯೆಗಳನ್ನು ಮಾಡಿಸಬೇಕು.

8 ಮೃತನಿಗೆ ಹಣವಿಲ್ಲದಿದ್ದರೂ ಸಪಿಂಡರೆ ಮೊದಲಾದವರು ತಮ್ಮ ಸ್ವಂತಹಣದಿಂದ ಸಪಿಂಡೀಕರಣಾಂತ ಕ್ರಿಯೆಗಳನ್ನು ಮಾಡಬೇಕು.

ಮೃತನ ಹಣವನ್ನು ಸ್ವೀಕರಿಸಿಯೂ ಪ್ರೇತಸಂಸ್ಕಾರಗಳನ್ನು ಮಾಡದಿದ್ದರೆ ವರ್ಣವಧಪ್ರಾಯಶ್ಚಿತ್ತಕ್ಕೆ ಗುರಿಯಾಗುವರು (ದೋಷಿಯಾಗುವರು.)

9 ಪುತ್ರನೇ ಮೊದಲಾಗಿ ಸಹೋದರಸಂತತಿ ಪರ್ಯಂತವಿರುವ ಕರ್ತೃಗಳೂ, ದೌಹಿತ್ರರೂ, ಅವರ ಮಕ್ಕಳು ಸಹ ಮೃತನ ಧನವನ್ನು ತೆಗೆದುಕೊಳ್ಳಲಿ, ಅಥವಾ ಬಿಡಲಿ ಮೇಲೆ ಹೇಳಿದ ವರ್ಷಾಬ್ದಿಕಪರ್ಯಂತ ಕರ್ಮಗಳನ್ನು ಮಾಡಲೇಬೇಕು.

10 ಸ್ತ್ರೀಯರಿಗೆ ಸಪಿಂಡಿಯಾದ ಮೇಲೆ ಮಾಡುವ ಮಾಸಿಕಾದಿಗಳನ್ನು ವಾರ್ಷಿಕಶ್ರಾದ್ಧಗಳನ್ನು ಮೃತದಿನದಲ್ಲಿ ಆಚರಿಸಬೇಕು. ಅಮಾವಾಸ್ಯಾದಿಗಳಲ್ಲಿ ಮಾಡಬೇಕಾಗಿಲ್ಲ. ಪತಿಯ ಶ್ರಾದ್ಧದಿಂದಲೆ ಸ್ತ್ರೀಯರ ತೃಪ್ತಿಯಾಗುವುದು. ಆದರೆ ಮೊದಲಿನ ದಹನಾದಿ ದಶಾಹಾಂತ ಕರ್ಮಗಳನ್ನು ಏಕಾದಶಾಹ ಸಪಿಂಡಿಗಳನ್ನು ಪ್ರತ್ಯೇಕ ಮಾಡಲೇಬೇಕು.

## ವಿಶೇಷವಿಷಯ

ಬ್ರಾಹ್ಮಣರು ಬೇರೆಜಾತಿಯ ವರಿಗೆ ಪಿತೃಕಾರ್ಯವನ್ನು ಮಾಡಬಾರದು ಕಾಮದಿಂದಲೊ, ಮೃತನ ಧನ ಲೋಭದಿಂದಲೋ, ಭಯದಿಂದಲೋ ಅಜ್ಞಾನದಿಂದಲೋ ಮಾಡಿದರೆ ಪುನಃ ಆಜಾತಿಯಲ್ಲೇ ಹುಟ್ಟುವನು.

ಬ್ರಾಹ್ಮಣಸ್ತ್ವನ್ಯ ವರ್ಣಾನಾಂ ನಕುರ್ಯಾತ್ ಕರ್ಮಪೈತೃಕಂ ।
ಕಾಮಾತ್‌ಲೋಭಾತ್ ಮೋಹಾತ್‌ಕೃತ್ವಾ ತಜ್ಜಾತಿತಾಂಪ್ರಜೇತ್ ॥

ಶೂದ್ರನೂ ಸಹ ಬ್ರಾಹ್ಮಣನಿಗೆ ಪಿತೃಕಾರ್ಯ ಮಾಡಬಾರದು.

## ದತ್ತಪುತ್ರನ ಕರ್ತವ್ಯಗಳು

1 ದತ್ತುಪುತ್ರನು ತನ್ನ ಜನಕಪಿತೃವಿಗೆ ಪುತ್ರಾದಿಗಳು ಬೇರೆ ಇಲ್ಲವಾದರೆ ಪಿತೃವಿನ ಶ್ರಾದ್ಧವನ್ನು ಮಾಡಬೇಕು, ಅವನ ಹಣವನ್ನು ತಾನೇ ಸ್ವೀಕರಿಸಬೇಕು.

2 ಜನಕಪಿತ, ಪಾಲಕಪಿತರು ಇಬ್ಬರಿಗೂ ಸಂತತಿಯಿಲ್ಲವಾದರೆ, ಅವರಿಬ್ಬರಿಗೂ ಶ್ರಾದ್ಧವನ್ನೂ ಪ್ರತಿವಾರ್ಷಿಕ ಶ್ರಾದ್ಧವನ್ನೂ ತಾನೇ ಮಾಡಬೇಕು. ಅವರ ಧನವನ್ನೂ ಸ್ವೀಕರಿಸಬೇಕು.

3 ಅಮಾವಾಸ್ಯೆ ಮಹಾಲಯಾದಿಗಳಲ್ಲೂ ಅವರಿಬ್ಬರಿಗೂ ಶ್ರಾದ್ಧ ತರ್ಪಣಗಳನ್ನು ಮಾಡಬೇಕು. ಇಬ್ಬರಿಗೂ ಬೇರೆ ಬೇರೆ ಪಿಂಡದಾನ ಮಾಡ ಬೇಕು. (ಅಥವಾ ಪಿತ್ರಾದಿ ಉಭಯರನ್ನು ಉದ್ದೇಶಿಸಿ ಒಂದೊಂದು ಪಿಂಡ ವನ್ನಾದರೂ ಹಾಕಬೇಕು).

4 ದತ್ತುಪುತ್ರನ ಪುತ್ರನು, ದತ್ತುತಂದೆಗೆ ಪುತ್ರಾದಿಗಳು ಯಾರೂ ಬೇರೆಯಿಲ್ಲದಿದ್ದರೆ ತನ್ನ ಪಿತೃವನ್ನು ಪಿತಾಮಹರಿಬ್ಬರನ್ನೂ ಪ್ರಪಿತಾಮಹ ರಿಬ್ಬರನ್ನೂ ಉಚ್ಚರಿಸಿ ದರ್ಶಾದಿ ಶ್ರಾದ್ಧವನ್ನು (ತರ್ಪಣ) ವನ್ನು ಮಾಡ ಬೇಕು. ಹಾಗೂ ಅವರ ಧನವನ್ನು ತೆಗೆದುಕೊಳ್ಳಬೇಕು.

5 ದತ್ತುಪೌತ್ರನೂ ಆವನ ಜನಕಪಿತೃವಿನ ಕುಲದಲ್ಲಿ ಪ್ರಪಿತಾಮಹ ನಿಗೆ ಪುತ್ರಾದಿಗಳು ಇಲ್ಲವಾದರೆ ಪಿತೃವನ್ನು ಪಿತಾಮಹನನ್ನು ಒಬ್ಬಬ್ಬರನ್ನೂ ಉಚ್ಚರಿಸಿ ಪ್ರಪಿತಾಮಹರಿಬ್ಬರನ್ನು ಉಚ್ಚರಿಸಿ ದರ್ಶಾದಿ ಶ್ರಾದ್ಧಗಳನ್ನು ಆಚರಿಸಬೇಕು. ಇವರಿಗೆ ತಮ್ಮ ತಮ್ಮ ಹೆಂಡರಲ್ಲಿ ಮಕ್ಕಳು ಹುಟ್ಟಲಿಲ್ಲ ವಾದರೆ ಅವರ ಆಸ್ತಿ ಹಣವನ್ನು ಈ ದತ್ತಪೌತ್ರನೇ ಸ್ವೀಕರಿಸಬೇಕು. ತ್ರಿಪುರುಷರಿಗೂ ಪಿಂಡ ಹಾಕಬೇಕು.

6 ಜನಕ-ಪಾಲಕಪಿತೃಗಳಿಗೆ ಪುತ್ರಾದಿಗಳು ಇದ್ದರೆ ಆವಾಗ ದತ್ತು ಪುತ್ರನು ಇಬ್ಬರಿಗೂ ಉತ್ತರಕ್ರಿಯೆಗಳನ್ನಾಗಲಿ ವಾರ್ಷಿಕ ಶ್ರಾದ್ಧವನ್ನಾಗಲಿ ಮಾಡಬೇಕಾಗಿಲ್ಲ. ಆದರೆ ಪಾಲಕಪಿತೃವಿಗೆ ಔರಸಹುಟ್ಟಿದನಂತರ ದತ್ತನಿಗೆ ಆಸ್ತಿವಿಭಾಗವಾದರೆ ಈತನು ಅಮಾವಾಸ್ಯಾ-ಮಹಾಲಯ ಮೊದಲಾದ ಶ್ರಾದ್ಧಗಳನ್ನು (ತರ್ಪಣಗಳನ್ನು) ಪಾಲಕಪಿತೃವಿಗೆ ಮಾಡಬೇಕು.

## ಬ್ರಹ್ಮಚಾರಿಯ ವಿಷಯದಲ್ಲಿ ನಿರ್ಣಯ

1 ಬ್ರಹ್ಮಚಾರಿಯು ಮೃತಪಟ್ಟರೆ ಈತನ ಉತ್ತರ ಕ್ರಿಯೆಯನ್ನು ಮಾಸಿಕಾ-ಅಬ್ದಿಕಮೊದಲಾದ ಶ್ರಾದ್ಧಗಳನ್ನು ತಂದೆಯೆಮಾಡಬೇಕು ತಂದೆ ಯಿಲ್ಲದೆ ಇದ್ದರೆ ತಾಯಿದೂಡಬೇಕು. ಅಥವಾ (ತಾಯಿಯೆ ಸಂಕಲ್ಪಮಾಡಿ) ಇತರರಿಂದ ಎಲ್ಲ ಮಾಡಿಸಬೇಕು.

2 ಬ್ರಹ್ಮಚಾರಿಯು-ಮಾತಾಪಿತೃಗಳ, ಮಾತಾಮಹ ಉಪಾಧ್ಯಾಯ ಆಚಾರ್ಯ-ಇವರನ್ನು ಬಿಟ್ಟು ಉಳಿದ ಜನರಿಗೆ ಶವಸಂಸ್ಕಾರ ಉತ್ತರಕ್ರಿಯೆಗಳನ್ನು ಮಾಡಬಾರದು, ಬೇರೆಕರ್ತೃಗಳು ಇಲ್ಲದಿದ್ದರೆಮಾತ್ರ ಮಾತೃ-ಪಿತೃ ಮಾತಾಮಹ ಆಚಾರ್ಯರಿಗೆ ದಾಹಾದಿಗಳನ್ನು ಮಾಡಬಹುದು. ಹತ್ತು ದಿನದ ಕರ್ಮಗಳನ್ನು ಆಚರಿಸುವಾಗ ಹತ್ತುದಿನವೂ ಅಶೌಚವಿರಬೇಕು. ಕೇವಲ ದಹನ ಸಂಸ್ಕಾರಮಾತ್ರ ಮಾಡಿದರೆ ಆ ಒಂದುದಿ ಅಶೌಚವಿರಬೇಕು.

ಆವಾಗ ಬ್ರಹ್ಮಚಾರಿಯ ನಿತ್ಯಕರ್ಮಗಳಿಗೆ ಲೋಪವಿಲ್ಲ.

3 ತಾನು ಆಶೌಚಿಯಾಗಿದ್ದರೂ ಇತರೆ ಅಶೌಚಿಗಳ ಅನ್ನವನ್ನು ಭುಂಜಿಸಬಾರದು, ಅವರ ಜೊತೆಯಲ್ಲೂ ಇರಬಾರದು. ಭುಂಜಿಸಿದರೆ ವಾಸ ಮಾಡಿದರೆ ಪ್ರಾಯಶ್ಚಿತ್ತವಿದೆ. ಪ್ರಾಯಶ್ಚಿತ್ತ ಪುನರುಪನಯನವೂ ಇದೆ. ಇದು ಮತ್ತೊಬ್ಬರಿಗೂ ದಾಹಾದಿ ಸಂಸ್ಕಾರಗಳನ್ನು ಮಾಡಿದಲ್ಲಿ ಇದೆ.

4 ಧರ್ಮಾರ್ಥವಾಗಿ ಯಾರಾದರೂ ಸವರ್ಣೀಯರ ದಾಹಾದಿ ಸಂಸ್ಕಾರವನ್ನು ಉತ್ತರಕ್ರಿಯೆಯನ್ನು ಮಾಡಿದರೆ ಸಂಪತ್ತು ಮೊದಲಾದವು ಫಲಿಸುವವು.

5 ದ್ವಿಜಸ್ತ್ರೀಯರು ವ್ರತಉದ್ಯಾಪನಾದಿಗಳಲ್ಲ ಮಾಡುವಂತೆ ಸಂಕಲ್ಪ ಮಾಡಿ ವೈದಿಕಮಂತ್ರಗಳಿಂದ ಬ್ರಾಹ್ಮಣರ ಮೂಲಕ ಸಮಸ್ತ ಶ್ರಾದ್ಧಗಳನ್ನು ಮಾಡಿಸಬೇಕು ಎಂಬುದೆ ಪಾರಿಜಾತಕಾರಮತ.

6 ರಾಜಕಾರ್ಯನಿಯುಕ್ತರಿಗೂ ಬಂಧನದಲ್ಲಿರುವವರಿಗೂ ಇತರೆ ಸಮಸ್ತ ಆಪತ್ತುಗಳಲ್ಲೂ ತಾನೂ ಮಾಡುವುದಕ್ಕೆ ಆಗದೆ ಇದ್ದರೆ ಬ್ರಾಹ್ಮಣನ ಮೂಲಕ ಶ್ರಾದ್ಧವನ್ನು ಮಾಡಿಸಬೇಕು.

ರಾಜಕಾರ್ಯ ನಿಯುಕ್ತಸ್ಯ ಬಂಧನಿಗ್ರಹವರ್ತಿನಃ ।
ವ್ಯಸನೇಷು ಚ ಸರ್ವೇಷು ಶ್ರಾದ್ಧಂ ವಿಪ್ರೇಣಕಾರಯೇತ್ ॥

ಶೂದ್ರರಿಗೆ ಅಮಂತ್ರಕವಾಗಿಯೋ ಪೌರಾಣಿಕಮಂತ್ರಗಳಿಂದಲೋ ಸಂಸ್ಕಾರಾದಿಗಳನ್ನು ನಡೆಯಿಸಬೇಕು.

## ಶ್ರಾದ್ಧ ಶಬ್ದದ ಅರ್ಥ

ಪಿತೃಮಾತೃವೊದಲಾದವರು ಮೃತಪಟ್ಟಾಗ ಅವರನ್ನು ಉದ್ದೇಶಿಸಿ ವಿಹಿತವಾದ ಕಾಲದೇಶಗಳಲ್ಲಿ ಪಕ್ವಾನ್ನ-ಆಮಾನ್ನ-ಹಿರಣ್ಯಗಳಲ್ಲಿ ಒಂದನ್ನು ವಿಧಿವತ್ತಾಗಿ ದಾನಮಾಡುವುದು. ಇದೇ ಕರ್ಮಕ್ಕೆ ಶ್ರಾದ್ಧವೆಂದು ಹೆಸರು. ಇವರಲ್ಲಿ ಅಗ್ನೌಕರಣ, ಪಾಣಿಹೋಮ, ಪಿಂಡದಾನ, ಬ್ರಾಹ್ಮಣಭೋಜನ ಇವು ಪ್ರಧಾನ.

ಹೋಮಶ್ಚ ಪಿಂಡದಾನಂಚ ತಥಾಬ್ರಾಹ್ಮಣಭೋಜನಂ ।
ಶ್ರಾದ್ಧ ಶಬ್ದಾಭಿಧೇಯಂ ಸ್ಯಾತ್ ಏಕಸ್ಮಿನ್ನಪಚಾರಿಕಂ ॥

ಹೀಗೆ ವಚನವಂತೆ, ಅಶಕ್ತಿಯಿಂದಲೂ ಪಿಂಡಪ್ರದಾನಾದಿಗಳನ್ನು ಮಾಡ ದಿದ್ದರೆ ಬ್ರಾಹ್ಮಣಭೋಜನ ವೊದಲಾದ ಒಂದೊಂದು ಕರ್ಮವನ್ನೆ ಶ್ರಾದ್ಧ ವೆಂದು ಹೇಳಲ್ಪಡುವುದು, ಗೌಣವಾಗಿ-ಇದು ವಚನದ ಕೊನೆಪಾದದ ಅರ್ಥ. ಬೇರೆಯೊಂದು ವಚನ.

ಯಜುಷಾಂ ಪಿಂಡದಾನಂ ತು ಬಹ್ವೃಚಾನಾಂ ದ್ವಿಜಾರ್ಚನಂ ।
ಶ್ರಾದ್ಧ ಶಬ್ದಾಭಿಧೇಯಂಸ್ಯಾತ್ ಉಭಯಂ ಸಾಮವೇದಿನಾಮ್ ॥

ಇವರಂತೆ ಯಜುರ್ವೇದಿಗಳಿಗೆ ಪಿಂಡದಾನವೂ, ಋಗ್ವೇದಿಗಳಿಗೆ ಬ್ರಾಹ್ಮಣ ಪೂಜೆಯೂ, ಸಾಮವೇದಿಗಳಿಗೆ ಈ ಎರಡೂ ಮುಖ್ಯವಾಗಿ ಶ್ರಾದ್ಧವೆಂದು ಹೇಳಲ್ಪಡುವುದು. ಅಶ್ರದ್ಧೆಯಿಂದ ಮಾಡುವಲ್ಲಿ ಪಿತೃಗಳು ನಿಲ್ಲುವುದಿಲ್ಲ ವೆಂತಲೂ ಶ್ರಾದ್ಧ ಮಾಡದಿರುವ ನಾಸ್ತಿಕನ ರಕ್ತವನ್ನು ಪಿತೃಗಳು ಹೀರು ವರೆಂದು ಹೇಳಿದ್ದಾರೆ. ಈ ಕರ್ಮಕ್ಕೆ ಶ್ರದ್ಧೆಯೇ ಪರಮ ಮುಖ್ಯ

ವಾದ್ದರಿಂದ ಅದರಿಂದ ಮಾಡುವ ಪಿತೃಕರ್ಮಕ್ಕೆ ಶ್ರಾದ್ಧವೆಂಬ ವಿಶೇಷ ಹೆಸರು ಬಂದಿದೆ.

ಶ್ರಾದ್ಧಭೇದಗಳು–ಪಾರ್ವಣಶ್ರಾದ್ಧ, ಏಕೋದ್ದಿಷ್ಟಶ್ರಾದ್ಧ, ನಾಂದೀ ಶ್ರಾದ್ಧ, ಸಪಿಂಡೀಕರಣಶ್ರಾದ್ಧ-ಎಂದು ನಾಲ್ಕು ಬಗೆ.

ಪಾರ್ವಣವಿಚಾರ :—ಪಿತೃವೊದಲಾದ ಮೂರುಪಿತೃಗಳನ್ನು ಉದ್ದೇಶಿಸಿ ವಿಹಿತವಾದ ಮೂರು ಪಿಂಡಗಳನ್ನು ಹಾಕುವ ಶ್ರಾದ್ಧವೇ ಪಾರ್ವಣ. ಇದು ಏಕಪಾರ್ವಣ, ದ್ವಿಪಾರ್ವಣ, ತ್ರಿಪಾರ್ವಣವೆಂದು ಮೂರಬಗೆ ಪಿತ್ರಾದಿಗಳಿಗೆ ಮೃತತಿಥಿಯಲ್ಲಿ ಮಾಡುವ ಪ್ರತಿಸಾಂವತ್ಸರಿಕ ಶ್ರಾದ್ಧವು **ಏಕಪಾರ್ವಣ,** ಅಮಾವಾಸ್ಯಾದಿ ೯೬ ಶ್ರಾದ್ಧಗಳೂ ನಿತ್ಯಶ್ರಾದ್ಧಗಳೂ, ಮಹಾಲಯ ಅನ್ವಷ್ಟಕ್ಯ ಶ್ರಾದ್ಧಗಳನ್ನುಬಿಟ್ಟು ಈ ಎಲ್ಲವೂ **ದ್ವಿಪಾರ್ವಣಕ ಅನ್ವಷ್ಟಕಾಶ್ರಾದ್ಧವು ತ್ರಿಪಾರ್ವಣಕ.**

ಏಕೆಂದರೆ ಸಪತ್ನೀಕ ಪಿತೃ-ಪಿತಾಮಹ ಪ್ರಪಿತಾಮಹ ತ್ರಯಿ. ಸಪತ್ನೀಕ ಮಾತಾಮಹ ಮಾತುಃ ಪಿತಾಮಹ ಮಾತುಃ ಪ್ರಪಿತಾಮಹ ತ್ರಯ ಈ ಎರಡನ್ನೆ ಉದ್ದೇಶಿಸಿ ಮಾಡುವುದರಿಂದ ದ್ವಿಪಾರ್ವಣಕ.

ಅನ್ವಷ್ಟಕಾಶ್ರಾದ್ಧ ತ್ರಿಪಾರ್ವಣಕ ಪಿತ್ರಾದಿತ್ರಯ ಮಾತ್ರಾದಿತ್ರಯ. ಸಪತ್ನೀಕ ಮಾತಾಮಹಾದಿತ್ರಯ ಈ ಮೂರನ್ನುದ್ದೇಶಿಸಿ ಮಾಡುವುದು. ಮಹಾಲಯ ಶ್ರಾದ್ಧ, ತೀರ್ಥಶ್ರಾದ್ಧ ಇವು ಪಾರ್ವಣ ಏಕೋದ್ದಿಷ್ಟ ರೂಪವಾದದ್ದು. ಪಿತ್ರಾದಿ ಪಾರ್ವಣತ್ರಯ ಪತ್ನೀ ಮೊದಲಾದ ಏಕೋದ್ದಿಷ್ಟಗಣವು ಇವುಗಳಲ್ಲಿ ಉದ್ದೇಶಿಸಲ್ಪಡುವುದು. ಕೆಲವರು ಮಹಾಲಯ, ತೀರ್ಥಶ್ರಾದ್ಧಗಳನ್ನು ಮಾಡುವಾಗ ಮಾತಾಮಹ ಮಾತಾಮಹಿ ಇಬ್ಬರಿಗೆ ಪಾರ್ವಣ ಬೇರ್ಪಡಿಸಿ ಮಾಡುವರು, ಆವಾಗ ಪಾರ್ವಣ ಚತುಷ್ಟಯ ೪) ಆಗುವುದು. ಕೆಲವರ ಸೂತ್ರದಲ್ಲಿ ದರ್ಶವೂ ಪಾರ್ವಣ ತ್ರಯವುಳ್ಳದೆಂದೂ ಅಥವಾ ಚತುಃಪಾರ್ವಣವುಳ್ಳದ್ದೆಂದೂ ಹೇಳಿದೆ ಎಂದು ಹೇಮಾದ್ರಿಯ ಮತವನ್ನು ಎತ್ತಿದ್ದಾರೆ.

## ಏಕೋದ್ದಿಷ್ಟ ಶ್ರಾದ್ಧಗಳ ಸ್ವರೂಪ

1 ಮೃತಪಟ್ಟವರಲ್ಲಿ ಒಬ್ಬನನ್ನು ಉದ್ದೇಶಿಸಿ ಮಾಡುವ ಶ್ರಾದ್ಧ, ಏಕಪಿಂಡದಾನವಿರುವ ಶ್ರಾದ್ಧವೇ **ಏಕೋದ್ದಿಷ್ಟ.** ಇದು ಮೂರು ಬಗೆ. ನವಶ್ರಾದ್ಧ, ನವಮಿಶ್ರಶ್ರಾದ್ಧ, ಪುರಾಣಶ್ರಾದ್ಧ ಎಂದು. ಮೃತಪಟ್ಟವನಿಗೆ ಪ್ರಥಮ ದಿನದಿಂದ ದಶಾಹಾಂತ ಮಾಡುವ ಶ್ರಾದ್ಧಗಳೇ **ನವಶ್ರಾದ್ಧಗಳು.** ಏಕಾದಶಾಹದಿಂದ ಆರಂಭಿಸಿ ಊನಾಬ್ದಿಕಾಂತ ಶ್ರಾದ್ಧಗಳು **ನವಮಿಶ್ರಶ್ರಾದ್ಧಗಳು.** ಇವುಗಳಲ್ಲಿ ವಿಶ್ವೇದೇವರಿಲ್ಲ. ಕನಿಷ್ಠಭ್ರಾತೃ ವಾರ್ಷಿಕ, ಶಸ್ತ್ರಹತರ ಚತುರ್ದಶೀ ಶ್ರಾದ್ಧ ಮೊದಲಾದವು **ಪುರಾಣ ಶ್ರಾದ್ಧಗಳು.**

2 ಪುತ್ರಜನ್ಮ-ವಿವಾಹಾದಿಗಳಲ್ಲಿ ಮಾಡುವ ಶ್ರಾದ್ಧವು ನಾಂದಿ ಶ್ರಾದ್ಧ.

3 ಇದನ್ನು ಗರ್ಭಾಧಾನ. ಪುಂಸವನ, ಸೀಮಂತಗಳಲ್ಲೂ, ಆಧಾನ ಸೋಮಯಾಗ ಇಷ್ಟಗಳಲ್ಲಿ ಕರ್ಮಾಂಗವಾಗಿ ಮಾಡುವುದಾದರೆ ಇಷ್ಟಿಶ್ರಾದ್ಧ ವೆಂದು ಹೇಳುವರು.

4 ಇದರಲ್ಲಿ ಕೃತುದಕ್ಷವೆಂಬುವರೇ ವಿಶ್ವೇದೇವರು. ಬೇರೆ ಕರ್ಮಗಳಲ್ಲಿ ವೃದ್ಧಿ ಎಂದು, ಆವಾಗ ನಾಂದಿಶ್ರಾದ್ಧದಲ್ಲಿ ಸತ್ಯವಸು ಎಂಬುವರೇ ವಿಶ್ವೇದೇವರು.

5 ಮೃತನಿಗೆ ದ್ವಾದಶಾಹಾದಿ ಕಾಲದಲ್ಲಿ ಮಾಡುವ ಪಿಂಡ, ಅರ್ಘ್ಯ ಸಂಯೋಜನಾದಿ ರೂಪವಾದ ಶ್ರಾದ್ಧವು ಸಪಿಂಡಿಕರಣವೆಂಬುವುದು. ಇದು ಏಕೋದ್ದಿಷ್ಟ ವಿರೂಪರೂಪ.

ಇದರ ವಿಶೇಷವನ್ನು ಮುಂದೆ ತಿಳಿಸುವೆವು. ಒಟ್ಟಿನಲ್ಲಿ ಪಾರ್ವಣ-ಏಕೋದ್ದಿಷ್ಟ ಎಂದು ಎರಡೇ ವಿಧದಲ್ಲಿ ಶ್ರಾದ್ಧವಿರುವುದು. ಇದರಲ್ಲೂ ನಿತ್ಯ. ನೈಮಿತ್ತಿಕ, ಕಾಮ್ಯ ಎಂದು ಪುನಃ ಮೂರು ಬಗೆ,

ದರ್ಶಾದಿ ಶ್ರಾದ್ಧಗಳೂ, ಪ್ರತಿನಿತ್ಯ ವಿಹಿತವಾಗಿ ವಿಶ್ವೇದೇವೇರಿಲ್ಲದ ಪಾರ್ವಣದ್ವಯಯುಕ್ತವಾದ ಶ್ರಾದ್ಧಗಳೇ ನಿತ್ಯ (ಅವಶ್ಯಕರ್ತವ್ಯ).

ಆಯುತವಾಗಿ ಬರದೆ, ಅಪೂರ್ವವಾಗಿ ಗ್ರಹಣಾದಿ ನಿಮಿತ್ತಗಳು ಬಂದಾಗ ಮಾಡುವ ಶ್ರಾದ್ಧಗಳು ನೈಮಿತ್ತಿಕ (ಅಥವಾ ತರ್ಪಣಾದಿಗಳು). ಇದೂ ಷಡ್‌ದೈವತವುಳ್ಳದ್ದು. ಅಂದರೆ ಪಿತೃವರ್ಗ ಸಪತ್ನೀಕ, ಮಾತಾ ಮಹವರ್ಗ ಸಪತ್ನೀಕ ಒಟ್ಟು ಆರು ಪಿತೃದೇವತೆಗಳು ಬರುವ ಶ್ರಾದ್ಧಗಳು.

ಫಲಕಾಮನೆಯಿಂದ ಮಾಡುವ ಶ್ರಾದ್ಧಗಳು ಕಾಮ್ಯ.

ಈ ಕಾಲದಲ್ಲಿ ಈ ಎಲ್ಲ ಶ್ರಾದ್ಧಗಳೂ ಆಚರಣೆಯಿಲ್ಲದೆ ಅದಕ್ಕೆಬದಲು ಅಮಾವಾಸ್ಯೆ, ಗ್ರಹಣಾದಿಗಳಲ್ಲಿ ತರ್ಪಣಗಳೇ ನಡೆಯುತ್ತಿವೆ. ಆದರೂ ಶ್ರಾದ್ಧಗಳ ಭೇದಪರಿಜ್ಞಾನಕ್ಕೆ ಉಪಯುಕ್ತವೆಂದು ಬರೆದಿದೆ.

## ಶ್ರಾದ್ಧಕ್ಕೆ ಹೇಳಿದ ಪವಿತ್ರ ದೇಶ

ದಕ್ಷಿಣಕ್ಕೆ ಬಾಗಿದ ಪ್ರದೇಶವು, ಕ್ರಿಮಿಕೀಟಾದಿ ವರ್ಜಿತವಾಗಿದ್ದು ಗೋಮಯದಿಂದ ಶುದ್ಧಿಗೊಳಿಸಿದ್ದ ಪ್ರದೇಶವು ಶ್ರೇಷ್ಠ. ರಜಸ್ವಲಾದಿಗಳ ದರ್ಶನಕ್ಕೆ ಅವಕಾಶವಿರಬಾರದು.

2 ಕುರುಕ್ಷೇತ್ರ, ಪ್ರಭಾಸ, ಕಾಶಿ, ಪ್ರಯಾಗ, ಗಂಗಾಯಮುನಾದಿ ಮಹಾನದೀತೀರ, ಗಯಾಶೀರ್ಷ, ಅಕ್ಷಯ ವಟವಿರುವ ಕ್ಷೇತ್ರಗಳಲ್ಲಿ ಶ್ರಾದ್ಧ ಮಾಡುವುದು ಮಹಾ ಫಲಕಾರಿಯಾಗುವುದು.

3 ತುಲಸೀವನದ ನೆರಳಿನಲ್ಲಿ ಶಾಲಗ್ರಾಮದ ಸನ್ನಿಧಾನ, ಚಕ್ರಾಂಕಿತ ವಾದ ವಿಷ್ಣುಪಾದ ಸನ್ನಿಧಿಯಲ್ಲಿ ಸ್ನಾನ, ದಾನ, ತಪಸ್ಸು, ಶ್ರಾದ್ಧ ಇವು ಗಳು ಅಕ್ಷಯ ಫಲವನ್ನು ನೀಡುವವು.

4 ಗೋಶಾಲೆ, ಗಜಶಾಲೆ, ಅಶ್ವಶಾಲೆಗಳಲ್ಲೂ, ಮ್ಲೇಚ್ಛದೇಶ ಗಳಲ್ಲಿ ಶ್ರಾದ್ಧಮಾಡಬಾರದು. (ವಿದೇಶಗಳಲ್ಲಿ ಮಾಡಬಾರದು.)

5 ಪರಗೃಹಾದಿಗಳಲ್ಲಿ ಶ್ರಾದ್ಧಮಾಡಿದರೆ ಆ ಭೂಮಿಯ ಯಜಮಾನನ ಪಿತೃಗಳು ಶ್ರಾದ್ಧಭಾಗವನ್ನು ಅಪಹರಿಸುವರು. ಅದಕ್ಕಾಗಿ ಗೃಹದ ಸ್ವಾಮಿಗೆ ಬಾಡಿಗೆ ಕೊಟ್ಟು ಮಾಡಬೇಕು. ಅಥವಾ ಗೃಹದ ಯಜಮಾನನ ಅಜ್ಞೆಯಿಂದಲೂ ಮಾಡಬಹುದು.

6 ವನಾನಿ ಗಿರಯೋ ನದ್ಯಃ ತೀರಾಣ್ಯಾಯತನಾನಿಚ ।
ದೇವಖಾತಾಶ್ಚ ಗರ್ತಾಶ್ಚ ನ ಸ್ವಾಮ್ಯಂತೇಷು ಕಸ್ಯಚಿತ್ ॥

ಅರಣ್ಯ, ಗಿರಿ, ನದೀತೀರ, ದೈವನಿರ್ಮಿತ ತಟಾಕ-ಕೊಳಗಳು ಇವು ಆಗಬಹುದು. ಅದರಲ್ಲಿ ಯಾರಿಗೂ ಸ್ವಾಮಿತ್ವವಿರುವುದಿಲ್ಲ.

7 ದ್ವೀಪದಲ್ಲೂ ಮೇಲ್ಭಾವಣಿಯಿರುವ ಅಂತರಿಕ್ಷದಲ್ಲೂ ಶ್ರುತಿಸ್ಮೃತಿವಿಹಿತಕರ್ಮಗಳನ್ನು ಮಾಡಬಾರದು.

ಶಮೀಪತ್ರಪ್ರಮಾಣೇನ ಪಿಂಡಂದದ್ಯಾತ್ ಗಯಾಶಿರೇ ।
ಉದ್ಧರೇತ್ ಸಪ್ತಗೋತ್ರಾಣಿಕುಲ ಮೇಕೋತ್ತರಂ ಶತಂ ॥

ಪಿತಾ, ಮಾತಾ, ಭಾರ್ಯಾ, ಭಗಿನೀ, ದುಹಿತಾ, ಪಿತೃಷ್ವಸೃ, ಮಾತೃಷ್ವಸೃ ಇವೇ ಏಳು ಗೋತ್ರಗಳು. ಇವರ ಕುಲ ೧೦೧ ಜನರಾಗುವುದು. ಪಿತೃಕುಲ ಪೂರ್ವಾಪರದ್ವಾದಶ ೨೪, ಮಾತೃಕುಲ ೨೦, ಭಾರ್ಯಾಕುಲ ೧೬, ಭಗಿನೀಕುಲ ೧೨, ದುಹಿತೃಕುಲ ೧೧, ಪಿತೃಷ್ವಸೃಕುಲ ೧೦, ಮಾತೃಷ್ವಸೃಕುಲ ೮, ಹೀಗೆ ಒಟ್ಟು ೧೦೧ ಕುಲವನ್ನು ಗಯಾಶೀರ್ಷದಲ್ಲಿ ಪಿಂಡಪ್ರದಾನ ಮಾಡಿದರೆ ಅದು ಉದ್ಧರಿಸುವುದೆಂದು ಮಹಿಮೆಯನ್ನು ತಿಳಿಸಿದೆ.

## ಶ್ರಾದ್ಧಕ್ಕೆ ಬೇಕಾದ ಅಪರಾಹ್ಣಾದಿ ಕಾಲಗಳು

1 ತಿಥಿಯ ಅಹಃಪ್ರಮಾಣವನ್ನು ಪಂಚಾಂಗದಲ್ಲಿ ನೋಡಿ ೫ ಭಾಗ ಮಾಡಿ ಅಂದರೆ ಮೂರು ಮುಹೂರ್ತವಿರುವಂತೆ ೫ ಭಾಗ ಮಾಡಿಕೊಳ್ಳಬೇಕು. ಅವುಗಳಲ್ಲಿ ೧ನೆಯದು ಪ್ರಾತಃಕಾಲ. ೨ನೆಯದು ಸಂಗಮಕಾಲ.

೩ನೆಯದು ಮಧ್ಯಾಹ್ನ. ೪ನೆಯದು ಅಪರಾಹ್ಣ. ೫ನೆಯದು ಸಾಯಾಹ್ಣ. ಹಗಲಿನ ಪ್ರಮಾಣದಲ್ಲಿ ೧೫ನೆ ಒಂದು ಭಾಗವು ಮುಹೂರ್ತವೆನಿಸುವುದು. ಹಗಲು ಉದಯಾದಿ ೩೦ ಘಳಿಗೆಯಾಗಿದ್ದರೆ ಎರಡೆರಡು ಘಳಿಗೆ ಮಾತ್ರ ಒಂದು ಮೂಹೂರ್ತವೆಂದು ತಿಳಿಯಬೇಕು. ಅವುಗಳಲ್ಲಿ ೭ನೆ ಮುಹೂರ್ತ ಗಂಧರ್ವ, ೮ನೆ ಮುಹೂರ್ತ ಕುತುಪಕಾಲ. ೯ನೆಯದು ರೌಹಿಣವೆಂದು ಹೆಸರಾಗಿವೆ.

## ಅಮಾವಾಸ್ಯೆ ಮಾಡಬೇಕಾದ ಶ್ರಾದ್ಧ-ತರ್ಪಣಗಳಿಗೆ ತಿಥಿನಿರ್ಣಯವು

2 ಹಿಂದೆ ಹೇಳಿದಂತೆ ಹಗಲಿನ ಪ್ರಮಾಣವನ್ನು ೫ ಭಾಗ ಮಾಡಿದಾಗ ಸಿಕ್ಕ ೪ನೆ ಭಾಗವೇ ಅಪರಾಹ್ಣ. ಇದರಲ್ಲಿ ಅಮಾವಾಸ್ಯೆಯು ವ್ಯಾಪಿಸಿದ್ದಾಗ ದರ್ಶಶ್ರಾದ್ಧ (ತರ್ಪಣ)ಗಳಿಗೆ ಯೋಗ್ಯವಾದ ಕಾಲ. ಅಮಾತಿಥಿ ಪೂರ್ವದಿನದಲ್ಲೇ ಅಪರಾಹ್ಣಕ್ಕೆ ಪೂರ್ಣ, ಅಥವಾ ಏಕದೇಶದಲ್ಲಿ ವ್ಯಾಪಿಸಿದ್ದರೂ ಪೂರ್ವ ದಿನವೇ ಗ್ರಾಹ್ಯ. ಮರುದಿನ ಹೀಗೆ ವ್ಯಾಪಿಸಿದ್ದರೆ ಮರುದಿನವೇ ಗ್ರಾಹ್ಯ. ಎರಡು ದಿನಗಳ ಅಪರಾಹ್ಣದಲ್ಲಿ ವಿಷಮವಾಗಿ ಏಕದೇಶದಲ್ಲಿ ವ್ಯಾಪಿಸಿದ್ದರೆ ಅಧಿಕ ವ್ಯಾಪಿಯಾದ ಅಮಾವಾಸ್ಯೆಯೇ ಗ್ರಾಹ್ಯ. ಎರಡು ದಿದಗಳಲ್ಲಿ ಸಮನಾಗಿಯೋ, ಏಕದೇಶದಲ್ಲೋ ಇದ್ದು ತಿಥಿಕ್ಷಯವಾದರೆ ಪೂರ್ವದಿನವೇ ಅಮಾವಾಸ್ಯೆ. ತಿಥಿಯು ವೃದ್ಧಿಯಾದರೂ, ಸಮನಾದರೂ ಮರುದಿನವೇ ಗ್ರಾಹ್ಯ.

ಉದಾಹರಣೆ—

1 ಚತುರ್ದಶಿ ೧೯, ಅಮಾ ೨೩ (ದಿನ ೩೦ ಘಳಿಗೆ) ಇದರಲ್ಲಿ ಎರಡು ದಿನಗಳಲ್ಲೂ ೪ ಘಳಿಗೆ ಏಕದೇಶವ್ಯಾಪ್ತಿ ಇದೆ. ಚತುರ್ದಶಿಗಿಂತಲೂ ೪ ಘಳಿಗೆ ಅಮಾ ವೃದ್ಧಿಯಿರುವುದರಿಂದ ಮುಂದಿನ ತಿಥಿಯೇ ಗ್ರಾಹ್ಯ.

2 ಚತುರ್ದಶಿ ೨೩, ಅಮಾ ೧೯, ಇವರಲ್ಲಿ ೧ ಘಳಿಗೆ ಸಮವ್ಯಾಪ್ತಿಯಿದೆ. ೪ ಘಳಿಗೆಯಲ್ಲಿ ತಿಥಿಯು ಕ್ಷಯವಾದ್ದರಿಂದ ಪೂರ್ವತಿಥಿಯೇ ಗ್ರಾಹ್ಯ.

3 ಚತುರ್ದಶಿ ೨೧, ಅಮಾ ೨೧ ಇದ್ದಾಗ ಮೂರು ಘಳಿಗೆ ದಿನದ್ವಯದಲ್ಲೂ ಅಂಶತಃ ಸಮವ್ಯಾಪ್ತಿಯಿದೆ. ತಿಥಿಗೆ ವೃದ್ಧಿಕ್ಷಯಗಳು ಇಲ್ಲವಾದ್ದರಿಂದ ಸಮವಾದ್ದರಿಂದ ಮರುತಿಥಿಯೇ ಅಮಾವಾಸ್ಯೆಗೆ (ಶ್ರಾದ್ಧ ತರ್ಪಣಗಳಲ್ಲಿ) ಗ್ರಾಹ್ಯವು.

4 ದಿನದ್ವಯದಲ್ಲೂ ಪೂರ್ಣವಾಗಿದ್ದು ಅಪರಾಹ್ಣ ವ್ಯಾಪ್ತಿಯಿದ್ದರೆ ತಿಥಿವೃದ್ಧಿಯವಾದ್ದರಿಂದ ಮರುತಿಥಿಯೆ ಗ್ರಾಹ್ಯ.

5 ದಿನದ್ವಯದಲ್ಲೂ ಅಪರಾಹ್ಣದಲ್ಲಿ ಅಮಾವಾಸ್ಯೆಯು ಮುಟ್ಟಿಲ್ಲವಾದರೆ ಗೃಹ್ಯಾಗ್ನಿ ಇಟ್ಟವರು, ಶ್ರೌತಾಗ್ನಿ ಇಟ್ಟವರೂ ಸಹ ಚತುರ್ದಶೀ ಮಿಶ್ರವಾದ ಅಮಾವಾಸ್ಯೆ (ಸಿನೀವಾಲಿಯೆಂದು ಹೇಳುವದನ್ನು) ಪೂರ್ವ ತಿಥಿಯನ್ನೆ ಸ್ವೀಕರಿಸಬೇಕು.

6 ಅಗ್ನಿರಹಿತರಾದ ಸ್ತ್ರೀಯರೂ. ಶೂದ್ರರೂ, ಕುಹೂ ಎಂಬುವ ಪ್ರತಿಪತ್ತಿನಿಂದ ಕೂಡಿದ ಮರುದಿನದ ಅಮಾವಾಸ್ಯೆಯನ್ನೂ ಹಿಡಿಯಬೇಕು. ಈ ಬಗೆಯ ದರ್ಶನಿರ್ಣಯವು ಮಾಧವಾಚಾರ್ಯಸಂಮತವಾಗಿದೆ. ಪ್ರಾಯಿಕವಾಗಿ ಶಿಷ್ಯರು ಇದನ್ನೇ ಪುರಸ್ಕರಿಸುವರು.

ಮೇಲೆ ಹೇಳಿದ ಶ್ರಾದ್ಧಕಾಲ ನಿರ್ಣಯ —

**1 ಏಕೋದ್ದಿಷ್ಟವು ಮಧ್ಯಾಹ್ನ 7, 8, 9–ನೇ ಮುಹೂರ್ತ** ವೆಂಬುವವು. ಈ ಕಾಲದಲ್ಲಿ ಆಚರಿಸತಕ್ಕದ್ದು, ಅದರಲ್ಲೂ ಕುತುಪರೌಹಿಣವೆಂಬುವ 8, 9 ನೇ ಮುಹೂರ್ತದಲ್ಲಿ ಮಾಡಬೇಕು. ಅದರಲ್ಲೂ ಯಾವದಿನ ಮಧ್ಯಾಹ್ನ ವ್ಯಾಪ್ತಿಯಿರುವುದೋ ಆ ದಿನ ಹಿಂದಾಗಲಿ ಮುಂದಾಗಲಿ ಗ್ರಾಹ್ಯವಾಗಿದೆ.

2 ದಿನದ್ವಯದಲ್ಲೂ ಮಧ್ಯಾಹ್ನ ಕಾಲಕ್ಕೆ ತಿಥಿಯು ವ್ಯಾಪಿಸಿದ್ದರೆ ಅಥವಾ ವ್ಯಾಪಿಸಿಲ್ಲವಾದರೆ, ಹಿಂದಿನ ದಿನವೆ ಸಮವಾಗಿಯೋ ಏಕದೇಶ ದಲ್ಲೋ ವ್ಯಾಪಿಸಿದ್ದರೂ ಪೂರ್ವತಿಥಿಯೆ ಗ್ರಾಹ್ಯ. ಒಟ್ಟಿನಲ್ಲಿ ಸಮನಾಗಿಲ್ಲದೆ ಅಧಿಕವ್ಯಾಪ್ತಿಯು ಮಧ್ಯಾಹ್ನಕ್ಕೆ ಇದ್ದರೆ ಆದಿನವೇ ಏಕೋದ್ದಿಷ್ಟ ವಿಧಿ ಯನ್ನು ಮಾಡಬೇಕು.

## ಪ್ರತಿಸಾಂವತ್ಸರಿಕ ಮಾಸಿಕ ಸಕೃನ್ಮಹಾಲಯಗಳ ಕಾಲನಿರ್ಣಯ

3 ಪಾರ್ವಣ ಶ್ರಾದ್ಧಕ್ಕೆ ಅಪರಾಹ್ಣವ್ಯಾಪಿಯಾಗಿಯೇ ತಿಥಿ ಇರ ಬೇಕು. ಪೂರ್ವ ದಿನದಲ್ಲಿ ಅಪರಾಹ್ಣಕ್ಕೆ ಇದ್ದರೆ ಪೂರ್ವತಿಥಿಯೇ ಪರದಿನಲ್ಲಿ ಇದ್ದರೆ ಪರ ತಿಥಿಯೇ ಗ್ರಾಹ್ಯ.

4 ಎರಡು ದಿನಗಳಲ್ಲೂ ತಿಥಿಯು ವ್ಯಾಪಿಸಿದ್ದರೂ, ಅಪರಾಹ್ಣಕ್ಕೆ ಮುಟ್ಟಿಲ್ಲವಾದರೂ ಅಂಶತಃ ಸಮವ್ಯಾಪ್ತಿಯಿದ್ದರೂ ಪೂರ್ವತಿಥಿಯೇ ಗ್ರಾಹ್ಯ. ವಿಷಮವ್ಯಾಪ್ತಿಯಿದ್ದರೆ ಅಪರಾಹ್ಣಕ್ಕೆ ಅಧಿಕವಾಗಿ ವ್ಯಾಪಿಸಿದ ತಿಥಿಯೇ ಗ್ರಾಹ್ಯ.

5 ಮಾಧವಾಚಾರ್ಯರು ಮಾತ್ರ ಪೂರ್ಣವಾಗಿ ದಿನದ್ವಯದಲ್ಲೂ ಅಪರಾಹ್ಣವ್ಯಾಪ್ತಿಯಿದ್ದರೂ. ಅಂಶತಃ ಸಮವ್ಯಾಪ್ತಿಯಿದ್ದರೂ ಮುಂದಿನ ತಿಥಿ ಕ್ಷಯವಾಗಿದ್ದರೆ ಪೂರ್ವತಿಥಿ, ವೃದ್ಧಿಯಾಗಿದ್ದರೆ ಮುಂದಿನ ತಿಥಿಯೇ ಗ್ರಾಹ್ಯವೆನ್ನುವರು, ಮುಂದಿನ ತಿಥಿಗೆ ಕ್ಷಯವಾಗಲಿ ವೃದ್ಧಿಯಾಗಲಿ ಇಲ್ಲ ದಿದ್ದರೆ ಮುಂದಿನ ತಿಥಿಯೇ ಗ್ರಾಹ್ಯವೆಂದು ಹೇಳುವರು ಎಂದು ಧರ್ಮ ಸಿಂಧು.

6 ಪಾರ್ವಣ ಶ್ರಾದ್ಧವನ್ನು ಕುತುಪಾದಿ ಕಾಲವು 5 ಮುಹೂರ್ತ ಗಳಿರುವಾಗ ಮಾಡಬೇಕು. ಸಾಯಂಕಾಲ, ರಾತ್ರಿಗಳಲ್ಲೂ ಪ್ರಾತಃಕಾಲ-ಸಂಗಮಕಾಲಗಳಲ್ಲೂ ಮಾಡಬಾರದು. ಆದರೆ ಪಿಂಡಪಿತೃಯಜ್ಞದಿನ ಸಾಯಂಕಾಲವಾದರೂ ಪಾರ್ವಣ ಮಾಡಬಹುದೆಂದು ವಚನವಿದೆ.

7 ಒಂದುವೇಳೆ ವಿಘ್ನವಶಾತ್ ಪಗಲು ಸಾಂವತ್ಸರಿಕ ಶ್ರಾದ್ಧವನ್ನು ಮಾಡಲು ಆಗದಿದ್ದರೆ ರಾತ್ರಿಯಲ್ಲಾದರೂ ಮೊದಲಿನ ಯಾಮಪರ್ಯಂತ ಮಾಡಬಹುದೆಂದು ಹೇಳಿದ್ದಾರೆ. ಕಾರಣ, ಮೃತಾಹವನ್ನು ಅತಿಕ್ರಮಿಸ ಬಾರದೆಂಬುದೆ, ಅತಿಕ್ರಮಿಸಿದರೆ ಚಾಂಡಾಲತ್ವ ದೋಷವು ಬರುವುದು.

8 ಗ್ರಹಣದಿನ ದರ್ಶ, ಮಾಸಿಕ, ಪ್ರತಿವಾರ್ಷಿಕಶ್ರಾದ್ಧಗಳು ಸೇರಿ ದಲ್ಲಿ ಆದಿನವೆ ಅನ್ನದಿಂದಲೋ, ಆಮದಿಂದಲೋ ಹಿರಣ್ಯದಿಂದಲೋ ಶ್ರಾದ್ಧವನ್ನು ಮಾಡಬೇಕು. ಮರುದಿನ ಮಾಡಬಾರದು.

9 ಪ್ರಥಮಾಬ್ದಿಕವನ್ನು ಮಲಮಾಸದಲ್ಲಿ ಮಾಡತಕ್ಕದ್ದು, (ಹನ್ನೆರ ಡನೆ) ದ್ವಾದಶಮಾಸಿಕವು ಶುದ್ಧದಲ್ಲಿ ನಡೆದು ಹದಿಮೂರನೆ (13)ಮಾಸದಲ್ಲಿ ಪ್ರಥಮಾಬ್ದಿಕವನ್ನು ಆಚರಿಸಬೇಕು.

10 ದ್ವಾದಶಮಾಸಿಕವು ಅಧಿಕದ ಮಧ್ಯೆ ಬಂದಲ್ಲಿ ದ್ವಾದಶ ಮಾಸಿಕ ವನ್ನು ಎರಡಾವರ್ತಿ ಮಾಡಿ ನಂತರ ಬರುವ 14ನೇ ಮಾಸದಲ್ಲಿ ಪ್ರಥಮಾ ಬ್ದಿಕವನ್ನು ಆಚರಿಸಬೇಕು.

11 ಇದೇರೀತಿ ದ್ವಿತೀಯಾದಿಮಾಸಿಕವು ಮಲಮಾಸದಲ್ಲಿ ಬಂದರೆ ಎರಡಾವರ್ತಿ ಮಾಡಬೇಕು (ಅಧಿಕದಲ್ಲೂ ನಿಜದಲ್ಲೂ ಮಾಡಬೇಕು).

12 ದ್ವಿತೀಯ ತೃತೀಯಾದಿ ಆಬ್ದಿಕಗಳನ್ನು ಶುದ್ಧ ಮಾಸದಲ್ಲೇ ಮಾಡಬೇಕು. ಅಧಿಕಮಾಸದಲ್ಲಿ ಮಾಡಬೇಕಾದದ್ದಿಲ್ಲ. ಇದೇರೀತಿ ಮಹಾ ಲಯವನ್ನು (ಶುದ್ಧ ಮಾಸದಲ್ಲೇ ಮಾಡಬೇಕು.)

13 ಮಲಮಾಸದಲ್ಲಿ ಮೃತಪಟ್ಟವರಿಗೆ ಅದೇ ಮಲಮಾಸವು ಬಂದರೆ ಅಧಿಕದಲ್ಲೇ ಸಾಂವತ್ಸರಿಕ ಶ್ರಾದ್ಧವನ್ನು ಮಾಡಬೇಕು.

14 ಅಮಾವಾಸ್ಯೆದಿನ ವಾರ್ಷಿಕವು ಬಂದರೆ ಮೊದಲು ವಾರ್ಷಿಕ ಮಾಡಿ, ಅನಂತರ ಪಿಂಡಪಿತೃಯಜ್ಞವನ್ನು ಮಾಡಿ ಬೇರೆ ಪಾಕದಲ್ಲಿ ದರ್ಶ ಶ್ರಾದ್ಧವನ್ನು ಅಚರಿಸಬೇಕು. ಕೆಲವರು ಮೊದಲು ಪಿಂಡಪಿತೃಯಜ್ಞ,

ಅನಂತರ ವಾರ್ಷಿಕ, ಅನಂತರ ದರ್ಶ ಶ್ರಾದ್ಧವೆಂದು ಕ್ರಮವನ್ನು ಹೇಳಿದ್ದಾರೆ. ಮಾಸಿಕಾದಿಗಳಿಗೂ ಹೀಗೆಯೆ ಕ್ರಮವು.

15 ಪಾರ್ವಣವಾದರೂ ಹಿರಣ್ಯಶ್ರಾದ್ಧ, ಆಮ ಶ್ರಾದ್ಧರೂಪದಲ್ಲಿ ಮಾಡುವುದಾದರೆ ಎರಡಾಗಿ ಭಾಗಿಸಿದ ದಿನದ ಹಗಲಿನ ಪೂರ್ವಾರ್ಧದಲ್ಲಿ ಆಚರಿಸಬೇಕು.

16 ಎಲ್ಲಾ ಶ್ರಾದ್ಧಗಳನ್ನು ಆಯಾಯ ನಿರ್ಣೀತ ಕಾಲದಲ್ಲಿ ತಿಥಿಯಿಲ್ಲದಿದ್ದರೂ ಮಾಡಬೇಕು. ಸಾಕಲ್ಯ ವಚನದಂತೆ ಶಾಸ್ತ್ರಾನುಸಾರ ಆಯಾಯ ತಿಥಿಯಿರುತ್ತದೆಯೆಂಬುದಾಗಿ **ಕಾಲತತ್ತ್ವವಿವಚನದಲ್ಲಿ** ಹೇಳಿದೆ. ಅದರೆ ಅಪರಾಹ್ಣದಲ್ಲಿ ಶ್ರಾದ್ಧ ಮಾಡಬೇಕು. ಸಾಯಂಕಾಲ ಕೂಡದು.

17 ವೃದ್ಧಿಶ್ರಾದ್ಧ (ನಾಂದಿಯನ್ನು) ಪ್ರಾತಃಕಾಲ ಸಂಗಮ ಕಾಲಗಳಲ್ಲಿ ಆಚರಿಸಬೇಕು. ಮಧ್ಯಾಹ್ನ ಗೌಣಕಾಲ. ಅಪರಾಹ್ಣದಲ್ಲೂ ಸಾಯಂಕಾಲ–ರಾತ್ರಿಗಳಲ್ಲೂ ಇದು ನಿಷಿದ್ಧವಾಗಿದೆ.

18 ಗ್ರಹಣ ನಿಮಿತ್ತವಾದ ಪಾರ್ವಣವನ್ನು ರಾತ್ರಿಯಲ್ಲೂ ಮಾಡಬಹುದು.

## ಮೃತಾಹ ಶ್ರಾದ್ಧದ ವಿಶೇಷ ನಿರ್ಣಯ

1 ಮಾತೃ ಪಿತೃ ಮುಂತಾದವರು ಯಾವ ಮಾಸದಲ್ಲಿ ಯಾವ ಪಕ್ಷದಲ್ಲಿ, ಯಾವ ತಿಥಿಯಲ್ಲಿ ಮೃತಪಟ್ಟಿರುವರೊ, ಆದಿನವೆ ಮೃತಾಹವೆಂಬುವುದು **'ಪಾರಣೇ ಮರಣೇ ಚೈವತಿಥಿ ಸ್ತಾತ್ಕಾಲಿಕೀಮತಾ'** ಎಂಬ ವಚನದಂತೆ.

2 ಮರಣಕಾಲದಲ್ಲಿ ಇದ್ದ ತಿಥಿಯನ್ನೆ, ಅದರಲ್ಲೂ ಅಪರಾಹ್ಣಕ್ಕೆ ವ್ಯಾಪ್ತಿಯಿರುವುದನ್ನೆ ಆಬ್ದಿಕ ಶ್ರಾದ್ಧಕ್ಕೆ ಪ್ರತಿಸಾಂವತ್ಸರಿಕಕ್ಕೂ ತೆಗೆದುಕೊಳ್ಳಬೇಕು. ಷರಾ ಪಂಚಾಂಗವನ್ನು ನೋಡಿ ಹೆಚ್ಚುಕಡಿಮೆಯಿದ್ದಾಗ

ತಿಥಿನಿರ್ಣಯ ಮಾಡಿಕೊಳ್ಳಬೇಕು. ಇತರ ಶ್ರಾದ್ಧಗಳ ಕಾಲನಿರ್ಣಯವನ್ನು ಈ ಮೊದಲೇ ತಿಳಿಸಿದೆ.

3 ವಾರ್ಷಿಕ ಶ್ರಾದ್ಧದಲ್ಲಿ ಪಿತೃ-ಪಿತಾಮಹ-ಪ್ರಪಿತಾಮಹ ಎಂದು ತ್ರಿದೈವತೆ, ಪುರೂರವಾರ್ದ್ರವ ಸಂಜ್ಞಕ ವಿಶ್ವೇದೇವ ಸಹಿತವಾಗಿ ಉದ್ದೇಶಿಸಬೇಕು. ಇದರಲ್ಲಿ ಸಪತ್ನೀಕ ಎಂದು ಸೇರಿಸಬಾರದು, ಅಲ್ಲದೆ ಮಾತಾಮಹಾದಿ ತ್ರಯವನ್ನು ಬಿಡಬೇಕು. ಮಾತೃ ವಾರ್ಷಿಕವಾದರೆ ಮಾತೃ-ಪಿತಾಮಹೀ-ಪ್ರಪಿತಾಮಹೀ ಎಂದು ಮೂರು ದೇವತೆಗಳನ್ನು ವಿಶ್ವೇದೇವತೆಗಳೊಂದಿಗೆ ಉದ್ದೇಶಿಸಬೇಕು. ದೇವತಾ ನಿರ್ಣಯವನ್ನು ಮುಂದೆ ತಿಳಿಸುವೆವು.

4 ಮಾತಾಪಿತೃಗಳ ಪ್ರಥಮಾಬ್ದಿಕವನ್ನು ಅವಿಭಕ್ತ ಭ್ರಾತೃಗಳಾದರೆ ಜ್ಯೇಷ್ಠ ಪುತ್ರನೆ ಮಾಡಬೇಕು. ಅವನೊಂದಿಗೆ ತಮ್ಮಂದಿರು ಸೇರಿಕೊಳ್ಳಬೇಕು. ವಿಭಾಗಮಾಡಿಕೊಂಡಿದ್ದರೆ ಅಥವಾ ಆಸ್ತಿಯಿಲ್ಲದೆ ಬೇರೆ ಬೇರೆ ಮನೆ ಮಾಡಿ ಸಂಸಾರ ಮಾಡುತ್ತಿದ್ದರೆ ಅವರು ಪ್ರಥಮಾಬ್ದಿಕವನ್ನು ಬೇರೆಬೇರೆ ಮಾಡಬೇಕು. ಷರಾ - ಈಗ ರೂಢಿಯಲ್ಲಿ ಹಾಗಿಲ್ಲ, ವಿಭಕ್ತರಾದವರೂ ಒಟ್ಟಾಗಿ ಸೇರಿ ಮಾಡುತ್ತಿದ್ದಾರೆ, ಆವಾಗ ಶ್ರಾದ್ಧದಲ್ಲಿ ತಮ್ಮ ತಮ್ಮ ಖರ್ಚನ್ನಾದರೂ ವಹಿಸುವುದು ಉತ್ತಮ.

5 ಮಾತಾಪಿತೃಗಳ ಮೃತಾಹವು ಒಂದಾಗಿ ಸೇರಿದರೆ ಪಿತೃಶ್ರಾದ್ಧವನ್ನು ಮಾಡಿ ಅನಂತರ ಸ್ನಾನಮಾಡಿ ಮಾತೃಶ್ರಾದ್ಧವನ್ನು ಮಾಡಬೇಕು.

6 ಒಂದೆದಿನ ತಂದೆ ತ ಯಿಂದರು ಮೃತ ಪಟ್ಟಿದ್ದು ಮಾತೃವಿಭರ್ತೃವಿನೊಡನೆ ದಾಹಾದಿಗಳನ್ನು ಹಿಂದೆ ನಡೆಯಿಸಿದ್ದರೊ. ಮೊದಲು ಪಿತೃಶ್ರಾದ್ಧವನ್ನು ಮಾಡಿ ನಂತರ ಮಾತೃ ಶ್ರಾದ್ಧವನ್ನು ಮಾಡಬೇಕು. ಪಾಕವೂ ಬೇರೆಯಾಗಬೇಕು.

ಷರಾ— ಸಹಗಮನ ಮಾಡಿದರೆ ಹೇಗೆ ಮಾಡಬೇಕೆಂಬ ವಿಚಾರ ನಾವು ಬಿಟ್ಟಿದ್ದೇವೆ. ಇದು ಈಗ ನಡೆಯುತ್ತಿಲ್ಲ.

7 ಸುವಾಸಿನೀ ಮರಣವಾದಲ್ಲೂ ವಿಪ್ರಪಂಕ್ತಿಯಲ್ಲಿ ಸುವಾಸಿನಿಯನ್ನು ಕರೆದು ಭೋಜನ ಮಾಡಿಸಬೇಕು. ಸುವಾಸಿನಿಗೆ ಅರಿಶಿನ ಕುಂಕುಮ ಸೀರೆ ಮಾಂಗಲ್ಯಾದಿಗಳನ್ನು ಕೊಡಬೇಕು.

8 ಸ್ತ್ರೀಯರ ಶ್ರಾದ್ಧಗಳಲ್ಲಿ ವಸ್ತ್ರ-ಯಜ್ಞೋಪವೀತ-ಗಂಧಾದಿಗಳನ್ನು ಮಾತ್ರ ಬ್ರಾಹ್ಮಣರಿಗೆ, ಕೊಡಬೇಕು, ಕುಂಕುಮಾದಿ ಮಂಗಳ ದ್ರವ್ಯವನ್ನು ಕೊಡಬಾರದು.

## ಪುತ್ರರಿಲ್ಲದವರಿಗೆ ಪಾರ್ವಣವಿಧಿ

9 "ಪಿತೃವ್ಯ - ಭ್ರಾತೃ - ಮಾತೃಣಾಂ ಜ್ಯೇಷ್ಠಾನಾಂ ಪಾರ್ವಣಂ ಭವೇತ್, ಏಕೋದ್ದಿಷ್ಟಂ ಕನಿಷ್ಠಾನಾಂ. ದಂಪತ್ಯೋಃ ಪಾರ್ವಣಂಭವೇತ್ ಅಪುತ್ರಸ್ಯ ಪಿತೃವ್ಯಸ್ಯ ಭ್ರಾತುಶ್ಚೈವಾಗ್ರ ಜನ್ಮನಃ, ಪಿತಾಮಹಸ್ಯ ತತ್ಪತ್ನ್ಯಾಃ ಶ್ರಾದ್ಧಂ ಪಾರ್ವಣವದ್ ಭವೇತ್, ಇತ್ಯಾದಿ ವಚನ (ನಿರ್ಣಯ ಸಿಂಧುವಿನಲ್ಲಿದೆ).

ಅಪುತ್ರರಾದ ಸಾಪತ್ನ್ಯ ಮಾತೃವಿಗೂ

„ ಮಾತಾಮಹ-ಮಾತಾಮಹಿ

„ ಮಾತುಲ ಸೋದರಮಾವ-ಅವನ ಹೆಂಡತಿ(ಅತ್ತೆ)

„ ಚಿಕ್ಕಪ್ಪ ದೊಡ್ಡಪ್ಪ-ಇವರಪತ್ನಿ(ಚಿಕ್ಕಮ್ಮ ದೊಡ್ಡಮ್ಮ)

„ ಸಹೋದರರು (ಜ್ಯೇಷ್ಠರಾದವರಿಗೆ ಮಾತ್ರ)

„ ಶ್ವಶ್ರೂ, ಶ್ವಶುರ (ಹೆಣ್ಣುಕೊಟ್ಟ ಅತ್ತೆ ಮಾವಂದಿರು)

„ ಗುರು

„ ಪಿತೃಷ್ವಸೃ (ಸೋದರತ್ತೆ)

„ ಮಾತೃಷ್ವಸೃ (ತಾಯಿಯ-ಅಕ್ಕತಂಗಿಯರು-ದೊಡ್ಡಮ್ಮ ಚಿಕ್ಕಮ್ಮ)

„ ತನ್ನ ಹೆಂಡತಿಗೂ, ಭಗಿನಿಯರಿಗೂ,

ಈ ಎಲ್ಲಾ ಅಪುತ್ರರಿಗೂ ಪಾರ್ವಣವಿಧಿಯಂತೆ ವಾರ್ಷಿಕ ಶ್ರಾದ್ಧವನ್ನು ಮಾಡಬೇಕು. (ದಂಪತಿಗಳಿಗೆ ಪುತ್ರರಿಲ್ಲದೆ ಹೋದರೂ ಪರಸ್ಪರ ಪಾರ್ವಣವೇ),

ಕನಿಷ್ಠರಿಗೆ ಮಾತ್ರ ಏಕೋದ್ದಿಷ್ಟವಿಧಿಯಂತೆ ಏಕದೇವತೋದ್ದೇಶೇನ ಮಾಡಬೇಕು.

10 ಕೆಲವರು ಮಾತಾಪಿತೃ-ಮಾತಾಮಹ-ಮಾತಾಮಹಿ-ಇವರನ್ನು ಬಿಟ್ಟುಳಿದವರಿಗೆ ಪುತ್ರರಿಲ್ಲದಿದ್ದರೆ ಏಕೋದ್ದಿಷ್ಟ ವಿಧಿಯೆಂದೇ ಹೇಳುವರು.

ಪರಾ: ಹೀಗೆ ಮತಭೇದ ಬಂದಲ್ಲಿ ಆಯಾಯ ದೇಶಾಚಾರವನ್ನೇ ಅನುಸರಿಸಬೇಕು.

11 ಪಿತ್ರಾದಿ ವಾರ್ಷಿಕ-ಪಿತೃವ್ಯಾದಿ ವಾರ್ಷಿಕ ಶ್ರಾದ್ಧಗಳು ಒಂದೇ ದಿನ ಸೇರಿದಾಗ ಸ್ವಯಂ ಪಿತ್ರಾದಿ ಶ್ರಾದ್ಧವನ್ನು ಮಾಡಬೇಕು, ಪಿತೃವ್ಯಾದಿ ಶ್ರಾದ್ಧವನ್ನು ಬೇರೆಯವರಿಂದ ಮಾಡಿಸಬೇಕು ಅಥವಾ ಬೇರೆದಿನ ತಾನೇ ಮಾಡಬೇಕು (ಅಮಾವಾಸ್ಯೆ-ಕೃಷ್ಣ ಏಕಾದಶಿಗಳಲ್ಲಿ).

12 ಸಂನ್ಯಾಸಿಗೂ ಸಹ ಪುತ್ರನು ಪಾರ್ವಣಸಹಿತ ಆಬ್ದಿಕಾದಿಗಳನ್ನು ಮಾಡಬೇಕು.

## ಮೃತದಿನವು ತಿಳಿಯದಿರುವಾಗ ಶ್ರಾದ್ಧವನ್ನು ಮಾಡುವ ಕಾಲ

ದೇಶಾಂತರದಲ್ಲಿ ಮೃತಪಟ್ಟವನ ಮರಣದಿನ (ತಿಥಿಯು) ತಿಳಿಯದೆ ಹೋದರೆ, ಮಾಸವೂ ತಿಳಿಯದೆ ಹೋದರೆ ಹೇಗೆ ಮಾಡಬೇಕು ? ಎಂದರೆ–

1 ಮಾಸವು ಮಾತ್ರ ತಿಳಿದು ಮೃತತಿಥಿಯು ತಿಳಿಯದೆ ಇದ್ದರೆ ಅದೇ ಮಾಸದ ಅಮಾವಾಸ್ಯೆ, ಅಥವಾ ಶುಕ್ಲಪಕ್ಷದ ಏಕಾದಶಿ, ಅಥವಾ ಕೃಷ್ಣೈಕಾದಶಿಯಲ್ಲಿ ವಾರ್ಷಿಕಾದಿ ಶ್ರಾದ್ಧವನ್ನು ಮಾಡಬೇಕು.

2 ಹೀಗೆಯೆ ಮೃತತಿಥಿಯು ತಿಳಿದು ಮಾಸವು ತಿಳಿಯದಿದ್ದರೆ ಮಾರ್ಗಶೀರ್ಷ ಮಾಸದಲ್ಲೊ ಮಾಘ ಮಾಸದಲ್ಲೊ, ಭಾದ್ರಪದ ಆಷಾಢ ಮಾಸಗಳಲ್ಲೊ ಮೃತತಿಥಿಯಲ್ಲಿ ಮಾಡಬೇಕು.

3 ಮೃತನ ಮಾಸ, ತಿಥಿಗಳೆರಡೂ ತಿಳಿಯದಿದ್ದಾಗ ಯಾವದಿನ ಮನೆಯನ್ನು ಬಿಟ್ಟು ದೇಶಾಂತರಕ್ಕೆ ಹೊರಟಿದ್ದನೊ, ಆದಿನ ಆ ಮಾಸಗಳನ್ನೆ ಹಿಡಿದು ಶ್ರಾದ್ಧ ಮಾಡಬೇಕು.

4 ಪ್ರಯಾಣ ಮಾಡಿದ ದಿನ ಮಾಸ ಮೊದಲಾದವುಗಳು ತಿಳಿಯದಿದ್ದರೆ ದೇಶಾಂತರದಲ್ಲಿ ಮೃತಪಟ್ಟನೆಂದು ಸಮಾಚಾರವು ತಿಳಿದ ದಿನ, ಮಾಸ ಇವುಗಳನ್ನೆ ಹಿಡಿಯಬೇಕು.

5 ಇಲ್ಲಿಂದ ಹೊರಟ ಮಾಸವು ಮರೆತುಹೋದರೆ ತಿಥಿಯು ಮಾತ್ರ ಸ್ಮರಣೆ ಬಂದರೆ ಮಾರ್ಗಶೀರ್ಷಾದಿ ಹಿಂದೆ ಹೇಳಿದ ಮಾಸಗಳಲ್ಲಿ ಅದೇ ತಿಥಿಯಲ್ಲಿ ವಾರ್ಷಿಕ ಮಾಡಬೇಕು.

6 ಹೊರಟದ್ದು ಸಮಾಚಾರ ಮೂಲಕ ಮರಣನಾಗಿದ್ದು ತಿಳಿದರೆ ಮಾಸ ಮಾತ್ರ ಗೊತ್ತಿದ್ದು ತಿಥಿಯು ಗೊತ್ತಿಲ್ಲವಾಗಿದ್ದರೆ ಆ ಮಾಸದ ಅಮಾವಾಸ್ಯೆ ಏಕಾದಶಿ ತಿಥಿಯಲ್ಲಿ ಮಾಡಬೇಕು.

7 ಮೃತಪಟ್ಟದ್ದು, ಅದನ್ನು ಕೇಳಿದ್ದು, ಇಲ್ಲಿಂದ ಹೊರಟದ್ದು–ಇವುಗಳಲ್ಲಿ ದಿನ, ಮಾಸಗಳೆರಡೂ ತಿಳಿಯದೆ ಇದ್ದರೆ ಮಾಘಮಾಸ ಅಥವಾ ಮಾರ್ಗಶಿರ್ಷಮಾಸ ಇದರ ಅಮಾವಾಸ್ಯೆದಿನ ಮಾಡಬೇಕು.

8 ದೇಶಾಂತರ ಹೊರಟವನ ಸಮಾಚಾರವೇನೂ ತಿಳಿಯದಾಗ ಹನ್ನೆರಡು ವರ್ಷ ನಿರೀಕ್ಷೆಮಾಡಿ, ಅವನ ಪ್ರತಿಕೃತಿಯ ದಹನಸಂಸ್ಕಾರಮಾಡಿ ಆ ದಿನವೇ ವಾರ್ಷಿಕಾದಿಗಳನ್ನು ಮಾಡಬೇಕು, ಅಂದರೆ ಪಾಲಾಶವಿಧಿಯನ್ನು ಮಾಡಿ ವಾರ್ಷಿಕ ಮಾಡಬೇಕು.

## ಶ್ರಾದ್ಧದಲ್ಲಿ ವಿಘ್ನವುಂಟಾದರೆ ಹೇಗೆ?

1 ಶ್ರಾದ್ಧವಿಘ್ನವು ಅನೇಕಬಗೆ - ದ್ವಿತೀಯಕ್ಷಣದಾನ, ಮಂತ್ರ ಪೂರ್ವಕ. ಮಾಡುವುದಕ್ಕೆ ನಿಮಂತ್ರಣವೆಂದು ಹೆಸರು ಈ ನಿಮಂತ್ರಣವಾದ ನಂತರ ಬ್ರಾಹ್ಮಣರಿಗೆ ಸೂತಕ, ವೃದ್ಧಿಯಾಗಲಿ, ಮೃತಾಶೌಚವಾಗಲಿ ಬಂದರೆ, ಆಶೌಚವಿಲ್ಲ.

2 ಕರ್ತೃವಿಗೆ ಪಾಕಪರಿಕ್ರಿಯೆಯು (ಸಮಂತ್ರಕವಾದ ಪಾಕಪ್ರೋಕ್ಷಣವು) ಆದನಂತರ ಆಶೌಚವು ಬಂದರೂ ಇಲ್ಲ.

3 ಕರ್ತೃವಿನ ಗೃಹದಲ್ಲಿ ಭೋಜನವು ಆರಂಭವಾದ ನಂತರ ಜನನ ನಿಮಿತ್ತ ಮರಣನಿಮಿತ್ತ ಆಶೌಚವು ಬಂದಾಗ ಬೇರೆಯವರ ಜಲದಿಂದ ಭೋಜನ ಶೇಷವನ್ನು ಅಲ್ಲಿಗೆ ಬಿಟ್ಟು ಆಚಮನ ಮಾಡಬೇಕು.

ಪರಾ : ಇದೆಲ್ಲಾ ಆಪತ್ಕಾಲದಲ್ಲಿ ಅನುಸರಿಸಬೇಕಾದ ಶಾಸ್ತ್ರ.

4 ಆಪತ್ತಿಲ್ಲದಿರುವಾಗ ಕರ್ತೃವಿಗೆ ಶ್ರಾದ್ಧದ ನಡುವೆ ಬರುವ ಆಶೌಚವು ಕಳೆದನಂತರವೆ ಶ್ರಾದ್ಧವನ್ನು ಮಾಡಬೇಕು.

5 ಭೋಕ್ತೃವಿಗೆ (ಬ್ರಾಹ್ಮಣರಿಗೆ) ಭೋಜನವು ಆರಂಭವಾಗುವ ಮುಂಚೆಯೆ ಆಶೌಚವು ತಿಳಿದರೆ ಬೇರೆ ಬ್ರಾಹ್ಮಣನನ್ನು ನಿಮಂತ್ರಿಸಬೇಕು,

6 ವಿಪ್ರನಿಗೆ ಭೋಜನವು ಆರಂಭವಾದಮೇಲೆ ತಿಳಿದರೆ ಕರ್ತೃವು ಹಾಗೆಯೆ ಶ್ರಾದ್ಧವನ್ನು ಮುಗಿಯಿಸಬೇಕು.

7 ಭೋಜನಕಾಲದಲ್ಲಿ ಸೂತಕವು ಬಂದರೆ ಅವನ ಅನ್ನವನ್ನು ಊಟಮಾಡಿದರೆ ಪ್ರಾಯಶ್ಚಿತ್ತವು ಭೋಕ್ತೃವಿಗೆ ಅವಶ್ಯವಿದೆ. ಆಪತ್ಕಾಲದಲ್ಲಿ ಹಿಂದೆ ಹೇಳಿದಂತೆ ಮಾಡುವುದು ಯುಕ್ತವು,

8 ನಿರ್ಣಯ ಸಿಂಧುವಿನಲ್ಲಿ ಪಾಕವಾದನಂತರ ಆಶೌಚವಿಲ್ಲವೆಂದು ಹೇಳಿದ್ದು ಕರ್ತೃವಿಗೆ ಮಾತ್ರ. ಭೋಕ್ತೃವಿಗೆ ಆಶೌಚ, ಪ್ರಾಯಶ್ಚಿತ್ತ ಎರಡೂ ಇವೆ.

9 ಆಶೌಚವಿದೆಯೆಂದು ಗೊತ್ತಾಗಿದ್ದರೂ ಆಶೌಚಿಯ ಅನ್ನವನ್ನು ಅಜ್ಞಾನದಿಂದ ಊಟಮಾಡಿದರೆ, ಒಂದು ದಿನ, ಮೂರು ದಿನ, ಐದು ದಿನ, ಏಳುದಿನ ಭೋಜನ ಮಾಡಬಾರದು. ಪಂಚಗವ್ಯವನ್ನು ತೆಗೆದುಕೊಳ್ಳಬೇಕು ಇದನ್ನು ಪದೇ ಪದೇ ಮಾಡಿದರೆ ದ್ವಿಗುಣ ಪ್ರಾಯಶ್ಚಿತ್ತವಿದೆ. ಎಲ್ಲದಕ್ಕೂ ಹತ್ತುಸಾವಿರ ಗಾಯತ್ರಿಜಪ ಪ್ರಾಯಶ್ಚಿತವು ಇಂದಿನ ಕಾಲಕ್ಕೆ ಯೋಗ್ಯವು. ಇದು ಶ್ರಾದ್ಧಕಾಲಕ್ಕು ಬೇರೆಕಾಲಕ್ಕು ಸಮಾನ.

ದಾತೃವಿಗೂ, ಭೋಕ್ತೃವಿಗೂ ಆಶೌಚವಿರುವುದು ಗೊತ್ತಿಲ್ಲವಾದರೆ ಯಾವದೋಷವೂ ಇಲ್ಲ.

## ಶ್ರಾದ್ಧದಿನವನ್ನು ಅತಿಕ್ರಮಿಸಿದರೆ ಯಾವಾಗ ಮಾಡಬೇಕು?

1 ಆಶೌಚದ ಮಧ್ಯದಲ್ಲಿ ಶ್ರಾದ್ಧತಿಥಿಯು ಬಂದರೆ ಆಶೌಚವು ಕಳೆದು ಹನ್ನೊಂದನೆ ದಿನವೆ ಶ್ರಾದ್ಧ ಮಾಡಬೇಕು.

ಹನ್ನೊಂದನೆ ದಿನವು ಮಲಮಾಸಕ್ಕೆ ಬಿದ್ದರೆ ಮಲಮಾಸದಲ್ಲೂ ಇದನ್ನು ಮಾಡಬೇಕು. ಮಲಮಾಸವನ್ನು ಮೀರಿದರೆ ಶುದ್ಧ ಮಾಸದಲ್ಲಿ ಮಾಡಬೇಕು.

2 ಈ ಶಾಸ್ತ್ರವು ಮಾಸಿಕಕ್ಕೂ ವಾರ್ಷಿಕ ಶ್ರಾದ್ಧಕ್ಕೂ ಹೇಳಿದ್ದು, ಇದು ದರ್ಶಶ್ರಾದ್ಧಾದಿಗಳಿಗೆ ಅನ್ವಯಿಸುವುದಿಲ್ಲ. ಅವುಗಳಿಗೆ ಲೋಪವೇ ಉಪವಾಸವೆ ಪ್ರಾಯಶ್ಚಿತ್ತ, ಕಾಲಾಂತರದಲ್ಲಿ ದರ್ಶಾದಿಗಳನ್ನು ಮಾಡಬೇಕಾಗಿಲ್ಲ.

3 ಹನ್ನೊಂದನೆ ದಿನ ಮಾಡಲು ಆಗದಿದ್ದರೆ ಅಮಾವಾಸ್ಯೆ ಶುಕ್ಲ-ಕೃಷ್ಣ ಪಕ್ಷದ ಏಕಾದಶಿಗಳಲ್ಲಿ ವಾರ್ಷಿಕ ಶ್ರಾದ್ಧ ಮಾಡಬಹುದು.

ಮಾಸಿಕಂ ಚೋದಕುಂಭಂಚ ಯದ್ಯದನ್ತರಿತಂ ಭವೇತ್ ।
ತತ್ತದುತ್ತರ ಸಾತಂತ್ರ್ಯಾತ್ ಅನುಷ್ಠೇಯಂಪ್ರಚಕ್ಷತೇ ।

4 ಈ ವಚನದಂತೆ ಮಾಸಿಕವಾಗಲಿ ಉದಕುಂಭ ಶ್ರಾದ್ಧವಾಗಲಿ ಯಾವುದಾದರೂ ಆಶೌಚಾದಿಗಳಿಂದ ಬಿಟ್ಟು ಹೋಗಿದ್ದರೆ ಮುಂದಿನ ಮಾಸದಲ್ಲಿ ಮಾಸಿಕದೊಂದಿಗೆ ಬಿಟ್ಟ ಅತಿಪನ್ನಶ್ರಾದ್ಧವನ್ನು ಸೇರಿಸಿ ತಂತ್ರೇಣಕರಿಷ್ಯೆ ಎಂದು ಅನುಷ್ಠಾನ ಮಾಡಬೇಕೆಂದು ಹೇಳುತ್ತಾರೆ, ಇದೂ ಆಗಬಹುದು.

ಕೆಲವರು ಆಬ್ದಿಕವು ಹೀಗೆ ಮೃತದಿನ ತಪ್ಪಿಹೋದರೆ, ಅಮಾವಾಸ್ಯಾದಿಗಳಲ್ಲೂ ಆಗದಿದ್ದರೆ ಮುಂದಿನ ಮಾಸದಲ್ಲಿ ಮೃತತಿಥಿಯಲ್ಲೇ ಮಾಡಬೇಕೆಂದು ಹೇಳುತ್ತಾರೆ.

## ಪತ್ನಿಯು ಬಹಿಷ್ಠೆಯಾದರೆ

ಮಾಸಿಕ ಪ್ರತ್ಯಾಬ್ದಿಕಗಳೆರಡನ್ನು ಪತ್ನಿಯು ಬಹಿಷ್ಠೆಯಾದರೂ ಆ ಮೃತದಿನವಲ್ಲೇ ಮಾಡಬೇಕು - ಎಂಬುದು ಒಂದು ಮತ. ಐದನೆದಿನ ಸ್ನಾನವಾದನಂತರ ಮಾಡಬೇಕೆಂದು ಮತ್ತೊಂದು ಮತ. ಈ ಎರಡು ಮತಗಳಿಗೂ ಶಿಷ್ಟಾಚಾರ ಸಂಮತಿಯಿದೆ.

ಸಕೃನ್ಮಹಾಲಯ ಶ್ರಾದ್ಧವನ್ನು ಮಾತ್ರ ಮುಖ್ಯ ಕಾಲಾತಿಕ್ರಮವಾಗುವಹದಿದ್ದರೆ ಹೆಂಡತಿ ಬಹಿಷ್ಠೆಯಾದರೂ ಅಮಾವಾಸ್ಯೆದಿನ ಮಾಡಬೇಕು.

ಇದರಂತೆಯೆ ಆಶ್ವಯುಜ ಶುದ್ಧ ಪಂಚಮೀಪರ್ಯಂತ ಹೇಳಿದ ಕಾಲದಲ್ಲೂ ಹೇಳಿದಂತೆ ಆಚರಿಸಬೇಕು.

ಅಷ್ಟಮಿ ಮೊದಲಾದ ತಿಥಿಗಳಲ್ಲಿ ಪತ್ನಿಯು ಬಹಿಷ್ಠೆಯಾದರೆ ಸಕೃನ್ಮ ಹಾಲಯವನ್ನು ಮಾಡಬಾರದು. ಕಾಲಾಂತರವಿರುವುದರಿಂದ ಮುಂದೆ ಮಾಡಬಹುದು.

ಪ್ರತಿಸಾಂವತ್ಸರಿಕ, ಮಾಸಿಕ ಇವುಗಳನ್ನು ಪತ್ನಿಯು ಬಹಿಷ್ಠೆಯಾಗಿದ್ದರೂ ಮಾಡಬಹುದು. ಮೃತಾಹದಲ್ಲೆ ಮಾಡಬೇಕೆಂಬುದು ಒಂದುಪಕ್ಷ. ಕೆಲವರ ಮತದಲ್ಲಿ 5ನೇ ದಿನ ಮಾಡಬೇಕೆಂಬುದು ಮತ್ತೊಂದುಪಕ್ಷ ಎರಡಕ್ಕು ಆಧಾರವಿದೆ, ಶಿಷ್ಟಾಚಾರ ಸಂಮತಿಯಿದೆ.

ಇಬ್ಬರು ಹೆಂಡರಿದ್ದರೆ ಒಬ್ಬರು ಬಹಿಷ್ಠೆಯಾದರೂ ಮಾಡಬಹುದೆಂಬುದು ಸರ್ವಸಂಮತವಾದ ಪಕ್ಷವು.

ಶ್ರಾದ್ಧಕಾಲದಲ್ಲಿ ಬಹಿಷ್ಠೆಯರನ್ನು ನೋಡಬಾರದು, ಸಂಲಾಪಾದಿಗಳೂ ಕೂಡದು, ಶುದ್ಧವಾದಗೃಹ ಯೋಗ್ಯರಾದ ಪಾಂಚಕರು ಯಾರೂ ಸಿಕ್ಕದಿದ್ದರೆ ಐದನೆ ದಿನವೇ ಮಾಡಬೇಕು.

ಪುತ್ರರಿಲ್ಲದ ಸ್ತ್ರೀಯು ಬಹಿಷ್ಠೆಯಾದರೆ ಪತಿಯು ಅಬ್ದಿಕವನ್ನು 5ನೇ ದಿನ ಮಾಡಬೇಕು. ತಾನೇ ಮಾಡಬೇಕು. ಬೇರೆಯವರಿಂದ ಮಾಡಿ ಬಾರದು.

## ಎರಡು ಮೂರು ಶ್ರಾದ್ಧಗಳು ಒಂದೇದಿನ ಬಂದು ಸೇರಿದರೆ ಮಾಡುವ ವಿಧಾನ

1 ತಂದೆ ತಾಯಿಗಳ ಮೃತಾಹವು ಒಂದಾದಲ್ಲಿ ಮೊದಲು ಪಿತೃ ಶ್ರಾದ್ಧವನ್ನು ಅನಂತರ ಬೇರೆ ಪಾಕಮಾಡಿ ಮಾತೃ ಶ್ರಾದ್ಧ ಮಾಡಬೇಕು.

2 ಮನೆಯು ಸುಟ್ಟುಹೋಗಿ ಅಥವಾ ಬೇರೆಕಾರಣದಿಂದ ಸಪಿಂಡರು (ಜ್ಞಾತಿಗಳು) ಏಕಕಾಲದಲ್ಲಿ ಮೃತಪಟ್ಟರೆ ಹತ್ತಿರ ಸಂಬಂಧವನ್ನು ಲಕ್ಷಿಸಿ

ಆದರ ಕ್ರಮದಂತೆ ಶ್ರಾದ್ಧಗಳನ್ನು ಬೇರೆ ಬೇರೆ ಪಾಕದಲ್ಲಿ ಬೇರೆ ಬೇರೆಯೆ ಮಾಡಬೇಕು,

3 ಬೇರೆ ಬೇರೆ ಪಾಕಮಾಡಲು ಸಾಧ್ಯವಿಲ್ಲದಿದ್ದರೆ ಒಂದೇ ಪಾಕ ದಲ್ಲಿ ಬೇರೆ ಬೇರೆ ಶ್ರಾದ್ಧವನ್ನು ಮಾಡಬೇಕು —

ತಂತ್ರೇಣ ಶ್ರಪಣಂ, ಕೃತ್ವಾ ಶ್ರಾದ್ಧಂ ಕುರ್ಯಾತ್ ಪೃಥಕ್, ಪೃಥಕ್.

4 ಕ್ರಮವಾಗಿ ಒಂದೇದಿನದಲ್ಲಿ ಮಾತಾಪಿತೃಗಳು ಮೃತಪಟ್ಟಿದ್ದರೆ ಮರಣಕ್ರಮವನ್ನು ಅನುಸರಿಸಿ ಶ್ರಾದ್ಧವನ್ನು ಮಾಡಬೇಕು.

5 ಒಂದೆ ದಿನದಲ್ಲಿ ಒಬ್ಬನು ಮೂರು ಜನರಿಗೆ ಶ್ರಾದ್ಧಗಳನ್ನು ಮಾಡಬಾರದು. ವಾರ್ಷಿಕ ಶ್ರಾದ್ಧಗಳು ಮೂರು ಒಂದುದಿನ ಬಂದರೆ ಎರಡು ಶ್ರಾದ್ಧಗಳನ್ನು ತಾನು ಮಾಡಬೇಕು. ಮೂರನೆ ಶ್ರಾದ್ಧವನ್ನು ಸಹೋದರನ ಮೂಲಕವೂ ಬೇರೆಯವರಿಂದಲೋ ಆದೇದಿನ ಮಾಡಿಸಬೇಕು. ತಾನೇ ಮಾಡಬೇಕಾದರೆ ಬೇರೆದಿನದಲ್ಲಿ (ಏಕಾದಶಿ ಅಮಾವಾಸ್ಯೆಗಳಲ್ಲಿ) ಮಾಡಬೇಕು.

6 ತಂದೆ ತಾಯಿಗಳ ಶ್ರಾದ್ಧಗಳು ಜ್ಞಾತಿಗಳ ಶ್ರಾದ್ಧವು ಒಂದೆದಿನ ಕೂಡಿದಲ್ಲಿ ಹೀಗೆಯೆ ಮಾಡಬೇಕು.

ಶ್ರಾದ್ಧಂ ಕೃತ್ವಾತುತಸ್ಯೈವ ಪುನಃ ಶ್ರಾದ್ಧಂ ನತದ್ದಿನೇ
ನೈಮಿತ್ತಿಕಂತು ಕರ್ತವ್ಯಂ ನಿಮಿತ್ತೋತ್ಪತ್ತ್ಯನು ಕ್ರಮಾತ್ ।

ಎಂಬ ವಚನದಂತೆ ಒಂದೇದಿನ ಒಬ್ಬರಿಗೆ ಶ್ರಾದ್ಧವನ್ನು ಮಾಡಿ, ಪುನಃ ಮತ್ತೊಂದು ಶ್ರಾದ್ಧವನ್ನು ಮಾಡಬಾರದು. ಆದರೆ ನೈಮಿತ್ತಿಕ ಶ್ರಾದ್ಧ ವನ್ನು ಮಾಡಬಹುದು. ಅದೂ ಸಹ ನಿಮಿತ್ತವು ಹುಟ್ಟುವ ಕ್ರಮವನ್ನು ಅನುಸರಿಸಿಯೆ ಮಾಡಬೇಕು. ನಿಮಿತ್ತವು ನಿಯತ ನಿಮಿತ್ತ ಅನಿಯತ ನಿಮಿತ್ತವೆಂಬುದಾಗಿ ಎರಡುಬಗೆ.

7 ಯಾವುದು ಸರ್ವರಿಗೂ ಏಕರೂಪದಲ್ಲಿ ಬಾರದಿದ್ದರೆ ಅದು ಅನಿಯತ ನಿಮಿತ್ತ, ಇದು ವಾರ್ಷಿಕ ಶ್ರಾದ್ಧ, ಮಾಸಿಕ ಶ್ರಾದ್ಧಾದಿಗಳು ಇದನ್ನು ಮೊದಲುಮಾಡಿ ಅಮಾವಾಸ್ಯೆ ಶ್ರಾದ್ಧವನ್ನು ಅನಂತರ ಮಾಡಬೇಕು (ತರ್ಪಣವನ್ನು ಅನಂತರ ಮಾಡಬೇಕು).

8 ದರ್ಶ-ಮಹಾಲಯಗಳು ಒಟ್ಟಾದರೆ ಮೊದಲು ಮಹಾಲಯ, ಆಮೇಲೆ ದರ್ಶಶ್ರಾದ್ಧವನ್ನು ಮಾಡಬೇಕು.

9 ದರ್ಶವಾರ್ಷಿಕ-ಮಹಾಲಯಗಳು ಒಂದೇದಿನ ಬಂದಲ್ಲಿ ಮೊದಲು ವಾರ್ಷಿಕ, ಆಮೇಲೆ ಮಹಾಲಯ- ಆಮೇಲೆ ದರ್ಶ-ಮಾಡಬೇಕು. ಪಾಕವೂ ಬೇರೆಯಾಗಬೇಕು.

10 ಪ್ರತಿ ಸಾಂವತ್ಸರಿಕ ಮೊದಲಾದ ಶ್ರಾದ್ಧಗಳು ಬಂದರೆ ಮಹಾಲಯ ಹೇಗೆ ಮಾಡಬೇಕು ?— ಎಂಬುದರ ನಿರ್ಣಯ —

11 ಮಾತಾಪಿತೃಗಳು ಮೃತಪಟ್ಟಿರುವ ವರ್ಷದಲ್ಲಿ ಮಹಾಲಯವನ್ನು ಮಾಡಿದರೂ, ಬಿಟ್ಟರೂ ಸರಿ, ನಿಯಮವಿಲ್ಲ.

12 ಮಹಾಲಯವನ್ನು ಮಲಮಾಸದಲ್ಲಿ ಮಾಡಬಾರದು.

13 ಅಪರಪಕ್ಷದಲ್ಲಿ ಪ್ರತಿಸಾಂವತ್ಸರಿಕ ಬಂದರೆ ಮೃತ ತಿಥಿಯಲ್ಲಿ ವಾರ್ಷಿಕ ಶ್ರಾದ್ಧವನ್ನು ಮಾಡಿ ಬೇರೆ ತಿಥಿಯಲ್ಲಿ ಮಹಾಲಯ ಮಾಡಬೇಕು. ಪ್ರತಿಪತ್ತಿನಿಂದ ಅಮಾವಾಸ್ಯೆ ಪರ್ಯಂತ ಮೃತ ತಿಥಿಯಲ್ಲಿ ವಾರ್ಷಿಕವನ್ನು ಮಾಡಿ ನಂತರ ಬೇರೆ ಪಾಕದಲ್ಲಿ ಮಹಾಲಯ ಮಾಡಬೇಕು.

14 ಅಮಾವಾಸ್ಯೆದಿನ ಪ್ರತಿ ವಾರ್ಷಿಕಶ್ರಾದ್ಧವು, ಬಂದರೆ— ಇದರೊಂದಿಗೆ ಸಕೃನ್ಮಹಾಲಯವು ಕೂಡಿದರೆ. ಮೊದಲು ವಾರ್ಷಿಕವೂ ಅನಂತರ ಮಹಾಲಯವೂ, ಅನಂತರ ದರ್ಶಶ್ರಾದ್ಧವೂ-ಹೀಗೆ ಬೇರೆ ಬೇರೆ ಪಾಕಗಳಲ್ಲಿ ಆಗಬೇಕು.

15 ಮಹಾಲಯ ಮಾತ್ರ ಅಮಾವಾಸ್ಯೆದಿನ ಬಂದರೆ ಮೊದಲು ಮಹಾಲಯವು ನಂತರ ದರ್ಶ ಶ್ರಾದ್ಧ ಹೀಗೆ ಕರ್ತವ್ಯಗಳು.

16 ಮೃತ ತಿಥಿಯಲ್ಲಿ ಸಕೃನ್ಮಹಾಲಯವು ಬಂದರೆ ಮೃತ ತಿಥಿಯು ಅಪರಾಹ್ಣದಲ್ಲಿ ವ್ಯಾಪ್ತವಾಗಿರಬೇಕು ಎಂಬುವ ನಿರ್ಣಯವು ಅಮಾವಾಸ್ಯೆಗೆ ಹೇಳಿದಂತೆ ಗ್ರಾಹ್ಯವಾಗಿದೆ.

ಷರಾ : ಮಹಾಲಯ ಶ್ರಾದ್ಧವಿಚಾರವನ್ನು ಪ್ರತ್ಯೇಕ ಬರೆದಲ್ಲಿ ನೋಡಿರಿ

17 ಷಣ್ಣವತಿ ಶ್ರಾದ್ಧಗಳಲ್ಲಿ ಪಿತೃ ದೇವತೆಗಳು ಏಕರೀತಿಯಾಗಿ ದ್ದರೆ ತಂತ್ರೇಣ ಒಂದೇಸಲ ಸಂಕಲ್ಪಮಾಡಿ ಶ್ರಾದ್ಧಗಳನ್ನು ಮಾಡಬೇಕು.

18 ಅಧಿಕ ದೇವತೆಗಳಾಗಿದ್ದರೆ ಬೇರೆ ಬೇರೆ ಶ್ರಾದ್ಧಗಳನ್ನು ಮಾಡ ಬೇಕು.

19 ವಾರ್ಷಿಕ - ಮಾಸಿಕ - ಉದಕುಂಭಶ್ರಾದ್ಧಗಳು ಬಂದಾಗ ನಿತ್ಯ ಶ್ರಾದ್ಧವನ್ನು ದರ್ಶಾದಿ ಶ್ರಾದ್ಧವನ್ನು ಬೇರೆ ಮಾಡಬೇಕು.

20 ಮಹಾಲಯ ಮತ್ತು ತೀರ್ಥಕ್ಷೇತ್ರ ಶ್ರಾದ್ಧವನ್ನು ಮಾಡಿದರೆ ಷಣ್ಣವತಿ ಶ್ರಾದ್ಧಗಳನ್ನು ನಿತ್ಯ ಶ್ರಾದ್ಧವನ್ನು ಪ್ರತ್ಯೇಕ ಮಾಡಬೇಕಾಗಿಲ್ಲ.

22 ಮಾಸಿಕ ಮಾಡಿದರೆ ಅದರಿಂದಲೆ ಉದಕುಂಭ ಶ್ರಾದ್ಧವು ಮಾಡಿದಂತಾಗುವುದು. ಇದನ್ನು ಬೇರೆ ಮಾಡಬೇಕಾಗಿಲ್ಲ. ಸಂಕಲ್ಪದಲ್ಲೂ ಉಚ್ಚರಿಸಬೇಕಾಗಿಲ್ಲ.

ಷರಾ : ತಂತ್ರೇಣ ಅನುಷ್ಠಾನ ಪಕ್ಷವು ಪ್ರಯೋಗದಲ್ಲಿ ಎರಡು ಬಗೆಯಿದೆ, ಅದರ ವಿಚಾರವು ವಿಸ್ತಾರವಾಗಿರುವುದರಿಂದ ನಾವು ಇಲ್ಲಿ ಬರೆದಿಲ್ಲ. ಆಚರಣೆಯು ಕಮ್ಮಿಯಾಗಿದೆ.

22 ಷಡ್ದೇವತೆಗಳು ಸಮಾನವಾಗಿದ್ದರೆ ಷಡ್ಪುರುಷಾನ್ ಪಿತ್ರಾದೀನ್ ಉದ್ದಿಶ್ಯ ದರ್ಶಶ್ರಾದ್ಧಂ ವ್ಯತೀಪಾತ ಶ್ರಾದ್ಧಂಚ ತಂತ್ರೇಣ ಕರಿಷ್ಯೆ ಎಂದು ಸಂಕಲ್ಪ ಮಾಡಬೇಕಷ್ಟೆ.

23 ದರ್ಶ, ವಾರ್ಷಿಕ ಶ್ರಾದ್ಧಗಳಲ್ಲಿ ಪಿತೃದೇವತೆಯ ಭೇದವಿರುವುದರಿಂದ ಶ್ರಾದ್ಧಗಳು ಭಿನ್ನವೆ.

24 ಸಂಕ್ರಾಂತಿ–ಅಯನದ್ವಯ (ಕಟಕ-ಮಕರ) ವಿಷುವದ್ವಯ-ಯುಗಾದಿ-ಮನ್ವಾದಿ ಅಪರಪಕ್ಷದ ಭರಣೀ-ಮಘಾಯುಕ್ತ ತ್ರಯೋದಶಿ-ವೈಧೃತಿ-ವ್ಯತೀಪಾತ-ಗ್ರಹಣ ನಿಮಿತ್ತಶ್ರಾದ್ಧ, ಇತ್ಯಾದಿಗಳು ಪಿಂಡವಿಲ್ಲದೆ ಸಂಕಲ್ಪವಿಧಿಯಿಂದ ಮಾಡತಕ್ಕ ಶ್ರಾದ್ಧಗಳು. ದರ್ಶದಂತೆ ಷಡ್ ದೇವತಾ ಪಿತೃವರ್ಗ (ಸಪತ್ನೀಕ) ೩ ಮಾತಾಮಹವರ್ಗ ಸಪತ್ನೀಕ (೩) ಹೀಗೆ ಆರು ದೇವತೆಗಳು. ಇವುಗಳು ಸೇರಿದಾಗ ತಂತ್ರೇಣ ಅನುಷ್ಠಾನವು.

25 ಗ್ರಹಣ ನಿಮಿತ್ತ ಶ್ರಾದ್ಧಕಾಲವು ಭಿನ್ನಕಾಲವಾಗಿದ್ದರೆ ಪ್ರತ್ಯೇಕ ಅನುಷ್ಠಾನವು.

ಗ್ರಹಣ ಶ್ರಾದ್ಧದಿಂದಲೆ ಪೂರ್ಣವಾಗುವುದರಿಂದ ಸಂಕ್ರಾಂತಿ, ದರ್ಶಾದಿ ಶ್ರಾದ್ಧಗಳನ್ನು ಪ್ರತ್ಯೆಕ ಮಾಡಬೇಕಾಗಿಲ್ಲ.

26 ಪುತ್ರೋತ್ಪತ್ತಿ ನಿಮಿತ್ತವಾಗಿ ಮಾಡುವ ಶ್ರಾದ್ಧದಲ್ಲಿ ನವ(೯) ದೇವತೆಗಳು ಇರುವುದರಿಂದ ಪ್ರತ್ಯೇಕ ಆಚರಿಸಬೇಕು. ಇದೂ ಸಹ ಹಿರಣ್ಯದಿಂದಲೇ ಕರ್ತವ್ಯ, ಆಮ ಶ್ರಾದ್ಧವಾಗಲಿ, ಅನ್ನಶ್ರಾದ್ಧವಾಗಲಿ ಇದರಲ್ಲಿಲ್ಲ.

## ಶ್ರಾದ್ಧಾಂಗ ತಿಲತರ್ಪಣ ವಿಚಾರ

1 ಶ್ರಾದ್ಧಾಂಗ ತರ್ಪಣ ಅಂದರೆ ಯಾರ ಶ್ರಾದ್ಧದಲ್ಲಿ ಎಷ್ಟು ಪಿತೃಗಳನ್ನು ತೃಪ್ತಿಗೊಳಿಸಿರುವುದೋ, ಅಷ್ಟೇ ಸಂಖ್ಯೆಯ ಪಿತೃಗಳನ್ನು ಉದ್ದೇಶಿಸಿ ಆ ಶ್ರಾದ್ಧಾಂಗವಾಗಿ ಮಾಡುವ ತರ್ಪಣವು. ಇದನ್ನು ತಿಲದಿಂದ ಮಾಡಬೇಕು,

" ಪೂರ್ವಂ ತಿಲೋದಕಂ ದರ್ಶೆ ಪ್ರತ್ಯಬ್ದೇತು ಪರೇಽಹನಿ " ಎಂದು ಹೇಳಿದಂತೆ ದರ್ಶಶ್ರಾದ್ಧದಲ್ಲಿ ಮೊದಲೇ ತಿಲತರ್ಪಣವು. ಪ್ರತಿಸಾಂವತ್ಸರಿಕ ಶ್ರಾದ್ಧದಲ್ಲಿ ಪರೇಽಹನಿ ತರ್ಪಣವು ಕರ್ತವ್ಯ.

2 ಬ್ರಾಹ್ಮಣ ನಿಮಂತ್ರಣಾನಂತರವಾಗಲಿ, ಪಾಕವನ್ನು ಆರಂಭಿಸಿದ ನಂತರವಾಗಲಿ ಬ್ರಹ್ಮಯಜ್ಞವನ್ನು ಮಾಡಿದಲ್ಲಿ ಬ್ರಹ್ಮಯಜ್ಞಾಂಗ ತರ್ಪಣ ದಿಂದಲೇ ದರ್ಶಾಂಗತರ್ಪಣ ಸಿದ್ಧಿಸುವುದು. ಪುನಃ ಮಾಡಬೇಕಾಗಿಲ್ಲ.

3 ಇದಕ್ಕೆ ಮೊದಲು ವೈಶ್ವದೇವವಾದ ನಂತರ ಬ್ರಹ್ಮಯಜ್ಞ ಮಾಡಿದಲ್ಲಿ ಶ್ರಾದ್ಧದ ಷಟ್‌ಪುರುಷರಿಗೆ ತದಂಗ ತರ್ಪಣ ಮಾಡಿ, ಅನಂತರ ಶ್ರಾದ್ಧಾರಂಭ ಮಾಡಬೇಕು. ಪ್ರತಿನಿತ್ಯದ ಸರ್ವಪಿತೃತರ್ಪಣವನ್ನು ಬ್ರಹ್ಮ ಯಜ್ಞ ಕಾಲದಲ್ಲಿ ಮಾಡಬೇಕು.

4 ಸಂಕ್ರಾಂತಿ, ಯುಗಾದಿ, ಮನ್ವಾದಿ ಶ್ರಾದ್ಧಗಳಲ್ಲಿ ದರ್ಶದಂತೆ ಮೊದಲೇ ಮಾಡಬೇಕು,

5 ತೀರ್ಥಶ್ರಾದ್ಧದಲ್ಲಿ ಮಾತ್ರ ಸರ್ವಪಿತೃಗಳಿಗೆ ಮೊದಲಿ ತರ್ಪಣ ಮಾಡಿ ಶ್ರಾದ್ಧವನ್ನು ಮಾಡಬೇಕು.

6 ವಾರ್ಷಿಕಶ್ರಾದ್ಧದಲ್ಲಿ ಮಾರನೆ ದಿನವೆ ಪಿತ್ರಾದಿ ದೇವತಾತ್ರಯ (ಪಿ)ಕ್ಕೆ ಮಾತ್ರ ತರ್ಪಣ ಮಾಡಬೇಕು। ವಾರ್ಷಿಕ ಶ್ರಾದ್ಧದಲ್ಲಿ ನಿತ್ಯ ತರ್ಪಣವನ್ನು ತಿಲದಿಂದ ಮಾಡಬಾರದು.

7 ಸಕೃನ್ಮಹಾಲಯದಲ್ಲಿ ಸರ್ವಪಿತೃಗಳಿಗೂ ಮಾರನೆದಿನವೇ.

8 ಶ್ರಾದ್ಧಗಳು ಒಟ್ಟು ಒಂದು ದಿನ ಕೂಡಿದಾಗ ಯಾವ ಶ್ರಾದ್ಧ ದಿಂದ ಮತ್ತೊಂದು ಶ್ರಾದ್ಧವನ್ನು ಮಾಡಿದಂತಾಗುವದೊ. ಆ ಶ್ರಾದ್ಧದ ಅಂಗವಾಗಿಯೇ ತರ್ಪಣ ಮಾಡಬೇಕು. ಪ್ರತ್ಯೇಕ ಮಾಡಬೇಕಾದ್ದಿಲ್ಲ.

9 ತಂತ್ರೇಣ ಶ್ರಾದ್ಧಗಳನ್ನು ಸಂಕಲ್ಪಿಸಿ ಮಾಡುವಲ್ಲಿ ಎರಡುಶ್ರಾದ್ಧ ಗಳ ದೇವತೆಗಳು ಸಮಸಂಖ್ಯೆಯಲ್ಲಿದ್ದರೆ, ಆದಿಯಲ್ಲೊ ಅಂತ್ಯದಲ್ಲೊ

ತರ್ಪಣಮಾಡಬೇಕು, ವಿಷಮಸಂಖ್ಯೆಯಾಗಿದ್ದರೆ ಬಹು ದೇವತಾನುಸಾರ ವಾಗಿ ಮೊದಲು ಮಾಡಬೇಕು.

ಸಂಕ್ರಾಂತಿಗಳಲ್ಲೂ, ಮಾತಾಪಿತೃಗಳ ಶ್ರಾದ್ಧಗಳಲ್ಲೂ, ದರ್ಶವ್ಯತೀಪಾತ ಶ್ರಾದ್ಧಗಳು, ಪಿತೃವ್ಯಾದಿ ಶ್ರಾದ್ಧಗಳು, ಮಹಾಲಯ ಇವುಗಳಲ್ಲೂ ನಿಷಿದ್ಧದಿನವಾದರೂ ಶ್ರಾದ್ಧಾಂಗ ತಿಲ ತರ್ಪಣ ಕರ್ತವ್ಯವೆಂದು ಕೆಲವರ ಮತವಿದೆ.

ಕೆಲವರು ಸರ್ವತ್ರ ಶ್ರಾದ್ಧಾಂಗ ತರ್ಪಣಕ್ಕೆ ಯಾವ ತಿಥ್ಯಾದಿ ದೋಷಗಳೂ ಇಲ್ಲವೆನ್ನುವರು.

## ಶ್ರಾದ್ಧಾಂಗ ತರ್ಪಣ ನಿಷೇಧವು

ವೃದ್ಧಿಶ್ರಾದ್ಧೇ ಸಪಿಂಡ್ಯಾಂಚ ಪ್ರೇತಶ್ರಾದ್ಧೇಽನುಮಾಸಿಕೇ ।
ಸಂವತ್ಸರವಿಮೋಕೇಚ ನಕುರ್ಯಾತ್ತಿಲತರ್ಪಣಂ ॥

ಎಂಬ ವಚನದಂತೆ-ವೃದ್ಧಿಶ್ರಾದ್ಧ(ನಾಂದೀ ಶ್ರಾದ್ಧ) ದಲ್ಲೂ ಸಪಿಂಡೀಕರಣ, ಪ್ರೇತ ಶ್ರಾದ್ಧ, ಅನುಮಾಸಿಕ ಶ್ರಾದ್ಧ, ಅಬ್ದವಿಮೋಕ ಶ್ರಾದ್ಧ ಇವುಗಳಲ್ಲಿ ತಿಲತರ್ಪಣ ಮಾಡಬಾರದು.

## ಪರೇಽಹನಿ ತರ್ಪಣ ಕ್ರಮ

1 ಪರೇಽಹನಿ ತರ್ಪಣ ಮಾಡುವಾಗ ಮೊದಲು ಸ್ನಾನ ಮಾಡಿ, ತರ್ಪಣ ಮಾಡಿ ಪುನಃ ನಿತ್ಯಸ್ನಾನ ಮಾಡಿ, ಅನಂತರ ಪ್ರಾತಃ ಸಂಧ್ಯಾವಂದನೆ ಮಾಡಬೇಕು.

2 ಅಥವಾ ನಿತ್ಯಸ್ನಾನ – ಪ್ರಾತಃಸಂಧ್ಯೆಗಳನ್ನು ಮಾಡಿದ ನಂತರ ಶ್ರಾದ್ಧಾಂಗ ತರ್ಪಣ ಮಾಡುವುದು. ಸಂಬಂಧ-ನಾಮ–ಗೋತ್ರ,ರೂಪಗಳನ್ನು ಹೇಳುವಾಗ ದ್ವಿತೀಯಾವಿಭಕ್ತಿಯಲ್ಲಿ ಉಚ್ಚರಿಸಿ. (ಅಂದರೆ ಅಸ್ಮತ್ ಪಿತರಂ – ಶರ್ಮಾಣಂ – ಗೋತ್ರಂ – ವಸುರೂಪಂ ಎಂದು

ಹೇಳುತ್ತಾ ಸ್ವಧಾನಮಸ್ತರ್ಪಯಾಮಿ ಎಂದು ಋಗ್ವೇದಿಗಳು ಬಲಗೈಯ್ಯಲ್ಲಿ ತರ್ಪಣ ಪೂರಯಿಸಲ ಕೊಡಬೇಕು. ಮಿಕ್ಕನಾದವರು ಅಂಜಲಿಯಿಂದ ಕೊಡಬೇಕು. ಪ್ರತಿಯೊಂದು ಅಂಜಲಿಗೂ ಮಂತ್ರವನ್ನು ಆವೃತ್ತಿ ಮಾಡಿ ಹೇಳಬೇಕು. ಇದೇ ರೀತಿ ನಿತ್ಯತರ್ಪಣದಲ್ಲೂ ಮಾಡಬೇಕು.

ತೀರ್ಥೇತಿಥಿವಿಶೇಷೇಚ ಗಯಾಯಾಂ ಪ್ರೇತಪಕ್ಷಕೇ ।
ನಿಷಿದ್ಧೇಽಪಿ ದಿನೇಕುರ್ಯಾತ್ ತರ್ಪಣಂ ತಿಲಮಿಶ್ರಿತಮ್ ॥

ಎಂಬ ವಿಶೇಷವಚನದಂತೆ ತೀರ್ಥಕ್ಷೇತ್ರಗಳಲ್ಲೂ, ಅಷ್ಟಕಾದಿ ತಿಥಿವಿಶೇಷ ಗಳಲ್ಲೂ, ಗಯೆಯಲ್ಲೂ, ಮಹಾಲಯ ಪಕ್ಷದಲ್ಲೂ, ನಿಷಿದ್ಧವಾದ ದಿನ ವಾದರೂ ತಿಲದಿಂದ ತರ್ಪಣ ಮಾಡಬೇಕು.

## ವಿಭಕ್ತ ಕುಟುಂಬದವರೂ, ಅವಿಭಕ್ತ ಕುಟುಂಬದವರೂ ಸಹ ಶ್ರಾದ್ಧಾದಿಗಳನ್ನು ಹೇಗೆ ಆಚರಿಸಬೇಕು ?

1 ಆಸ್ತಿವಿಭಾಗ ಮಾಡಿಕೊಂಡ ಸಹೋದರರೇ ಮೊದಲಾದವರು ತಮ್ಮ ತಮ್ಮ ಧರ್ಮಗಳನ್ನು ಪ್ರತ್ಯೇಕವಾಗಿ ಆಚರಿಸಬೇಕು. ಆದರೆ ಮಾತಾಪಿತೃಗಳು ಗತಿಸಿದ ನಂತರ ಮಾಡುವ ಮೊದಲಿನಿಂದ ಹತ್ತು ದಿನ ಮಾಡುವ ಕರ್ಮಗಳು, ಸಪಿಂಡೀಕರಣಾಂತವಾದ ಕರ್ಮಗಳನ್ನೂ ಷೋಡಶ ಕರ್ಮಗಳನ್ನು ಮಾತ್ರ ಪ್ರತ್ಯೇಕ ಆಚರಿಸಬಾರದು. ಅವರಲ್ಲಿ ಜ್ಯೇಷ್ಠಪುತ್ರ ನೊಬ್ಬನು ಹತ್ತಿರದಲ್ಲಿದ್ದರೆ ಆಚರಿಸಬೇಕು. ಜ್ಯೇಷ್ಠನು ಹತ್ತಿರದಲ್ಲಿಲ್ಲ ವಾದರೆ ಕನಿಷ್ಠನೊಬ್ಬನೇ ಆಚರಿಸಬೇಕು.

2 ಅವಿಭಕ್ತರಾದಲ್ಲಿ ಧನದ ಅಪೇಕ್ಷೆಯಿಲ್ಲದ ಕರ್ಮಗಳನ್ನು ಅಂದರೆ ಸ್ನಾನ, ಸಂಧ್ಯಾ, ಬ್ರಹ್ಮಯಜ್ಞ, ಮಂತ್ರಜಪ, ಉಪವಾಸ, ಪಾರಾಯಣ ಮೊದಲಾದವುಗಳನ್ನು ಎಲ್ಲರೂ ಪ್ರತ್ಯೇಕ ಆಚರಿಸಬೇಕು. ಹಾಗೂ ನಿತ್ಯ ಕರ್ಮ, ನೈಮಿತ್ತಿಕ ಗ್ರಹಣ ಸ್ನಾನಾದಿಗಳನ್ನು, ಕಾಮ್ಯಕರ್ಮಗಳನ್ನು ಪ್ರತ್ಯೇಕವಾಗಿಯೇ ಮಾಡಬೇಕು. ಅಗ್ನಿಸಾಧ್ಯವಾದ ಶ್ರೌತ, ಸ್ಮಾರ್ತ ಕರ್ಮಗಳನ್ನು ಪ್ರತ್ಯೇಕ ಆಚರಿಸಬೇಕು.

3 ಪಂಚಮಹಾಯಜ್ಞಗಳಲ್ಲಿ, ದೇವಯಜ್ಞ, ಭೂತಯಜ್ಞ, ಪಿತೃ ಯಜ್ಞ, ಮನುಷ್ಯಯಜ್ಞಗಳು ಜ್ಯೇಷ್ಠಪುತ್ರನಿಗೆ ಮಾತ್ರ ಕರ್ತವ್ಯವಾಗಿವೆ.

4 ಪಾಕವು ಬೇರೆಯಾಗಿದ್ದರೆ ಆಶ್ವಲಾಯನರಿಗೆ ವೈಶ್ವದೇವವು ಬೇರ್ಪಡುವುದು ನಿಯತವಲ್ಲ. ಜ್ಯೇಷ್ಠನು ವೈಶ್ವದೇವ ಮಾಡಿದ ನಂತರ ಕನಿಷ್ಠನಿಗೆ ಪಾಕವು ಸಿದ್ಧವಾದಲ್ಲಿ ಸ್ವಲ್ಪ ಅನ್ನವನ್ನು ಅಗ್ನಿಯಲ್ಲಿ ಹಾಕಿ, ಬ್ರಾಹ್ಮಣನಿಗೂ ಅನ್ನವನ್ನು ಕೊಟ್ಟು, ನಂತರ ಊಟಮಾಡಬೇಕೆಂದು ಕೆಲವರ ಅಭಿಪ್ರಾಯ.

5 ದೇವಪೂಜೆಯೂ ಮಾತ್ರ ಪ್ರತ್ಯೇಕವಾಗಿಯೇ. ಅಥವಾ ಒಂದೇ ಸ್ಥಳದಲ್ಲಿ ಪ್ರತಿಸಾಂವತ್ಸರಿಕ ಶ್ರಾದ್ಧ, ದರ್ಶ, ಸಂಕ್ರಾಂತಿ. ಗ್ರಹಣಾದಿ ನಿಮಿತ್ತ ಶ್ರಾದ್ಧಗಳು ಅವಿಭಕ್ತ ಕುಟುಂಬದಲ್ಲಿ ಜ್ಯೇಷ್ಠನಿಗೆ.

6 ಅವಿಭಕ್ತ ಸಹೋದರರು ಏಕಕಾಲದಲ್ಲಿ ಸೇರಿದರೆ ಜ್ಯೇಷ್ಠನೇ ತೀರ್ಥಶ್ರಾದ್ಧಾದಿಗಳನ್ನು ಮಾಡತಕ್ಕದ್ದು. ಅವರು ಏಕಕಾಲದಲ್ಲಿ ಸೇರ ದಿದ್ದರೆ ಪ್ರತ್ಯೇಕ ಆಚರಿಸಬೇಕು,

ಇದೇ ರೀತಿಯಾಗಿ ಗಯಾಶ್ರಾದ್ಧ ಒದಗಿದಾಗ ಆಚರಿಸಬೇಕು. ಕಾಮ್ಯ ವಾದ ದಾನ,ಹೋಮಾದಿಗಳಲ್ಲಿ ಧನದಿಂದ ಆಚರಿಸಬೇಕಾದ ಈ ಕರ್ಮಗಳಲ್ಲಿ ಸಹೋದರರ ಅನುಮತಿಯಿಂದ ಜ್ಯೇಷ್ಠನಿಗೆ ಅಧಿಕಾರ ಬರುವುದು,

## ತೀರ್ಥಶ್ರಾದ್ಧದ ಕ್ರಮ

1 ಗಂಗಾ-ಯಮುನಾದಿ ತೀರ್ಥಕ್ಷೇತ್ರಗಳಲ್ಲಿ ತೀರ್ಥಶ್ರಾದ್ಧವನ್ನು ಮಾಡಬೇಕು. ತೀರ್ಥಶ್ರಾದ್ಧದಲ್ಲಿ ಸಕೃನ್ಮಹಾಲಯದಂತೆ ಸಮಸ್ತ ಪಿತೃ ಗಣವನ್ನೂ ಉದ್ದೇಶಿಸಿ ಧುರಿವಿಲೋಚನವೆಂಬ ವಿಶ್ವೇದೇವರೊಂದಿಗೆ ಮಾಡ ಬೇಕು. ಇದರಲ್ಲಿ ಅರ್ಘ್ಯ, ಆವಾಹನ ಬ್ರಾಹ್ಮಣನ ಅಂಗುಷ್ಠ ನಿವೇಶನ, ತೃಪ್ತಿಪ್ರಶ್ನೆ, ವಿಕಿರ, ವಿಸರ್ಜನೆ, ದಿಗ್ಬಂಧಗಳು ವರ್ಜ್ಯವಾಗಿವೆ.

2 ಅಗ್ನೌಕರಣವನ್ನು ಮಾಡಿದರೂ ಬಿಟ್ಟರೂ ಸರಿ, ಅಗ್ನೌಕರಣ ಮಾಡುವ ಪಕ್ಷದಲ್ಲಿ, ತೀರ್ಥಜಲದ ಹತ್ತಿರದಲ್ಲಿ ಮಾಡುವುದಾದರೆ ಆಗ ಪ್ರಕೃತಿಶ್ರಾದ್ಧದ ಮಂತ್ರಗಳೊಂದಿಗೆ ತೀರ್ಥಜಲದಲ್ಲೇ ಹೋಮಮಾಡಬೇಕು. ಹಾಗಿಲ್ಲವಾದರೆ ಬ್ರಾಹ್ಮಣ ಹಸ್ತಾದಿಗಳಲ್ಲಿ ಮಾಡಬೇಕು. ಪಿಂಡಗಳನ್ನು ತೀರ್ಥದಲ್ಲೇ ಹಾಕಬೇಕು. ಈ ಶ್ರಾದ್ಧಕ್ಕೆ ತೀರ್ಥಕ್ಷೇತ್ರವಾಸಿಗಳಾದ ಬ್ರಾಹ್ಮಣರನ್ನೇ ಗುಣಶೂನ್ಯರಾದರೂ ಆಮಂತ್ರಿಸಬೇಕು. ಅವರೂ ಇಲ್ಲದಿದ್ದರೆ ಬೇರೆಯವರನ್ನು ಕೂರಿಸಬಹುದು.

3 ಶ್ರಾದ್ಧಪ್ರದೇಶದಲ್ಲಿ ಅನ್ನಾದಿ ದ್ರವ್ಯಗಳನ್ನು ಕಾಗೆ, ನಾಯಿಗಳು ಇತರೆಯವರೂ ನೋಡಿದರೂ ದೋಷವಿಲ್ಲ.

4 ತೀರ್ಥಶ್ರಾದ್ಧಾಂಗ ತರ್ಪಣವನ್ನು ಅಮಾವಾಸ್ಯೆಯಂತೆ ಮೊದಲೆ ಮಾಡಬೇಕು.

5 ಸಂಕಲ್ಪಕ್ರಮ :—

ಶುಭತಿಥೌ—ಇತ್ಯಾದಿ ದೇಶಕಾಲೌ ಸಂಕೀರ್ತ್ಯ, ಮಮ ಅಸ್ಮತ್ ಪಿತೃ - ಪಿತಾಮಹ - ಪ್ರಪಿತಾಮಹಾನಾಂ, ಸಪತ್ನಿಕಾನಾಂ, ಸಪತ್ನೀಕ ಮಾತಾಮಹ, ಮಾತುಃಪಿತಾಮಹ, ಮಾತುಃಪ್ರಪಿತಾಮಹಾನಾಂ, ಸಪತ್ನೀಕಾನಾಂ, ಪಿತೃವ್ಯಸ್ಯ ಸಪತ್ನೀಕಸ್ಯ ಸಸುತಸ್ಯ, ಮಾತುಲಸ್ಯ, ಸಪತ್ನೀಕಸ್ಯ, ಸಸುತಸ್ಯ, ಭ್ರಾತುಃ ಸುತಸ್ಯ, ದುಹಿತುಃ ಸಭರ್ತೃಕ ಸಸುತ, ಪಿತೃಭಗಿನ್ಯಾಃ, ಮಾತೃಭಗಿನ್ಯಾಃ (ಸಭರ್ತೃಕಾಯಾಃ ಸಸುತಾಯಾಃ), ಆತ್ಮಭಗಿನ್ಯಾಃ, ಸಭರ್ತೃಕಾಯಾಃ, ಸಸುತಾಯಾಃ), ಶ್ವಶುರಸ್ಯ ಸಪತ್ನೀಕಸ್ಯ, (ಗುರೋಃ ಸಪತ್ನೀಕಸ್ಯ) ಆಚಾರ್ಯಸ್ಯ ಸಪತ್ನೀಕಸ್ಯ. ಸಖ್ಯುಃ (ಸಪತ್ನೀಕಸ್ಯ)— ಇತ್ಯೇಷಾಂ, ಏತತ್ತೀರ್ಥ ಪ್ರಾಪ್ತಿನಿಮಿತ್ತಂ ತೀರ್ಥಶ್ರಾದ್ಧಂ ಸಪಿಂಡಂ ಸದೈವಂ ಸದ್ಯಃ ಕರಿಷ್ಯೇ ಎಂದು ಸಂಕಲ್ಪ ಮಾಡಿ, ಧೂರಿವಿಲೋಚನ ವಿಶ್ವೇದೇವರೊಂದಿಗೆ ಮಹಾಲಯದಂತೆ ಮಾಡಬೇಕು.

6 ತೀರ್ಥಯಾತ್ರೆಗೆ ಪತ್ನಿಸಹಿತನಾದ ಗೃಹಸ್ಥನಿಗೆ ಅಧಿಕಾರ. ನಿರಗ್ನಿಕ-ಅಪತ್ನೀಕರಿಗೂ ಅಧಿಕಾರವಿದೆ. ಸ್ತ್ರೀಯರಿಗೆ ಪುತ್ರರ ಅನುಮತಿ ಯಿಂದಲೇ ಸ್ನಾನ, ದಾನ ತೀರ್ಥಯಾತ್ರೆಗಳಲ್ಲಿ ಅಧಿಕಾರವಿದೆ. ಸುವಾ ಸಿನಿಯರಿಗೆ ಪತಿಯುಕ್ತಳಾದವಳಿಗೆ ಮಾತ್ರ ಯಾತ್ರಾಧಿಕಾರ.

7 ತೀರ್ಥಕ್ಷೇತ್ರಗಳಿಗೆ ಹೋದರೆ ಆ ದಿನ ಅಥವ ಅದರ ಹಿಂದಿನ ದಿನ ಉಪವಾಸವಿರಬೇಕು, ತೀರ್ಥದಲ್ಲಿ ಸ್ನಾನಮಾಡಿ, ಉತ್ತರ ದಿಕ್ಕಿಗೋ ಪೂರ್ವದಿಕ್ಕಿಗೋ ಮುಖ ಮಾಡಿಕೊಂಡು ಕೇಶ ಗಡ್ಡ ಮೀಸೆ ರೋಮ ನಖ ಗಳನ್ನು ತೆಗೆಯಿಸಬೇಕು. ಅನಂತರ ಮಂತ್ರಪೂರ್ವಕ ಸ್ನಾನ ಮಾಡಬೇಕು.

8 ಪ್ರಣವದಿಂದ ತೀರ್ಥಜಲವನ್ನು ಆಲೋಡನೆ ಮಾಡಿ ತೀರ್ಥದಲ್ಲಿ ಮುಳುಗಿ ಸ್ನಾನ ಮಾಡಿ ಅನಂತರ ಈ ಮುಂದಿನ ಮಂತ್ರದಿಂದ ಸ್ನಾನ ಮಾಡಬೇಕು.

ಓಂನಮೋ ದೇವದೇವಾಯ ಶಿತಿಕಂಠಾಯ ದಂಡಿನೇ ।
ರುದ್ರಾಯ ಚಾಪಹಸ್ತಾಯ ಚಕ್ರಿಣೇ ವೇಧಸೇ ನಮಃ ॥
ಸರಸ್ವತೀಚ ಸಾವಿತ್ರೀ ವೇದಮಾತಾ ಗರೀಯಸೀ ।
ಸನ್ನಿಧಾತ್ರೀ ಭವತ್ವತ್ರ ತೀರ್ಥೇಪಾಪಪ್ರಣಾಶಿನೀ ॥

ಅನಂತರ ತರ್ಪಣ. ತೀರ್ಥಶ್ರಾದ್ಧದ ದಿನ ಹೊರಡಬಾರದು. ಮೂರನೇ ದಿನ ಹೊರಡಬೇಕು.

ಮುಂಡನಂಚೋಽಪವಾಸಶ್ಚ ಸರ್ವತೀರ್ಥೇಷ್ವಯಂ ವಿಧಿಃ ।
ವರ್ಜಯಿತ್ವಾ ಕುರುಕ್ಷೇತ್ರಂ ವಿಶಾಲಂ ವಿರಜಾಂ ಗಯಾಂ ॥

9 ಕುರುಕ್ಷೇತ್ರ, ವಿರಜಾ, ವಿಶಾಲ, ಗಯೆ ಇವುಗಳನ್ನು ಬಿಟ್ಟು ಇತರ ಮಹಾಕ್ಷೇತ್ರಗಳಲ್ಲಿ ಮುಂಡನ, ಉಪವಾಸ, ಎರಡೂ ನಿಯತ, ಜೀವತ್ಪಿತೃಕ, ಗರ್ಭಿಣೀಪತಿ, ಚೌಲವಾಗಿದ್ದ ಬಾಲಕ ಇವರುಗಳಿಗೆ ಪ್ರಥಮ ಯಾತ್ರೆಯಲ್ಲಿ ವಪನವಿದೆ, ಕೇವಲ ಶಿರೋಮುಂಡನ ಮಾತ್ರ,

## ಸುವಾಸಿನಿಯರು ವೇಣೀದಾನ ಮಾಡಬೇಕು.

ಅದರ ಪ್ರಯೋಗ - ಸುವಾಸಿನಿಯು ಜಡೆ ಹಾಕಿಕೊಂಡು ಮಂಗಳದ ಉಡುಪನ್ನು ಧರಿಸಿ ಪತಿಗೆ ನಮಸ್ಕಾರ ಮಾಡಿ, ಪತಿಯ ಆಜ್ಞಾನುಸಾರ ಎರಡು ಅಂಗುಲದಷ್ಟು ತಲೆಕೂದಲನ್ನು ಕತ್ತರಿಸಿ, ಸ್ನಾನಮಾಡಿ, ತ್ರಿವೇಣೀ ಪೂಜೆ ಮಾಡಬೇಕು. ಪೂಜೆಯಾದ ಮೇಲೆ ಪತ್ನಿಯು ಕತ್ತರಿಸಿದ ತಲೆ ಕೂದಲೊಂದಿಗೆ ಬದರಿ ಪಾತ್ರೆ ಅಂದರೆ ಸಣ್ಣ ಮುಚ್ಚಲನ್ನು ಅಂಜಲಿಯಲ್ಲಿ ಹಿಡಿದು ಚಿನ್ನದ ಒಳೆ, ಮುತ್ತು, ಹವಳ ಮೊದಲಾದುವನ್ನು ಹಾಕಿ, ಮಂತ್ರವನ್ನು ಹೇಳಿ ತ್ರಿವೇಣಿಯಲ್ಲಿ ಬಿಡಬೇಕು.

ಮಂತ್ರ - ವೇಣ್ಯಾಂ ವೇಣೀಪ್ರದಾನೇನ ಮಮಪಾಪಂ ವ್ಯಪೋಹತು ।
ಜನ್ಮಾಂತರೇಷ್ವಪಿ ಸದಾ ಸೌಭಾಗ್ಯಂ ಮಮವರ್ಧತಾಂ ॥

ಬ್ರಾಹ್ಮಣರು ಆಶೀರ್ವಾದ ಮಾಡಬೇಕು. ಬ್ರಾಹ್ಮಣ ಸುವಾಸಿನಿಯರಿಗೆ ವಸ್ತ್ರದಾನ ಮಾಡಬೇಕು,

ತೀರ್ಥಕ್ಷೇತ್ರ ಲಭಿಸಿದಲ್ಲಿ ವಿಲಂಬ ಮಾಡದೆ ಸ್ನಾನ, ಪಿತೃತರ್ಪಣ, ಶ್ರಾದ್ಧಾದಿಗಳನ್ನು ಆಚರಿಸಬೇಕು, ಪರ್ವಾದಿ ಕಾಲವನ್ನು ವಿಚಾರ ಮಾಡಬೇಕಾಗಿಲ್ಲ.

ಆಕಸ್ಮಾತ್ ತೀರ್ಥಕ್ಷೇತ್ರವು ಲಭಿಸಿದಲ್ಲಿ ಎರಡು ಮೂರು ದಿನ ವಾಸ ಮಾಡಲು ಆಗದಿದ್ದಲ್ಲಿ, ಊಟ ಮಾಡಿದ್ದರೂ. ರಾತ್ರಿಯಲ್ಲೂ, ಸ್ನಾನ, ಹಿರಣ್ಯಾದಿಗಳಿಂದ ತೀರ್ಥಶ್ರಾದ್ಧವನ್ನು ಮಾಡಬೇಕು. ಇದೇ ರೀತಿ ಮಲ ಮಾಸ ಬಂದರೂ ಮಾಡಬೇಕು.

## ಇನ್ನೊಬ್ಬರಿಗಾಗಿ ತೀರ್ಥಸ್ನಾನ ಮಾಡಬಹುದು.

ಮಾತರಂ ಪಿತರಂ ಜಾಯಾಂ ಭ್ರಾತರಂ ಸುಹೃದಂ ಗುರುಂ ।
ತೀರ್ಥೇ ಸ್ನಾಯಾದ್ಯಮುದ್ದಿಶ್ಯ ಸೋಽಷ್ಟಮಾಂಶಂ ಲಭೇನ್ನರಃ ॥

ಈ ವಚನದಂತೆ ತಾಯಿ, ತಂದೆ, ಹೆಂಡತಿ, ಸಹೋದರ, ಸ್ನೇಹಿತ, ಗುರು --ಇವರನ್ನು ಉದ್ದೇಶಿಸಿ ತೀರ್ಥಕ್ಷೇತ್ರಗಳಲ್ಲಿ ಯಾವನು ಸ್ನಾನ

ಮಾಡುವನೋ ಅವನು ಸ್ನಾನದ ಫಲದಲ್ಲಿ ಎಂಟನೇಒಂದು ಭಾಗವನ್ನು ಪಡೆಯುವನು. ಪಕ್ವಾನ್ನದಿಂದ ತೀರ್ಥದಲ್ಲಿ ಶ್ರಾದ್ಧವನ್ನು ಮಾಡಿದರೆ ಅದರಿಂದಲೇ ಪಿಂಡಗಳನ್ನು ಹಾಕಬೇಕು. ಹಿರಣ್ಯಾದಿಗಳಿಂದ ಶ್ರಾದ್ಧ ಮಾಡಿದರೆ ಹಿಟ್ಟು, ಪಾಯಸ, ಗುಡ ಇವುಗಳಲ್ಲಿ ಒಂದನ್ನು ಪಿಂಡಸ್ಥಾನ ದಲ್ಲಿ ಉಪಯೋಗಿಸುವುದು. ಪಿಂಡಗಳನ್ನು ತೀರ್ಥದಲ್ಲೇ ಹಾಕಬೇಕು, ಇದನ್ನು ಪುತ್ರರಿಲ್ಲದ ವಿಧವೆಯೂ ಮಾಡಬಹುದು. ಪುತ್ರವತಿಯಾದವ ಳಾದರೆ ಅವಳು ಪತಿಯ ಶ್ರಾದ್ಧವನ್ನು ಯಾವತ್ತೂ ಮಾಡಬಾರದು.

"ಸಪುತ್ರಯಾ ನ ಕರ್ತವ್ಯಂ ಭರ್ತೃಶ್ರಾದ್ಧಂ ಕದಾಚನ" ಎಂದು ನಿಷೇಧಿಸಿದೆ. ಉಪನಯನವಾಗದವನೂ ಮಾಡತಕ್ಕದ್ದು. ಯತಿಯು ಮಾಡಬಾರದು. ಆದರೆ ಗಯೆಗೆ ಹೋದರೆ ಯತಿಯು ದಂಡವನ್ನು ತೋರಿಸಬೇಕು, ಪಿಂಡ ಹಾಕಬಾರದು, ದಂಡದಿಂದ ವಿಷ್ಣುಪಾದವನ್ನು ಸ್ಪರ್ಶಿಸಿದರೆ ಪಿತೃಗಳೊಂದಿಗೆ ಯತಿಯು ಮುಕ್ತನಾಗುವನು. ಇದರಂತೆ ವಟವೃಕ್ಷಾದಿ ಸ್ಥಳಗಳಲ್ಲಿಯೂ ದಂಡವನ್ನು ತೋರಿಸಬೇಕು.

ತೀರ್ಥಾದಿಗಳಲ್ಲಿ ಜೀವನವೃತ್ತಿಯೇನೂ ಸಿಕ್ಕದಿದ್ದರೆ ಪ್ರತಿಗ್ರಹಮಾಡಿ ಜೀವಿಸಬೇಕು. ಆದರೆ ದಶಮಾಂಶವನ್ನು ದಾನಮಾಡಿ ಅದರಿಂದ ಶುದ್ಧ ನಾಗಬೇಕು.

## ಪುನಃ ಸಂಸ್ಕಾರಕಾಲವು

1 ಗುರು ಶುಕ್ರಾಸ್ತ, ಪುಷ್ಯಮಾಸ, ಮಲಮಾಸ, ವೈಧೃತಿ, ವ್ಯತೀ ಪಾತ, ಪರಿಘಯೋಗ, ವಿಷ್ಟಿಕರಣ, ಚತುರ್ಥಾಷ್ಟಮ, ದ್ವಾದಶಚಂದ್ರ, ಇವುಗಳನ್ನು ಸರ್ವಥಾ ಬಿಡಬೇಕು,

2 ರೋಹಿಣಿ, ಮೃಗಶಿರ, ಪುನರ್ವಸು, ಪೂರ್ವೋತ್ತರ ಫಲ್ಗುನಿ, ಚಿತ್ತೆ, ವಿಶಾಖೆ, ಅನೂರಾಧ, ಪೂರ್ವೋತ್ತರಾಷಾಢ, ಧನಿಷ್ಠ ಎಂಬುದಾಗಿ ಸ್ವಲ್ಪ ದೋಷಯುಕ್ತವಾದ್ದನ್ನು ಬಿಡುವುದಕ್ಕಾದರೆ ಬಿಡಬಹುದು. ಮಂಗಳ ವಾರವೂ ತ್ಯಾಜ್ಯ.

3 ಕರ್ತೃವಿನ ತ್ರಿಜನ್ಮತಾರೆಗಳಲ್ಲಿ ಜನ್ಮನಕ್ಷತ್ರ (ಇವು ಮಧ್ಯಮ ತಾರೆಗಳು) ಅಲ್ಲಿಂದ ದಶಮ, ಹತ್ತೊಂಬತ್ತನೆಯ ನಕ್ಷತ್ರಗಳಲ್ಲೂ ಪ್ರತ್ಯರಿ ತಾರೆಗಳಲ್ಲೂ ಪರ್ಣಶರಾದಿ ದಾಹ ಮಾಡಬಾರದು.

4 ಭಾನು, ಸೋಮ, ಗುರುವಾರಗಳೂ, ಅಶ್ವಿನೀ, ಪುಷ್ಯ, ಹಸ್ತ, ಸ್ವಾತಿ, ಶ್ರವಣ ನಕ್ಷತ್ರಗಳೂ ಪ್ರಶಸ್ತ.

5 ನಂದಾತಿಥಿ, ಶುಕ್ರವಾರ, ಚತುರ್ದಶಿ, ತ್ರಿಜನ್ಮತಾರೆ, ಪ್ರತ್ಯರಿ ತಾರೆಗಳಲ್ಲಿ ಏಕೋದ್ದಿಷ್ಟವು ಅತ್ಯಂತ ನಿಂದಿತ. ನೇರಾ ಏಕಾದಶಾಹವಾದರೆ ಯಾವ ದೋಷವೂ ಇಲ್ಲ.

6 **ನಿಷಿದ್ಧ ನಕ್ಷತ್ರಾದಿಗಳು ಇದ್ದರೂ ಅಪವಾದ ಶಾಸ್ತ್ರದಂತೆ** ಯುಗಾದಿ, ಮನ್ವಾದಿ, ಸಂಕ್ರಾಂತಿ, ದರ್ಶಗಳಲ್ಲೂ, ಪ್ರೇತಕರ್ಮಗಳಲ್ಲೂ, ಪುನಃ ಸಂಸ್ಕಾರಾದಿಗಳಲ್ಲೂ ನಕ್ಷತ್ರಾದಿಗಳನ್ನು ಶೋಧಿಸಬೇಕಾದ್ದಿಲ್ಲ. ಗಯೆ ಗೋದಾವರಿಗಳಲ್ಲಿ ಪಿತೃಮೇಧವಾಗಬಹುದು, ಈ ಎರಡು ಬಿಟ್ಟು ಉಳಿದ ಸ್ಥಳಗಳಲ್ಲಿ ಗುರು ಶುಕ್ರಾಸ್ತ ಮಲಮಾಸ, ಗುರುಶುಕ್ರಾಸ್ತ ವಾರ್ಧ್ಯವಿರುವಾಗ ಪಿತೃಮೇಧವನ್ನು ಮಾಡತಕ್ಕದ್ದಲ್ಲ ಎಂದು ಹೇಳಿದೆ. ವಚನಗಳು —

ಯುಗಮನ್ವಾದಿಸಂಕ್ರಾಂತಿ ದರ್ಶೇಚ ಪ್ರೇತಕರ್ಮಣಿ ।
ಪುನಃಸಂಸ್ಕಾರಾದಿಕೇಽಪಿ ನಕ್ಷತ್ರಾದಿ ನಶೋಧಯೇತ್ ॥
ಗುರುಭಾರ್ಗವಯೋರ್ಮೌಢ್ಯೇ ಪೌಷಮಾಸೇ ಮಲಿಮ್ಲುಚೇ ।
ನಾತೀವ ಪಿತೃಮೇಧಃಸ್ಯಾತ್ ಗಯಾಂಗೋದಾವರೀಂವಿನಾ ॥

ಈ ರೀತಿ ಪುನಃಸಂಸ್ಕಾರಕಾಲವನ್ನು ತಿಳಿಸಿದೆ.

**ಪಲಾಶವಿಧಿಯನ್ನು ಮಾಡಿದಮೇಲೂ ದೇಹವು ಸಿಕ್ಕಿದರೆ** ಸಾಗ್ನಿಕನಿಗೆ ಪಲಾಶವಿಧಿಯಿಂದ ದಹಿಸಿ ಅರ್ಧ ಸುಟ್ಟಿರುವ ಕಾಷ್ಠಗಳಿಂದ ಸಿಕ್ಕಿದ ದೇಹವನ್ನು ದಹಿಸಬೇಕು. ಈ ಕಾಷ್ಠವೂ ಸಿಕ್ಕದಿದ್ದರೆ ಲೌಕಿಕಾಗ್ನಿಯಿಂದ ದಹಿಸಿ ಅದರ ಅಸ್ಥಿಗಳನ್ನು ನದಿ, ಮಹಾಸಮುದ್ರದಲ್ಲಿ ಎಸೆಯಬೇಕು. ಹೀಗೆಯೇ ಬೇರೆ ನಿರಗ್ನಿಕರಿಗೂ (ಅಗ್ನಿಯನ್ನು ತ್ಯಜಿಸಿದವರಿಗೂ) ಇದೇ ರೀತಿಯಾಗಿ ಸಿಕ್ಕಿದ ದೇಹವನ್ನು ದಹಿಸಬೇಕು,

**ಸಾಯದೆ ಬದುಕಿರುವವನಿಗೂ ಮರಣವಾರ್ತೆಯನ್ನು ಕೇಳಿ ಉತ್ತರ ಕ್ರಿಯೆಯನ್ನು ನಡೆಸಿದ್ದರೆ ಪ್ರಾಯಶ್ಚಿತ್ತವಿಧಿಯನ್ನು ಮಾಡಬೇಕು.**

ಅಮೃತಂ ಮೃತಮಾಕರ್ಣ್ಯ ಕೃತಂಸ್ಯಾದೌರ್ಧ್ವದೈಹಿಕಂ ।
ಪ್ರಾಯಶ್ಚಿತ್ತಮಸೌಸ್ಮಾರ್ತಂ ಕೃತ್ವಾಗ್ನೀನಾದಧೀತಚ ॥ ವಚನ,

## ಪುನಃ ಸಂಸ್ಕಾರವಿಧಿಯು

ಬದುಕಿರುವ ಈ ಮನುಷ್ಯನನ್ನು ತುಪ್ಪದ ಬಾನಿಯಲ್ಲಿ ಮುಳುಗಿಸಿ ಮೇಲಕ್ಕೆತ್ತಿ ಸ್ನಾನ ಮಾಡಿಸಿ, ಅನಂತರ ಜಾತಕರ್ಮ ಮೊದಲಾದ ಉಪ ನಯನಾಂತ ಸಂಸ್ಕಾರವನ್ನು ಮಾಡಿ ತ್ರಿರಾತ್ರವ್ರತವು ಮುಗಿದ ಮೇಲೆ ಹಿಂದಿನ ಹೆಂಡತಿಯೊಡನೆ ಪುನಃ ವಿವಾಹ ಸಂಸ್ಕಾರವನ್ನು ಈತನಿಗೆ ಮಾಡ ಬೇಕು. ಮೊದಲಿನ ಹೆಂಡತಿ ಮೃತಪಟ್ಟಿದ್ದರೆ ಬೇರೆ ವಧುವನ್ನು ಕರಸಿ ವಿವಾಹ ಮಾಡಿಸಬೇಕು. ಆಹಿತಾಗ್ನಿಯಾಗಿದ್ದರೆ ಆಯುಷ್ಮದಿಷ್ಟಿ ಮೊದ ಲಾದುವನ್ನು ಮಾಡಬೇಕು.

ಪತಿಯು ಬದುಕಿದ್ದು ಮೃತಪಟ್ಟನೆಂಬ ವಾರ್ತೆಯನ್ನು ಕೇಳಿ ಆತ್ಮ ಹತ್ಯೆ ಮಾಡಿಕೊಂಡಲ್ಲಿ ಪ್ರಾಯಶ್ಚಿತ್ತವನ್ನು ಆಕೆಯ ಪುತ್ರರು ಮಾಡಿ ನಾರಾಯಣಬಲಿಯನ್ನು ಮಾಡಿ ದಹನಾದಿ ಉತ್ತರಕ್ರಿಯೆಗಳನ್ನು ಮಾಡ ಬೇಕು.

## ದುರ್ಮರಣ ಹೊಂದಿದವರ ಉತ್ತರಕ್ರಿಯೆಗೆ ಆರಂಭದಲ್ಲಿ ಮಾಡಬೇಕಾದ ನಾರಾಯಣಬಲಿ

ದುರ್ಮರಣಗಳಲ್ಲಿ ಜಲ, ಅಗ್ನಿ ಮುಂತಾದವುಗಳಿಂದ ಆತ್ಮಹತ್ಯೆ ಮಾಡಿಕೊಂಡಲ್ಲಿ, ಪ್ರಮಾದದಿಂದ ಮರಣವಾದಲ್ಲಿ, ಪತಿತಾದಿಗಳು ಮೃತ ಪಟ್ಟಲ್ಲಿ ಅಂಥವನ ದೋಷನಿವೃತ್ತಿಗಾಗಿ ಪ್ರಾಯಶ್ಚಿತ್ತವನ್ನೋ, ಶಾಸ್ತ್ರೋಕ್ತ ವಾದ ದಾನವನ್ನೋ ಮಾಡಬೇಕು. ಉಕ್ತ ಪ್ರಾಯಶ್ಚಿತ್ತ ಮಾಡಲು

ಅಶಕ್ತನಾದಲ್ಲಿ ಅವನ ಬಗ್ಗೆ ದಾನವನ್ನೇ ಮಾಡಬೇಕು. ಶಾತಾತಪರು ಹೇಳಿದಂತೆ ದಾನಗಳನ್ನು ಮಾಡಬೇಕು, ಅನಂತರ ನಾರಾಯಣಬಲಿ ಮಾಡಿ ಉತ್ತರಕ್ರಿಯೆಯನ್ನು ಮಾಡಬೇಕು. ಅದರಿಂದ ಪುತ್ರಾದಿಗಳಿಗೂ ಜ್ಞಾತಿಗಳಿಗೂ ಶುದ್ಧಿಯಾಗುವುದು. ಪುತ್ರಾದಿಗಳು ಪಿತ್ರಾದಿಗಳಿಗೆ ಪ್ರಾಯಶ್ಚಿತ್ತವನ್ನು ಮಾಡದೆ ಹೋದರೆ ನರಕಾದಿಗಳಲ್ಲಿ ದುಃಖವಾಗುವುದು.

1 ವ್ಯಾಘ್ರನಿಂದ ಹತನಾದರೆ ಬ್ರಾಹ್ಮಣ ಕನ್ಯೆಗೆ ವಿವಾಹ ಮಾಡಿಸುವುದು.

2 ಗಜದಿಂದ ಹತನಾದರೆ ಚಿನ್ನದಿಂದ ಮಾಡಿದ ಗಜಪ್ರತಿಮೆಯನ್ನು ದಾನಮಾಡಬೇಕು.

3 ರಾಜನಿಂದ ಹತನಾದರೆ ಚಿನ್ನದ ಪುರುಷಪ್ರತಿಮೆ ದಾನ.

4 ಚೋರನಿಂದ ಹತನಾದರೆ ಪ್ರತ್ಯಕ್ಷ ಗೋದಾನ.

5 ಶತ್ರುವಿನಿಂದ ಹತನಾದರೆ ವೃಷಭದಾನ.

6 ವೃಷಭದಿಂದ ಹತನಾದರೆ ಯಥಾಶಕ್ತಿ ಸುವರ್ಣದಾನ.

7 ಅಶ್ವದಿಂದ ಹತನಾದರೆ ಚಿನ್ನದ ಕುದುರೆಯ ಪ್ರತಿಮಾದಾನ.

8 ನಾಯಿಯಿಂದ ಹತನಾದರೆ ದೇವಾಲಯದಲ್ಲಿ ಕ್ಷೇತ್ರಪಾಲಸ್ಥಾಪನೆ.

9 ಕ್ರಿಮಿಗಳಿಂದ ಹತನಾದರೆ ಗೋಧಿ ದಾನ.

ಇತ್ಯಾದಿ ದಾನಗಳನ್ನು ಹೇಳಿದೆ.

ಹಾಸಿಗೆ ಮೇಲೆ ಮೃತಪಟ್ಟರೆ ಶಯ್ಯಾದಾನ. ಇದನ್ನು ಮಾಡುವಾಗ ಚಿನ್ನದ ವಿಷ್ಣುಪ್ರತಿಮೆಯನ್ನು ದಾನ ಮಾಡಬೇಕು.

ಶೌಚವಿಲ್ಲದೆ, ಸಂಸ್ಕಾರವಿಲ್ಲದೆ ಇರುವವನು ಮೃತಪಟ್ಟರೆ, ಕ್ರಿಮಿ, ಕಾಲರಾದಿಂದಲೂ, ಊಟಮಾಡುವಾಗ ಗಂಟಲಲ್ಲಿ ತುತ್ತು ಸಿಕ್ಕಿ ಹೋದರೂ ಶ್ವಾಸ್, ಅತಿಸಾರ ರೋಗ, ಭೂತಪ್ರೇತ ಪಿಶಾಚಿಗಳು ಹಿಡಿದು ಹೋದರೂ ಆಕಾಶದಲ್ಲಿ ಹೋದರೂ, ಅಸ್ಪೃಶ್ಯಸ್ಪರ್ಶದಿಂದ ಮೃತಪಟ್ಟರೂ, ಸುವರ್ಣ ವಿಷ್ಣುಪ್ರತಿಮಾದಾನ ಮಾಡಬೇಕು. ಪ್ರಾಯಶ್ಚಿತ್ತವೂ. ನಾರಾಯಣ ಬಲಿಯೂ ಅವಶ್ಯವಿಲ್ಲ. ಒಂದು ವರ್ಷಕಾಲ ನಿರೀಕ್ಷೆಯೂ ಬೇಡ.

ಶಾಸ್ತ್ರಾನುಜ್ಞೆಯಿಲ್ಲದೆ ಶಸ್ತ್ರ, ಅಗ್ನಿ, ವಿಷ, ಜಲ, ಪಾಷಾಣ. ಝರಿಯಲ್ಲಿ ಬೀಳುವುದು, ಅನಶನ ಮತ್ತು ಉಪವಾಸಗಳಿಂದ ಬುದ್ಧಿಪೂರ್ವಕವಾಗಿ ಸ್ವೇಚ್ಛೆಯಿಂದ ಆತ್ಮಹತ್ಯೆ ಮಾಡಿಕೊಂಡವರ ವಿಷಯದಲ್ಲಿ ಆಶೌಚವು ಮೊಟ್ಟಮೊದಲು ಕರ್ತವ್ಯವಾಗಿಲ್ಲ, ಆತ್ಮಹತ್ಯಾದಿ ಪಾಪನಿಮಿತ್ತವಾಗಿ ದ್ವಿಗುಣ ಪ್ರಾಯಶ್ಚಿತ್ತ, ಕೃಚ್ಛ್ರ, ತತ್ಪ್ರತ್ಯಾಮ್ನಾಯ ಭೂರಿದಕ್ಷಿಣಾದಾನ ಮಾಡಿ, ಅನಂತರ ನಾರಾಯಣಬಲಿಯನ್ನು ಮಾಡಿ ಅವರ ದೇಹವನ್ನು ದಹನ ಮಾಡಬೇಕು.

ಆತ್ಮಹತ್ಯೆ ಮಾಡಿಕೊಂಡವರ ಬಗ್ಗೆ ಪುತ್ರಾದಿಗಳು ಮರಣದಿನದಿಂದ ಆರಂಭಿಸಿ ಆಶೌಚವಿರಬೇಕಾಗಿಲ್ಲ, ಮತ್ತೇನೆಂದರೆ, ಆಯಾಯ ಪ್ರಾಯಶ್ಚಿತ್ತ-ಕೃಚ್ಛ್ರಾಚರಣೆ ನಡೆಯಿಸಿ, ನಾರಾಯಣಬಲಿ ಮಾಡಿ ಮಂತ್ರಪೂರ್ವಕ ದಹನಮಾಡಿದ ದಿನದಿಂದಲೆ ಆಶೌಚವಿರಬೇಕು,

2 ಪ್ರಮಾದದಿಂದ ಮೃತಪಟ್ಟವರಿಗಾಗಿ ಮರಣದಿನದಿಂದಲೇ ಆಶೌಚವಿರಬೇಕು. ಪ್ರಮಾದದಿಂದ ಮರಣವಾದರೂ ದುರ್ಮರಣವೇ ಆದ್ದರಿಂದ ತನ್ನಿಮಿತ್ತವಾದ ಪ್ರಾಯಶ್ಚಿತ್ತಪೂರ್ವಕ ದಹನಾದಿಗಳನ್ನು ಮಾಡಲೇಬೇಕು.

3 ಆಹಿತಾಗ್ನಿಯು ದುರ್ಮರಣ ಅಥವಾ ಆತ್ಮಹತ್ಯೆಯನ್ನು ಹೊಂದಿದಲ್ಲಿ ಲೌಕಿಕಾಗ್ನಿಯಿಂದ ಅವರ ದಹನ ಮಾಡಿ ನಂತರ ಅವರ ಅಸ್ಥಿಗಳನ್ನು ಕ್ಷೀರದಿಂದ ತೊಳೆದು ಪ್ರಾಯಶ್ಚಿತ್ತ ಮಾಡಿ ಪುನಃ ಶ್ರೌತಾಗ್ನಿಗಳಿಂದ ಸಮಂತ್ರಕವಾಗಿ ದಹನ, ಆಶೌಚ, ಉದಕದಾನಾದಿಗಳನ್ನು ಮಾಡಬೇಕೆಂದು ಮಾಧವಮತವು. ಇದೇ ರೀತಿಯಾಗಿ ಅಗ್ನಿಯಿಲ್ಲದ ವಿಧುರಾದಿಗಳಿಗೂ ಮಾಡಬೇಕೆಂದು ಹೇಳಿದೆ.

4 ಪ್ರಾಣಾಂತಿಕ ಪ್ರಾಯಶ್ಚಿತ್ತದಿಂದ ಮೃತಪಟ್ಟವನಿಗೆ ಅವನ ಬಗ್ಗೆ ದಶಾಹ ಆಶೌಚ, ಸಮಸ್ತ ಪ್ರೇತಕಾರ್ಯಗಳನ್ನು ಮಾಡಬಹುದು. ಪ್ರಾಯಶ್ಚಿತ್ತದಿಂದಲೇ ಮೃತಪಟ್ಟವನು ಶುದ್ಧನಾಗಿರುವನು. ಆದ್ದರಿಂದ ಬೇರೆ ಮಾಡಬೇಕಾಗಿಲ್ಲ.

ಚಂಡಾಲ ಗೋ ಬ್ರಾಹ್ಮಣ ಚೋರ ಪಶುದಂಷ್ಟ್ರಿ ಸರ್ಪಾಗ್ನ್ಯಾದಿಭಿಃ ಪ್ರಮಾದಾನ್ಮರಣೇಚ ಚಾಂದ್ರಾಯಣಂ ತಪ್ತ ಕೃಚ್ಛ್ರದ್ವಯಂ ತತ್ಪ್ರಾಯಶ್ಚಿತ್ತಂ ಕೃತ್ವಾ ಪಂಚದಶಕೃಚ್ಛ್ರಾಣಿ ವಾ ಪ್ರಾಯಶ್ಚಿತ್ತಂ ಕೃತ್ವಾ ವಿಧಿವತ್ ದಹನ-ಆಶೌಚ ಉದಕದಾನಾದಿ ಸರ್ವಂ ಕಾರ್ಯಮಿತಿ – ಎಂದು ಸ್ಮೃತ್ಯರ್ಥ ಸಾರದಲ್ಲಿ ಹೇಳಿದೆಯೆಂದು ಧರ್ಮಸಿಂಧು ಉದಾಹರಣೆ.

ಹಿಂದೆ ಹೇಳಿದಂತೆ ಪ್ರಾಯಶ್ಚಿತ್ತ, ದಾನ ಇವುಗಳನ್ನು ಪುತ್ರಾದಿಗಳು ಮಾಡಲು ಅಶಕ್ತರಾದರೆ ನಾರಾಯಣಬಲಿಯನ್ನು ಮಾಡಿ ಅನಂತರ ದಹನಾದಿ ಸಂಸ್ಕಾರಗಳನ್ನು ಮಾಡಬೇಕು.

ಷರಾ – ಈಗಿನ ಕಾಲದಲ್ಲಿ ಉಕ್ತ ಪ್ರಾಯಶ್ಚಿತ್ತಗಳನ್ನಾಗಲಿ, ಉಕ್ತ ದಾನಗಳನ್ನಾಗಲಿ ಯಾರೂ ಶಕ್ತರೂ ಮಾಡುವುದಿಲ್ಲ. ಆದ್ದರಿಂದ ಪ್ರತ್ಯಾಮ್ನಾಯ ದಕ್ಷಿಣೆ ದಾನಮಾಡಿ ನಾರಾಯಣಬಲಿ ಮಾಡಿ ದಹನಾದಿ ಸಂಸ್ಕಾರವನ್ನು ನಡೆಯಿಸುವುದು ಸೂಕ್ತ.

## ಶಾಸ್ತ್ರೋಕ್ತರೀತಿಯಲ್ಲಿ ದೇಹತ್ಯಾಗ ಮಾಡಿದರೆ ಮಹತ್ತಾದ ಫಲ

ಸರ್ವವರ್ಣದವರಲ್ಲೂ ರೋಗಿಗಳಾಗಲಿ ರೋಗವಿಲ್ಲದವರಾಗಲಿ ಭಾಗೀರಥೀ ಮೊದಲಾದ ನದಿಗಳಲ್ಲಿ ಪ್ರವೇಶ ಮಾಡಿ ದೇಹತ್ಯಾಗ ಮಾಡಿದರೆ ಸ್ವರ್ಗಾದಿ ಫಲವನ್ನು ಹೊಂದುವರು.

ತನುಂತ್ಯಜೇಜ್ಜಲಾಗ್ನ್ಯಾದ್ಯೈಃ ನ ಯಥೇಷ್ಟಂ ಫಲಂ ಲಭೇತ್ ।
ದುಃಶ್ಚಿಕಿತ್ಸ್ಯೈಃ ಮಹಾರೋಗೈಃ ಪೀಡಿತೋ ಜೀವನಾಕ್ಷಮಃ ।
ಪ್ರವಿಶೇಜ್ಜ್ವಲನಂ ದೀಪ್ತಂ ಕರೋತ್ಯನಶನಂ ತಥಾ ।
ಅಗಾಧತೋಯರಾಶಿಂಚ ಭೃಗೋಃಪತನಮೇವಚ ।
ಗಚ್ಛೇನ್ ಮಹಾಪಥಂವಾಪಿ ತುಷಾರಗಿರಿಮಾದರಾತ್ ।
ಪ್ರಯಾಗ ವಟಶಾಖಾಗ್ರಾತ್ ದೇಹತ್ಯಾಗಂ ಕರೋತಿಚ ।
ಉತ್ತಮಾನ್ ಪ್ರಾಪ್ನುಯಾನ್ ಲೋಕಾನಾತ್ಮಘಾತೀ
ಭವೇತ್ ಕ್ವಚಿತ್ ॥

ನರಾಣಾಮಥನಾರೀಣಾಂ ಸರ್ವವರ್ಣೇಷು ಸರ್ವದಾ ।
ಆಶೌಚಂ ಸ್ಯಾತ್ರ್ಯಹಂತೇಷಾಂ ವಜ್ರಾನಲಹತೇ ತಥಾ ।
ವಾರಾಣಸ್ಯಾಂ ಮ್ರಿಯೇದ್ಯಸ್ತು ಪ್ರತ್ಯಾಖ್ಯಾತಭಿಷಕ್ಕ್ರಿಯಃ ।
ಕಾಷ್ಠಪಾಷಾಣಮಧ್ಯಸ್ಥೋ ಜಾಹ್ನವೀಜಲಮಧ್ಯಗಃ ।
ಅವಿಮುಕ್ತೋನ್ಮುಖಃಸ್ತಸ್ಯ ಕರ್ಣಮೂಲಂ ಗತೋಹರಃ ।
ಪ್ರಣವಂ ತಾರಕಂ ಬ್ರೂತೇ ಇತ್ಯಾದಿ ವಚನೋಚ್ಚಯಃ ।
ವ್ಯಾಧಿತೋ ಭಿಷಜಾತ್ಯಕ್ತೋ ವಿಪ್ರೋವೃದ್ಧೋಽಥವಾಯುವಾ ।

ಇಲ್ಲಿ ರೋಗಗ್ರಸ್ತನಾಗಿ ವೈದ್ಯರೂ ಕೈಬಿಟ್ಟಿರುವ ವೃದ್ಧಬ್ರಾಹ್ಮಣನೂ ಯುವಕನೂ ಸಹ ನೀರು ಬೆಂಕಿ ಮುಂತಾದವುಗಳಿಂದ ದೇಹತ್ಯಾಗ ಮಾಡುವಲ್ಲಿ ಯಥೇಷ್ಟ ಫಲವನ್ನು ಹೊಂದುವನು. ಚಿಕಿತ್ಸೆ ಮಾಡಲು ಸಾಧ್ಯವಿಲ್ಲದ ರೋಗಗಳಿಂದ ಪೀಡಿತನಾಗಿ ಬದುಕಲು ಅಸಮರ್ಥನಾಗಿದ್ದಲ್ಲಿ ಉರಿಯುವ ಬೆಂಕಿಯಲ್ಲೋ, ಆಳವಾದ ನೀರಿನಲ್ಲೋ, ಜಲಪಾತದಲ್ಲೋ ಬಿದ್ದು ದೇಹತ್ಯಾಗ ಮಾಡಬೇಕು, ಪ್ರಯಾಗದಲ್ಲಿರುವ ವಟವೃಕ್ಷದ ಮೇಲಿನಿಂದ ಕೆಳಕ್ಕೆ, ಗಂಗಾ-ಯಮುನಾ ಸಂಗಮದಲ್ಲಿ ಹಾರಿ ದೇಹತ್ಯಾಗ ಮಾಡಿದರೆ ಉತ್ತಮವಾದ ಲೋಕಗಳನ್ನು ಹೊಂದುವನು. ಇಂತಹವನು ಆತ್ಮಹತ್ಯೆ ಮಾಡಿಕೊಳ್ಳುವವರ ಪಂಕ್ತಿಗೆ ಸೇರುವುದಿಲ್ಲ.

ವಾರಣಾಸಿಯಲ್ಲಿ ಪ್ರಬಲ ರೋಗಿಯಾದವನು ಕಾಷ್ಠ-ಪಾಷಾಣಗಳ ನಡುವೆ ಗಂಗಾಜಲದಲ್ಲಿ ಪ್ರವೇಶಿಸಿದಲ್ಲಿ ಅವಿಮುಕ್ತ ಈಶ್ವರನ ಕಡೆ ತಿರುಗಿದವನಾಗಿ ವಿಶ್ವನಾಥನಿಂದ ಬಲಗಿವಿಯಲ್ಲಿ ತಾರಕ ಪ್ರಣವೋಪದೇಶವನ್ನು ಹೊಂದಿ ಮುಕ್ತನಾಗುವನು.

**ಶಾಸ್ತ್ರೋಕ್ತವಾದ ಬುದ್ಧಿಪೂರ್ವಕವಾದ ಆತ್ಮಹತ್ಯೆ ಮಾಡಿಕೊಳ್ಳಲು ಗೃಹಸ್ಥರಿಗೆ ಮಾತ್ರ ಅಧಿಕಾರವಿದೆ. ಯತಿಗಳಿಗೆ ಅಧಿಕಾರವಿಲ್ಲ.** ಅಂಥವರ ವಿಷಯದಲ್ಲಿ ಮೂರುದಿನ ಆಶೌಚವೆಂದಿದೆ. ಪ್ರಯಾಗ ಮರಣವು ಸ್ತ್ರೀಯರಿಗೆ ಸರ್ವಸಮ್ಮತ. ಸಹಗಮನವೂ ಸಹ ಸಮ್ಮತವಾಗಿದೆ.

ಹರಾ ಸಹಗಮನವನ್ನು ಈಗಿನವರು ಯಾರೂ ಮಾಡುವುದಿಲ್ಲ, ಶಾಸ್ತ್ರದ ಅನುಜ್ಞೆಯಿದ್ದರೂ ಸರ್ಕಾರದ ಅನುಮತಿಯಿಲ್ಲದೆ ಯಾವುದನ್ನೂ ಮಾಡುವಂತಿಲ್ಲ.

## ಮೃತಪತಿತಾದಿಗಳ ವಿಷಯದಲ್ಲಿ ಆಚರಣೆ ಹೇಗೆ ?

ಯಾವನು ಪತಿತನಾಗಿರುವನೋ, ಘಟಸ್ಫೋಟದಿಂದ ಯಾವನು ಬಹಿಷ್ಕೃತನೋ ತುರುಷ್ಕನಾಗಿ ಪರಿವರ್ತಿಸಲ್ಪಟ್ಟಿರುವನೋ ಅಂದರೆ ಮಹಮ್ಮದ ಮತಕ್ಕೆ ಅಥವಾ ಕ್ರೈಸ್ತಮತಕ್ಕೆ ಸೇರಿ ಮತಾಂತರ ಹೊಂದಿರುವನೊ ಮತ್ತು ಪ್ರಾಯಶ್ಚಿತ್ತಕ್ಕೂ ಅನರ್ಹವಾದ ಪಾಪಕೆಲಸ ಮಾಡಿರುವನೋ, ಈ ಮೂರು ಬಗೆಯ ಜನರೂ (ಮಾತಾಪಿತೃಗಳಲ್ಲದವರು) ಮೃತಪಟ್ಟರೆ ಪತಿತರಿಗೆ ಮಾಡುವ ತಿಲೋದಕ ದಾನವಿಧಿಯನ್ನು ಮುಗಿಸಿ ಸಪಿಂಡೀಕರಣವಿಲ್ಲದೆ ಅಂತ್ಯಕರ್ಮವನ್ನು ಮಾಡಿ ನಿಲ್ಲಿಸಬೇಕು.

ತಂದೆ ಅಥವಾ ತಾಯಿ ಮೇಲೆ ಹೇಳಿದಂತೆ ಪತಿತ, ಬಹಿಷ್ಕೃತ, ಮತಾಂತರ ಹೊಂದಿ ಮೃತರಾದರೆ ನಾರಾಯಣಬಲಿಪೂರ್ವಕವಾಗಿ ಸಪಿಂಡೀಕರಣಸಹಿತ ಸಮಸ್ತ ಕಾರ್ಯವೂ ಪುತ್ರನಿಂದ ಕರ್ತವ್ಯವಾಗಿದೆ.

## ಪತಿತೋದಕ ದಾನ ವಿಧಾನ

ಒಬ್ಬ ದಾಸಿಯನ್ನು (ಕೂಲಿ ಮಾಡುವ ಹೆಂಗಸನ್ನು) ಕರೆದು ಅವಳಿಗೆ ವೇತನವನ್ನು ಕೊಟ್ಟು ಅಶುದ್ಧ ವಸ್ತುಗಳಿಂದ ತುಂಬಿದ ಒಂದು ಘಟವನ್ನು ಕೈಯಲ್ಲಿ ಹಿಡಿಸಿ ಹೀಗೆ ಹೇಳಬೇಕು—

**ಹೇ ದಾಸಿ, ಗಚ್ಛಮೂಲ್ಯೇನ ತಿಲಾನ್ ತೋಯಪೂರ್ಣಂ ಘಟಂಚ ಶೀಘ್ರಮಾನಯ, ದಕ್ಷಿಣಾಮುಖೀ ಉಪವಿಶ್ಯ ವಾಮಪಾದೇನ ತಂ ಘಟಂ ಸತಿಲಂ ಕ್ಷಿಪ** ಎಂದು.

ಈ ಮಾತನ್ನು ಕೇಳಿದ ದಾಸಿಯು ಮೂಲ್ಯವನ್ನು ಸ್ವೀಕರಿಸಿ, ದಕ್ಷಿಣಕ್ಕೆ ತಿರುಗಿ ಕುಳಿತುಕೊಂಡು ಎಡಗಾಲಿನಿಂದ ತಿಲಸಹಿತವಾದ ಘಟವನ್ನು ಒದ್ದು

ಎಸೆಯಬೇಕು. ಎಸೆಯುವ ಕಾಲದಲ್ಲಿ "ಅಮುಕ ಸಂಜ್ಞಿಕ ಪ್ರೇತ ಪಿಬ ಪಿಬ" ಪದೇ ಪದೇ ಉಚ್ಚರಿಸಬೇಕು. ಹೀಗೆ ಮಾಡಿದರೆ ಪತಿತನಿಗೆ ತೃಪ್ತಿಯಾಗುವುದು. ಇದನ್ನು ಪತಿತನು ಹೋದ ದಿನ ಮಾಡಬೇಕು.

**ಮೃತ ಯತಿಯ ವಿಷಯದಲ್ಲಿ ಆಶೌಚವಿಲ್ಲ. ಪ್ರೇತಸಂಸ್ಕಾರ ಉದಕದಾನ, ಸಪಿಂಡಿ ಈ ಎಲ್ಲವೂ ನಿಷಿದ್ಧವಾಗಿವೆ. ಆದರೆ, ಹನ್ನೊಂವನೆ ದಿನ ಪಾರ್ವಣಶ್ರಾದ್ಧ ಮಾಡಬೇಕು.** ಪುತ್ರನು ಪ್ರತಿ ಸಾಂವತ್ಸರಿಕ ಶ್ರಾದ್ಧ ಮೊದಲಾದವನ್ನು ಪಿಂಡಸಹಿತವಾಗಿ ಪಾರ್ವಣವಿಧಿಯಂತೆ ಆಚರಿಸಬೇಕು. (ಆರಾಧನೆಯನ್ನು ಮಾಡಬೇಕು.)

ತ್ರಿದಂಡಿ, ಏಕದಂಡಿ, ಹಂಸ. ಪರಮಹಂಸ, ಯತಿಗಳು ಮೃತಪಟ್ಟರೂ ಆಶೌಚವಿಲ್ಲ. ಜೀವಚ್ಛ್ರಾದ್ಧವನ್ನು ಮಾಡಿದವನು ಮೃತಪಟ್ಟರೂ ಇವರ ಬಗ್ಗೆ ಆಶೌಚವಿಲ್ಲ. ಅಥವಾ ಇದೆ ಎಂದು ಒಂದು ಪಕ್ಷ. ಬ್ರಹ್ಮಚಾರಿ ಹೋದರೆ ಆಶೌಚವಿದೆ. ಈ ವಿಷಯವನ್ನು ಮುಂದೆ ಆಶೌಚ ಪ್ರಕರಣದಲ್ಲಿ ವಿಸ್ತಾರವಾಗಿ ತಿಳಿಸುತ್ತೇವೆ,

## ಸರ್ಪವು ಕಚ್ಚಿ ಹತನಾದರೆ ಆಚರಣೆಯ ಕ್ರಮ.

ಪ್ರಮಾದದಿಂದಲೋ, ದರ್ಪಾದಿಗಳಿಂದ ಸರ್ಪವು ಕಚ್ಚಿ ಹೋದರೆ ಈತನ ವಿಷಯದಲ್ಲಿ ಕೂಡಲೆ ಆಶೌಚಾದಿಗಳನ್ನು ಆಚರಿಸಬೇಕಿಲ್ಲ. ಮತ್ತೇನೆಂದರೆ ನಾಗಪೂಜಾವ್ರತವನ್ನು ಮಾಡಿ, ನಾರಾಯಣಬಲಿ, ಚಿನ್ನದ ನಾಗ ದಾನ ಮಾಡಿ, ಪ್ರತ್ಯಕ್ಷ ಗೋದಾನ, ನಂತರ ದಹನಸಂಸ್ಕಾರ, ಆಶೌಚಾದಿಗಳನ್ನು ಆಚರಿಸಬೇಕು,

ಎಲ್ಲ ಬಗೆಯ ದುರ್ಮರಣದಲ್ಲೂ ಪತಿತಾದಿಗಳು ಮೃತಪಟ್ಟರೂ ಆಯಾಯ ಪ್ರಾಯಶ್ಚಿತ್ತಗಳನ್ನು ಮಾಡಿಯೇ ದಹನಾದಿಗಳನ್ನು ಮಾಡಬೇಕು,

2 ಅಥವಾ ನಮೋ ಅಸ್ತು ಸರ್ಪೇಭ್ಯಃ ಎಂಬ ಮಂತ್ರದಿಂದ ಆಜ್ಯಾಹುತಿಗಳನ್ನು ಕೊಟ್ಟು ಹೋಮ ನಡೆಸಬೇಕು,

**ಈ ಎರಡನೆಯದೇ ಸುಲಭಕ್ರಮವು.**

ಪಂಚಮ್ಯಾಂ ಪನ್ನಗಂ ಕೃಮಂ ಸ್ವರ್ಣೇನೈಕೇನ ಕಾರಯೇತ್ ।
ಕ್ಷೀರಾಜ್ಯಪಾತ್ರಮಧ್ಯಸ್ಥಂ ಪೂಜ್ಯವಿಪ್ರಾಯ ದಾಪಯೇತ್ ।
ಪ್ರಾಯಶ್ಚಿತ್ತಮಿದಂ ಪ್ರೋಕ್ತಂ ನಾಗದಷ್ಟಸ್ಯ ಶಂಭುನಾ ॥

ಈ ವಚನದಂತೆ ಚಿನ್ನದ ನಾಗಫಣೆಯನ್ನು ಮಾಡಿಸಿ, ಹಾಲು ತುಪ್ಪ ಹಾಕಿದ ಒಂದು ಪಾತ್ರೆಯಲ್ಲಿ ಇರಿಸಿ ಪೂಜಿಸಿ ನಂತರ ಬ್ರಾಹ್ಮಣನಿಗೆ ದಾನ ಮಾಡಬೇಕು. ಅನಂತರ ನಾರಾಯಣಬಲಿ ಮುಂತಾದುವನ್ನು ಮಾಡಿಸ ಬೇಕು.

## ದೇಶಾಂತರದಲ್ಲಿ ಮೃತಪಟ್ಟರೆ ಅಸ್ಥಿದಾಹ

1 ದೇಶಾಂತರದಲ್ಲಿ ಮೃತಪಟ್ಟವನಿಗೆ ಪುತ್ರಾದಿಗಳು ಎಂಟು ಕೃಚ್ಛ್ರಾಚರಣೆ ಮಾಡಿ ಅವನ ಅಸ್ಥಿಗಳನ್ನು ಮಂತ್ರವತ್ತಾಗಿ ದಹಿಸಬೇಕು.

2 ಅಸ್ಥಿಗಳು ಚಂಡಾಲಾದಿಗಳಿಂದ ಸ್ಪರ್ಶಿಸಲ್ಪಟ್ಟಿದ್ದರೆ ಪಂಚಗವ್ಯ ದಿಂದ ಶುದ್ಧಿಮಾಡಿ, ಜಲ ಕ್ಷೀರಾದಿಗಳಿಂದ ಶುದ್ಧಿಗೊಳಿಸಿ ದಹಿಸಬೇಕು.

3 ಮೃತನ ಅಸ್ಥಿಗಳು ಸರ್ವಥಾ ಸಿಕ್ಕದಿದ್ದರೆ ಪಲಾಶವಿಧಿಃ ಅಂದರೆ ಮುನ್ನೂರ ಅರವತ್ತು ಮುತ್ತುಗದ ಸಮಿತ್ತುಗಳಿಂದ ಮೃತನ ಶರೀರದ ಆಕಾರ ಮಾಡಿ ಅಥವಾ ದರ್ಭೆಗಳಿಂದಲೋ ರಚಿಸಿ ಮಂತ್ರದಿಂದ ವಿಧಿ ವತ್ತಾಗಿ ದಹನ ಮಾಡಬೇಕು.

ಕುರ್ಯಾದ್ದರ್ಭಮಯಂ ಪ್ರೇತಂ ಕುಶೈಃತ್ರಿಶತಷಷ್ಟಿಭಿಃ ।
ಪಾಲಾಶೀಭಿಃ ಸಮಿದ್ಭಿರ್ವಾ ಸಂಖ್ಯಾಚೈವಂ ಪ್ರಕೀರ್ತಿತಾಃ ॥

ಇದರ ವಿಧಿಯನ್ನು ಪ್ರಯೋಗ ಪುಸ್ತಕಗಳಿಂದ ತಿಳಿಯಬೇಕು,

4 ಆಹಿತಾಗ್ನಿಗೆ. ಅಸ್ಥಿ-ಶರ-ಪಲಾಶದಹನ ಮಾಡಿದರೆ ದಶಾಹ ಆಶೌಚವಿರಬೇಕು. ಇತರರಿಗಾದರೆ ಮೂರುದಿನ ಆಶೌಚ.

5 ಹನ್ನೆರಡು ವರ್ಷ ನಿರೀಕ್ಷೆ ಮಾಡಿ ಪಲಾಶ ದಾಹಾದಿಗಳನ್ನು ಮಾಡಿದರೆ ಮೂವತ್ತು ಕೃಚ್ಛ್ರಾಚರಣೆ (ತತ್ಪ್ರತ್ಯಾಮ್ನಾಯ ದಕ್ಷಿಣಾದಾನ ಮಾಡಬೇಕು.)

## ಅತೀತ ಪ್ರೇತಸಂಸ್ಕಾರ ಕಾಲ

1 ಪ್ರತ್ಯಕ್ಷ ಶವಸಂಸ್ಕಾರಕ್ಕೆ ದಿನಶುದ್ಧಿ ನೋಡಬೇಕಾಗಿಲ್ಲ. ಆಶೌಚ ಮಧ್ಯದಲ್ಲಿ ಸಂಸ್ಕಾರ ನಡೆಸಲು ದಿನಶುದ್ಧಿಯನ್ನು ನೋಡಲು ಸಾಧ್ಯವಿದ್ದರೆ ಮಾತ್ರ ನೋಡಬೇಕು.

2 ದಶಾಹ ಕಳೆದ ನಂತರ ದಿನಶೋಧನೆಯನ್ನು ಮಾಡಬೇಕು. ಒಂದು ವರ್ಷ ಕಳೆದ ನಂತರ ಪ್ರೇತಸಂಸ್ಕಾರ ಮಾಡುವುದಾದರೆ ಉತ್ತರಾಯಣವೇ ಶ್ರೇಷ್ಠ. ಆದರಲ್ಲೂ ಕೃಷ್ಣಪಕ್ಷವೇ ಶ್ರೇಷ್ಠ. ತಿಥಿಗಳಲ್ಲಿ ನಂದಾತಿಥಿ, ತ್ರಯೋದಶಿ, ಚತುರ್ದಶಿ, ತಿಥಿಕ್ಷಯಗಳನ್ನು ವರ್ಜಿಸಬೇಕು, ಮಂಗಳವಾರ, ಶುಕ್ರವಾರ, ಶನಿವಾರಗಳೂ ವರ್ಜ್ಯವಾಗಿವೆ. ನಕ್ಷತ್ರಗಳಲ್ಲಿ ಭರಣಿ ಕೃತ್ತಿಕೆ, ಆರ್ದ್ರೆ, ಆಶ್ಲೇಷ, ಮಘೆ, ಜ್ಯೇಷ್ಠ, ಮೂಲ, ಧನಿಷ್ಠೆಯು ಉತ್ತರಾರ್ಧ, ಶತತಾರೆಯಿಂದ ನಾಲ್ಕು ನಕ್ಷತ್ರಗಳು ತ್ಯಾಜ್ಯ, ಹಾಗೂ ತ್ರಿಪುಷ್ಕರ, ದ್ವಿಪುಷ್ಕರ ಯೋಗಗಳೂ ಪ್ರೇತಕಾರ್ಯದಲ್ಲಿ ತ್ಯಾಜ್ಯವಾಗಿವೆ.

ತ್ರಿಪುಷ್ಕರವೆಂದರೆ ಕೃತ್ತಿಕೆ, ಪುನರ್ವಸು, ಉತ್ತರಾಫಲ್ಗುನಿ, ವಿಶಾಖ ಉತ್ತರಾಷಾಢ, ಪೂರ್ವಾಭಾದ್ರೆ, ಎಂಬುವ ತ್ರಿಪಾದೀ ನಕ್ಷತ್ರಗಳೂ, ದ್ವಿತೀಯಾ, ಸಪ್ತಮೀ, ದ್ವಾದಶಿ ಎಂಬುವ ತಿಥಿಗಳೂ, ಮಂಗಳವಾರ, ಶನಿವಾರ, ಭಾನುವಾರ ಈ ಮೂರೂ ಕಲೆತರೆ ತ್ರಿಪುಷ್ಕರವೆಂದು ಹೆಸರು, ದ್ವಿಪುಷ್ಕರ ಎಂದರೆ ಮೇಲ್ಕಂಡ ತಿಥಿ ವಾರಗಳಲ್ಲಿ ಮೃಗಶಿರಾ, ಚಿತ್ತೆ, ಧನಿಷ್ಠೆ ಸೇರಿದಲ್ಲಿ ದ್ವಿಪುಷ್ಕರಯೋಗವಾಗುವುದು.

## ಅಂತ್ಯೇಷ್ಟಿ ನಿರ್ಣಯವು

ಅಧಿಕಾರ ನಿರ್ಣಯ ಮಾಡಿದ್ದಾಗಿದೆ. ಪುತ್ರಾದಿಗಳು ಯಾರೂ ಇಲ್ಲವಾದರೆ ಧರ್ಮಪುತ್ರನೇ ಈ ಕರ್ಮಕ್ಕೆ ಅಧಿಕಾರಿಯಾಗಬಹುದು.

1 ತಂದೆ ತಾಯಂದಿರು ಮರಣೋನ್ಮುಖರಾಗಿರುವಂತೆ ಕಂಡರೆ ಪುತ್ರ ಮೊದಲಾದ ಕರ್ಮಾಧಿಕಾರಿಗಳು ಪ್ರಾಯಶ್ಚಿತ್ತವನ್ನು ಮೋಕ್ಷಧೇನು ಮೊದಲಾದ ದಶದಾನಗಳನ್ನು ಮಾಡಬೇಕು. ಶಕ್ತರಲ್ಲದವರು ಪ್ರಾಯಶ್ಚಿತ್ತ ಪ್ರತ್ಯಾಮ್ನಾಯವಾಗಿ ಯಥಾಶಕ್ತಿ ದಕ್ಷಿಣಾದಾನ ಮಾಡಿ ದಶದಾನಗಳನ್ನು ಮಾಡಬೇಕು,

2 ಗೋ, ಭೂ, ತಿಲ, ಹಿರಣ್ಯ, ಆಜ್ಯ, ವಸ್ತ್ರ, ಧಾನ್ಯ, ಗುಡ, ರಜತ, ಲವಣ, ಎಂಬುವವೇ ದಶದಾನ ಪದಾರ್ಥಗಳು. ಋಣಧೇನು, ಮೋಕ್ಷಧೇನುಗಳನ್ನು ದಾನಮಾಡಬೇಕು. ಪಾಪನಾಶಕವಾದ ಗೋದಾನ ವೈತರಣಿ ಎಂಬುವ ಯಮಲೋಕದ ದ್ವಾರದಲ್ಲಿರುವ ನದಿಯನ್ನು ಸುಖವಾಗಿ ದಾಟಿಸಲು ಧೇನುದಾನ ಮಾಡಬೇಕು. ಅನಂತರ ಉತ್ಕ್ರಾಂತಿಧೇನುದಾನ. ಇವುಗಳ ದಾನಮಂತ್ರಗಳನ್ನು ಪ್ರಯೋಗಗ್ರಂಥದಿಂದ ತಿಳಿದು ಮಾಡಬೇಕು.

3 **ಕ್ಷೌರವಿಧಿ** ಪುತ್ರಾದಿಗಳು ಕರ್ತೃವಾಗಿದ್ದರೆ ಅಂತ್ಯಕರ್ಮಾಧಿಕಾರ ಸಿದ್ಧಿಗಾಗಿ ಕೃಚ್ಛ್ರತ್ರಯಾಚರಣೆ ನಂತರ ವಪನವನ್ನು ಮಾಡಿಸಿಕೊಳ್ಳಬೇಕು. ಮಾತಾಪಿತೃಗಳು, ಸಪತ್ನ ಮಾತೃ,ಪಿತೃವ್ಯ(ದೊಡ್ಡಪ್ಪ ಚಿಕ್ಕಪ್ಪ) ಜ್ಯೇಷ್ಠಭ್ರಾತ-ಇವರೇ ಮೊದಲಾದ ಹಿರಿಯರ ಅಂತ್ಯಕ್ರಿಯೆ ಮಾಡುವವನಿಗೆ ಕ್ಷೌರವು ಆವಶ್ಯಕ. ಕರ್ತೃವಲ್ಲದ ಪುತ್ರರಿಗೂ ಕ್ಷೌರವು ನಿಯತ.

(೨) ಪತ್ನಿಗೆ ಪತಿಯ ಅಂತ್ಯಕ್ರಿಯೆಯು ನಡೆಯುವಾಗ ಹತ್ತನೆಯ ದಿನ ಕ್ಷೌರವು ನಿಯತ.

(೩) ದತ್ತುಪುತ್ರನಿಗೆ ಜನಕ-ಪಾಲಕ ಮಾತಾಪಿತೃಗಳು ಮೃತಿಹೊಂದಿದರೆ ಕ್ಷೌರವು ನಿಯತ.

## ಮರಣೋನ್ಮುಖನಿಗೆ ಪುಣ್ಯಸೂಕ್ತ ಶ್ರವಣ

ಮರಣೋನ್ಮುಖನಾಗಿದ್ದರೆ ದಕ್ಷಿಣಕ್ಕೆ ಶಿರಸ್ಸನ್ನು ಇರಿಸಿ ಮಲಗಿಸಿ ಅವನಿಗೆ ಭಸ್ಮ, ಗೋಪಿಚಂದನ ಇವುಗಳ ತಿಲಕವನ್ನಿಟ್ಟು ಪುಣ್ಯಸೂಕ್ತಗಳನ್ನು ಕೇಳುವಂತೆ ಹೇಳಿಸಬೇಕು. ಶಕ್ತನಾದರೆ ತಾನೇ ಪಠಿಸಬೇಕು. ಪುಣ್ಯಸೂಕ್ತಗಳೆಂದರೆ ಪುರುಷಸೂಕ್ತ, ವಿಷ್ಣುಸೂಕ್ತಗಳು, ಉಪನಿಷತ್ತುಗಳನ್ನು ಶ್ರವಣ ಮಾಡಿಸಬೇಕು .ಅಥವಾ ಗೀತೆ, ವಿಷ್ಣುಸಹಸ್ರನಾಮಗಳನ್ನು ಶ್ರವಣಮಾಡಿಸಬೇಕು.

**ಸಂಕಲ್ಪ**—ಅಮೃತತ್ವ ಪ್ರಾಪ್ತ್ಯರ್ಥೇ ಪುಣ್ಯಸೂಕ್ತಸ್ತೋತ್ರಾದೀನಾಂ ಶ್ರವಣಂ ಕರಿಷ್ಯೇ.) ಅವನು ಅಶಕ್ತನಾಗಿದ್ದರೆ- ಯಜಮಾನಸ್ಯ —ನಾಮಧೇಯಸ್ಯ (ಶರ್ಮಣಃ) ಅಮೃತತ್ವ ಪ್ರಾಪ್ತ್ಯರ್ಥೇ ಪುಣ್ಯಸೂಕ್ತಾದೀನಾಂ ಶ್ರವಣಂ ಕಾರಯಿಷ್ಯೇ ಎಂದು ಸಂಕಲ್ಪ ಮಾಡಬೇಕು.

## ಶವಕ್ಕೆ ಅಸ್ಪೃಶ್ಯಸ್ಪರ್ಶ ಇತ್ಯಾದಿ ನಿಮಿತ್ತವಾಗಿ ಪ್ರಾಯಶ್ಚಿತ್ತ ವಿಧಾನ

1 ಶವಕ್ಕೆ ಶೂದ್ರಸ್ಪರ್ಶವಾದರೆ ಕೊಡದಲ್ಲಿ ನೀರನ್ನು ತಂದು ಪಂಚಗವ್ಯ ಮಂತ್ರಗಳಿಂದ ಅಭಿಮಂತ್ರಿಸಿ ಪುತ್ರಾದಿಗಳು ಸ್ನಾನ ಮಾಡಿಸಬೇಕು.

2 ಬಾಣಂತಿ ಅಥವಾ ಬಹಿಷ್ಠೆಯರ ಸ್ಪರ್ಶವಾಗಿದ್ದರೂ ಇದೇರೀತಿಯಾಗಿ ಸ್ನಾನಮಾಡಿಸಿ ಕೃಚ್ಛ್ರತ್ರಯಾಚರಣೆ ಮಾಡಬೇಕು.

3 ಶೂದ್ರನು ದ್ವಿಜರ ದಹನ ಮಾಡಿದ್ದರೆ ಚಾಂದ್ರಾಯಣ ಪ್ರಾಜಾಪತ್ಯ ಕೃಚ್ಛ್ರಾಚರಣೆ ಮಾಡಿ ಅಸ್ಥಿದಾಹವನ್ನು ಪುನಃ ಮಾಡಬೇಕು. ಅಸ್ಥಿಯಿಲ್ಲದಿದ್ದರೆ ಪಾಲಾಶವಿಧಾನ ಮಾಡಬೇಕು.

4 ಮಂಚದ ಮೇಲೆ ಮೃತಪಟ್ಟರೂ ದ್ವಾದಶ ಕೃಚ್ಛ್ರ. ಬಂಧನದಲ್ಲಿದ್ದು ಮೃತಪಟ್ಟರೆ ಪಂಚದಶ—ರಜಕ ಮೊದಲಾದ ಅಂತ್ಯಜರ ಸ್ಪರ್ಶವಾಗಿ ಮೃತಪಟ್ಟರೆ ತ್ರಿಂಶತ್ ಕೃಚ್ಛ್ರ. ದೇಶಾಂತರ ಮರಣವಾದರೆ ಪರಾಕಾಯುಗ್ಮ, ಅಷ್ಟ ಕೃಚ್ಛ್ರಗಳು.

ಸರ್ವತ್ರ ಈಗ ಕೃಚ್ಛ್ರಾಚರಣೆಗಳಿಗೆ ಪ್ರತ್ಯಾಮ್ನಾಯವಾಗಿ ಸುವರ್ಣ ದಕ್ಷಿಣಾದಾನ ಮಾಡುವುದು ರೂಢಿಯಲ್ಲಿದೆ.

5 ಪಾಪಿಗಳಾದ ಪುತ್ರಾದಿಗಳು ಪಾಪಾನುಸಾರ ಪ್ರಾಯಶ್ಚಿತ್ತ ಮಾಡಿಕೊಂಡೇ ಅಂತ್ಯಕರ್ಮವನ್ನು ಮಾಡಬೇಕು.

6 ರಾತ್ರಿಯಾಗಿದ್ದರೆ ವಪನ ಮಾಡಿಕೊಳ್ಳದೇ ದಹನ ಮಾಡಿ, ಪಿಂಡದಾನ ಮಾಡಿ ಮಾರನೇ ದಿನ ವಪನ ಮಾಡಿಸಿಕೊಳ್ಳಬೇಕು.

ರಾತ್ರೌತು ದಗ್ಧ್ವಾ ಪಿಂಡಾಂತಂ ಕೃತ್ವಾ ವಪನವರ್ಜಿತಂ ।
ವಪನಂ ವರ್ಜಿತಂ ರಾತ್ರೌ ಶ್ವಸ್ತನೀ ವಪನಕ್ರಿಯಾ ॥

ಶ್ವಸ್ತನೀ = ನಾಳೇದಿನವೆಂದರ್ಥ.

7 ಪತ್ನಿಗೂ, ಪುತ್ರನಿಗೂ, ಕನಿಷ್ಠ ಸಹೋದರನಿಗೂ ಅಂತ್ಯಕರ್ಮ ಮಾಡುವ ಕರ್ತೃವಿಗೆ ಕ್ಷೌರವಿಲ್ಲ.

ಅಂದರೆ ಪತ್ನಿಯ ಅಂತ್ಯಕ್ರಿಯೆಯಲ್ಲಿ ಪತಿಗೂ, ಪುತ್ರನ ವಿಷಯದಲ್ಲಿ ಪಿತೃವಿಗೂ, ಕನಿಷ್ಠನ ವಿಷಯದಲ್ಲಿ ಜ್ಯೇಷ್ಠನಿಗೂ ಕ್ಷೌರವು ಕರ್ತವ್ಯವಲ್ಲ.

## ಸಾಗ್ನಿಕನಿಗೆ ದಹನವಿಷಯದಲ್ಲಿ ವಿಶೇಷ

ಗೃಹ್ಯಾಗ್ನಿ ಇರುವವನಿಗೆ ಗೃಹ್ಯಾಗ್ನಿಯಿಂದಲೂ, ಶ್ರೌತಾಗ್ನಿಯಿದ್ದವನಿಗೆ ಶ್ರೌತಾಗ್ನಿಯಿಂದಲೂ ದಹನ ಮಾಡಬೇಕು.

ಗೃಹ್ಯಾಗ್ನಿಯನ್ನು ಹಿಡಿಯದ ಗೃಹಸ್ಥನಿಗೂ, ವಿಧುರನಿಗೂ, ಬ್ರಹ್ಮಚಾರಿಗೂ, ಸಮಾವರ್ತನೆ ಮಾತ್ರ ಮಾಡಿಕೊಂಡವನಿಗೂ ಅನುಪನೀತ ಪುತ್ರ

ಅವಿವಾಹಿತ ಕನ್ನಿಕೆಗೂ. ನಿರಗ್ನಿಕನ ಭಾರ್ಯೆಗೂ ವಿಧವೆಗೂ ಸಹ ಕಪಾಲಾಗ್ನಿಯಿಂದಲೋ ಲೌಕಿಕಾಗ್ನಿಯಿಂದಲೋ ದಹನ ಮಾಡಬೇಕು.

**ಕಪಾಲಾಗ್ನಿ** ಎಂದರೆ ಬೆಂಕಿಯ ಬಣ್ಣದ ಕಪಾಲದಲ್ಲಿ ಅರಣಿಯಿಂದ ಉತ್ಪಾದಿಸಿ ವ್ಯಾಹೃತಿಯ ಹೋಮದಿಂದ ಸಂಸ್ಕೃತವಾದ ಅಗ್ನಿಯು.

**ಲೌಕಿಕಾಗ್ನಿ** ಎಂದರೆ ಪಂಚಮನ ಬೆಂಕಿಯನ್ನು, ಪತಿತಾಗ್ನಿಯನ್ನು ಸೂತಿಕಾಗ್ನಿಯನ್ನು, ಚಿತಾಗ್ನಿ-ಅಪವಿತ್ರಾಗ್ನಿಗಳನ್ನು ಬಿಟ್ಟುಳಿದ ಶುದ್ಧವಾದ ಅಗ್ನಿಯು.

ಆಹಿತಾಗ್ನಿ ದಂಪತಿಗಳಲ್ಲಿ ಮೊದಲು ಪತಿಯು ಮೃತಪಟ್ಟರೆ ಪತಿಗೆ ಸರ್ವಾಗ್ನಿಗಳಿಂದ ದಹನ ಮಾಡಬೇಕು. ಆನಂತರ ಮೃತಪಟ್ಟ ಪತ್ನಿಗೆ ಮಥನಾಗ್ನಿಯಿಂದಲೋ ಕಪಾಲಾಗ್ನಿಯಿಂದಲೋ ದಹನ ಮಾಡಬೇಕು,

ಮೊದಲೇ ಪತ್ನಿಯು ಮೃತಪಟ್ಟಿದ್ದರೆ ಎಲ್ಲಾ ತ್ರೇತಾಗ್ನಿಗಳಿಂದಲೂ ದಹನವು. ಎಲ್ಲಾ ಯಜ್ಞೀಯ ಪಾತ್ರೆಗಳನ್ನೂ ಪತ್ನಿಗೆ ಕೊಡತಕ್ಕವು. ಅನಂತರ ಮೃತಪಟ್ಟ ಪತಿಗೆ ಪುನರಾಧಾನದಿಂದ ಸಂಸ್ಕೃತವಾದ ತ್ರೇತಾಗ್ನಿಯು ಇರುವಾಗ ಅದರಿಂದಲೇ ದಹನವು.

## ನಿರ್ಣಯಸಿಂಧುಕಾರನ ಮತ

1 ಸಾಗ್ನಿಕನಿಗೆ ಪತ್ನಿಯು ಮೃತಪಟ್ಟರೆ ಪುನಃ ಪತಿಗೆ ವಿವಾಹದ ಇಚ್ಛೆಯಿದ್ದರೆ ಮೊದಲಿದ್ದ ಅಗ್ನಿಗಳಿಂದ ಪತ್ನಿಯ ದಹನ ಮಾಡಿ, ಪುನಃ ವಿವಾಹ ಮಾಡಿಕೊಂಡು ಪುನಃ ಅಧಾನ ಮಾಡಬೇಕೆಂದು ಒಂದು ಮತ.

2 ಪುನಃ ವಿವಾಹ ಮಾಡಿಕೊಳ್ಳಲು ಅಶಕ್ತನಾದರೆ ಮಥನಾಗ್ನಿಯಿಂದ ಆಕೆಯನ್ನು ದಹನ ಮಾಡಿ ಮೊದಲಿದ್ದ ಅಗ್ನಿಗಳಲ್ಲೇ ಅಗ್ನಿಹೋತ್ರಾದಿ ಚಾತುರ್ಮಾಸ್ಯಾದಿಗಳನ್ನು ಮಾಡಬೇಕು. ಸೋಮಯಾಗವು ಕರ್ತವ್ಯವಲ್ಲ.

3 ಅಪತ್ನೀಕನು ಆಧಾನ ಮಾಡಲು ಪ್ರಮಾಣವಚನವೇನೂ ಇಲ್ಲ. ಅಲ್ಲದೆ ಅಸಮರ್ಥನು ಪೂರ್ವದಲ್ಲಿ ಮೊದಲು ಮಾಡಿದ್ದ ಆಧಾನ ಸಿದ್ಧ ಅಗ್ನಿಯನ್ನು ತನಗಾಗಿ ಇಟ್ಟುಕೊಳ್ಳಬೇಕು. ಪತ್ನಿಗೆ ಕೊಡಬಾರದೆಂದು ನಿರ್ಣಯಸಿಂಧುಕಾರನ ಮತ. (ಪುಟ 394),

4 ಪುನರ್ವಿವಾಹದ ಇಚ್ಛೆಯಿಂದ ಸಮಸ್ತ ಅಗ್ನಿಗಳನ್ನು ಪತ್ನಿಗೆ ಕೊಟ್ಟರೆ, ಅನಂತರ ವಿವಾಹವೂ ಆಗದೆ ಹೋದರೆ ಸಿಂಧುಮತದಲ್ಲಿ ಆಧಾನ ವಿಲ್ಲವಾದ್ದರಿಂದ ಮಥನಾಗ್ನಿಯೇ ಅವನ ದಹನಕ್ಕೆ ಅನಿವಾರ್ಯವಾಗಿದೆ. **ಆದ್ದರಿಂದ ವಿಚಾರಮಾಡಿ ಮಾಡುವುದೇ ಒಳಿತೆಂದು ಅಭಿಪ್ರಾಯ.**

5 ಅರಣಿಗಳಲ್ಲಿ ಅಗ್ನಿಯನ್ನು ಆರೋಪಿಸಿ ನಂತರ ಪತಿಯು ಹೋದರೆ ಪ್ರೇತವನ್ನು ಸ್ಪರ್ಶಮಾಡಿಕೊಂಡು, ಅಗ್ನಿಮಥನ ಮಾಡಿ, ಉಪಾವರೋಹಣ ಜಪಮಾಡಿ, ದ್ವಾದಶ ಗೃಹೀತಾಜ್ಯವನ್ನು ತೂಷ್ಣೀಂ ಹವನ ಮಾಡಿ, ಅನಂತರ ಶವಸಂಸ್ಕಾರ ಮಾಡಬೇಕು. ಶ್ರೌತಾಗ್ನಿಯು ವಿಚ್ಛಿನ್ನವಾಗಿದ್ದು ಅನಂತರ ಪತಿಯು ಮೃತಪಟ್ಟರೆ ವಿಧಿವತ್ತಾಗಿ ಪ್ರೇತಾ ಧಾನವನ್ನು ಮಾಡಬೇಕು.

6 ಸ್ಮಾರ್ತಾಗ್ನಿಯುಳ್ಳವನಿಗೆ ಪೂರ್ವಭಾರ್ಯೆಯು ಮೃತಪಟ್ಟರೆ ಗೃಹ್ಯಾಗ್ನಿಯ ಏಕದೇಶದಿಂದ ಅವಳನ್ನು ದಹಿಸಿ, ಉಳಿದ ಅಗ್ನಿಯಲ್ಲೇ ನಿತ್ಯಹೋಮ ಸ್ಥಾಲೀಪಾಕ-ಆಗ್ರಯಣ ಮಾಡಬೇಕು. ಅನೇಕ ಪತ್ನಿಯರು ಇದ್ದಲ್ಲಿ ಜ್ಯೇಷ್ಠ ಪತ್ನಿಯು ಹೋದಲ್ಲಿ ನಿರ್ಮಥನಾಗ್ನಿಯಿಂದಲೋ ಕಪಾ ಲಾಗ್ನಿಯಿಂದಲೋ ದಹಿಸಬೇಕು. ದಹನ ಕಾಲದಲ್ಲಿ ಮಳೆಯಿಂದ ಚಿತೆಯ ಅಗ್ನಿ ನಾಶವಾದರೆ ಅರ್ಧ ಸುಟ್ಟುಹೋದ ಕಾಷ್ಠಗಳನ್ನು ಮಥನ ಮಾಡಿ ದಹಿಸಬೇಕು.

ನಾರಾಯಣಸ್ಮರಣಂ

## ಯಾರಿಗೆ ತಿಲೋದಕದಾನವನ್ನು ಯಾರು ಮಾಡಬೇಕು ?

1 ಸಗೋತ್ರರಿಗೂ, ಸಪಿಂಡರಿಗೂ, ಸಮಾನೋದಕರಿಗೂ, ಮಾತಾಮಹ-ಮಾತಾಮಹಿ, ಆಚಾರ್ಯ-ಗುರು, ಮಗಳು. ಭಗಿನಿ (ಅಕ್ಕ) ಇವರಿಗೂ ಈ ಎಲ್ಲರಿಗೂ ತಿಲಾಂಜಲಿ ಕೊಡಬೇಕು.

2 ಮಾತುಲ (ಸೋದರಮಾವ) ಸೋದರತ್ತೆ, ಚಿಕ್ಕಮ್ಮ, ದೊಡ್ಡಮ್ಮಂದಿರಿಗೂ ಅಕ್ಕತಂಗಿಯರ ಮಕ್ಕಳಿಗೂ, ಹೆಣ್ಣುಕೊಟ್ಟ ಅತ್ತೆ ಮಾವಂದಿರಿಗೂ, ಮಿತ್ರ-ಯಾಜಕ (ಪುರೋಹಿತ) ಇವರಿಗೆ ತಿಲೋದಕದಾನ ಮಾಡಬೇಕು. ಆದರೆ ನಿಯತವಲ್ಲ. ಕೃತಾಕೃತ ಎಂದು ಸಿಂಧುಮತ. ಮಾಡುವ ಪಕ್ಷದಲ್ಲಿ ಶಿಲೆಯ ಮೇಲೆ ಎಂಬ ನಿಯಮವಿಲ್ಲ.

3 ವ್ರಾತ್ಯರು. ಬ್ರಹ್ಮಚಾರಿಗಳು. ಪತಿತರು. ವ್ರತಸ್ಥನು. ಸಪ್ರಂಸಕನಿಗೂ ಜೋರನಿಗೂ ಉದಕದಾನ ಮಾಡಕೂಡದು. ವ್ರಾತ್ಯರೆಂದರೆ, ಉಕ್ತಕಾಲದಲ್ಲಿ ಉಪನಯನವಾಗದವರು, ಚೋರರು, ಸುವರ್ಣ, ತತ್ಸಮವಾದ ದ್ರವ್ಯಾಪಹಾರಿಗಳೆಂದರ್ಥ.

4 ಬ್ರಹ್ಮಚಾರಿಗಳು, ಮಾತಾಪಿತೃಗಳಿಗೂ, ಪಿತಾಮಹ, ಪಿತಾಮಹಿ, ಗುರು-ಆಚಾರ್ಯ ಮೊದಲಾದವರಿಗೆ ಉದಕದಾನ ಮಾಡಬೇಕು. ಬೇರೆ ಯಾರೂ ಇಲ್ಲದಿದ್ದರೆ ಪಿತೃ ಮೊದಲಾದವರಿಗೆ ದಹನವನ್ನೂ ಆಶೌಚಾಚರಣೆಯನ್ನು ಬ್ರಹ್ಮಚಾರಿಗಳೂ ಮಾಡಬೇಕು.

ದಹನ ಮಾಡಿದ ದಿನ ಎಲ್ಲರೂ ಉಪವಾಸ ಮಾಡಬೇಕು. ಅಶಕ್ತರಾದವರು ಬೇರೆಮನೆಯಲ್ಲಿ ಮಾಡಿಸಿದ ಅನ್ನವನ್ನೋ ಹವಿಷ್ಯಾನ್ನವನ್ನೋ ಭುಂಜಿಸಬೇಕು.

## ಅಸ್ಥಿಸಂಚಯನದ ಕಾಲ

ಸಮಂತ್ರಕವಾಗಿ ದಹನ ಮಾಡಿದ ದಿನದಿಂದ ಆರಂಭಿಸಿ ಮೊದಲಿನ ದಿನ, ದ್ವಿತೀಯ, ತೃತೀಯ, ಚತುರ್ಥ, ಸಪ್ತಮ, ನವಮ ದಿನದಲ್ಲಾ

ದರೂ ಗೋತ್ರದವರಿಂದ ಕೂಡಿ ತಮ್ಮ ಸೂತ್ರೋಕ್ತವಿಧಿಯಂತೆ ಸಂಚಯನ ಮಾಡಬೇಕು.

ದ್ವಿಪಾತ್, ತ್ರಿಪಾದಿ ನಕ್ಷತ್ರಗಳಲ್ಲೂ, ಕರ್ತೃವಿನ ಜನ್ಮನಕ್ಷತ್ರದಲ್ಲೂ, ಭಾನು, ಮಂಗಳ, ಶನಿವಾರಗಳಲ್ಲಿ ಸಂಚಯನ ಮಾಡಬಾರದು. ಸಂಭವಿಸಿದರೆ ಈ ನಕ್ಷತ್ರ-ವಾರಗಳನ್ನು ವರ್ಜಿಸುವುದು ಒಳ್ಳೆಯದು.

ಪಲಾಶದಾಹ, ಅಸ್ಥಿದಾಹಗಳಲ್ಲಿ ಕೂಡಲೇ ಸಂಚಯನ ಮಾಡಬೇಕು. ಅಸ್ಥಿಗಳನ್ನು ಗಂಗೆಯಲ್ಲೊ ಇತರ ತೀರ್ಥಗಳಲ್ಲೊ ಹಾಕಬೇಕು. ಇದರ ವಿಧಿಯನ್ನು ನೋಡಿ ಮಾಡುವುದು.

ಆಶೌಚಮಧ್ಯದಲ್ಲಿ ಸ್ವಗೋತ್ರದವರೊಡನೆ ಹಗಲು ಮಾತ್ರ ಭೋಜನ ಎಲೆಯಲ್ಲೇ ಮಾಡಬೇಕು,

## ದಶಾಹ ಕೃತ್ಯಗಳು

ದಹನದಿನದಿಂದ ಆರಂಭಿಸಿ ಹತ್ತು ದಿನಗಳು ಮಂತ್ರವಿಲ್ಲದೆ ದಶಪಿಂಡಗಳನ್ನು ಹಾಕಬೇಕು. ಪ್ರಥಮ ದಿನದಲ್ಲಿ ಹಿಡಿದ ಸ್ಥಳ, ಕರ್ತ, ತಂಡುಲಾದಿ ದ್ರವ್ಯ, ಉತ್ತರೀಯ, ಶಿಲೆ, ಪಾತ್ರಾದಿಗಳನ್ನು ಹತ್ತು ದಿನಗಳೂ ಬದಲಾಯಿಸದೇ ಉಪಯೋಗಿಸಬೇಕು.

ಇವುಗಳಲ್ಲಿ ಒಂದು ತಪ್ಪಿದರೂ ಅಲ್ಲಿಂದ ಪುನರಾವೃತ್ತಿ ಮಾಡಬೇಕು. ಶಿಲೆಯು ವ್ಯತ್ಯಾಸವಾದರೂ ಘಟಸ್ಫೋಟಕ್ಕೆ ಆವೃತ್ತಿಯಿಲ್ಲ. ಪಿಂಡದಾನ ತಿಲಾಂಜಲಿ ದಾನಾದಿಗಳಿಗೆ ಆವೃತ್ತಿಯುಂಟು, ದಹನಕ್ಕೆ ಆವೃತ್ತಿಯಿಲ್ಲ. ಪುರೋಹಿತರು ಬದಲಾದರೂ ಆವೃತ್ತಿಯುಂಟೆಂದು ಕೆಲವರ ಮತ,

ಸಗೋತ್ರೋವಾನ್ಯಗೋತ್ರೋವಾ ಯದಿಸ್ತ್ರೀ ಯದಿವಾ ಪುಮಾನ್।
ಪ್ರಥಮೇಽಹನಿ ಯೋ ದದ್ಯಾತ್ ಸ ದಶಾಹಂ ಸಮಾಪಯೇತ್ ॥
ಅಸ್ಥಿಸಂಚಯನಾತ್ ಪೂರ್ವಂ ಪುತ್ರೋಯದಿ ಸಮಾಗತಃ ।
ತದಾದಿ ಸಕಲಂ ಕರ್ಮ-ಪುತ್ರಃಕುರ್ಯಾದ್ಯಥಾವಿಧಿ ॥

ಎಂದಂತೆ ಪುತ್ರಭಿನ್ನರು ಸಗೋತ್ರರಾಗಿರಲಿ, ಭಿನ್ನಗೋತ್ರರಾಗಿರಲಿ. ಸ್ತ್ರೀಯಾಗಲಿ ಪುರುಷನಾಗಲಿ ಮೊದಲನೇ ದಿನ ಪಿಂಡೋದಕ ಮಾಡಿದವನೇ ಹತ್ತು ದಿನಗಳೂ ಮಾಡಬೇಕು. ಅಸ್ಥಿಸಂಚಯನಕ್ಕೆ ಮೊದಲೇ ಪುತ್ರನು ಬಂದರೆ ಅವನೇ ಎಲ್ಲ ಕರ್ಮಗಳನ್ನೂ ಮುಗಿಸಬೇಕು.

(ನಾರಾಯಣ ಸ್ಮರಣಂ).

ಮುಖ್ಯ ಕರ್ತರಾದ ಪುತ್ರಾದಿಗಳು ಹತ್ತಿರದಲ್ಲಿ ಇಲ್ಲವಾಗಿದ್ದು (ಗೌಣ ವಾಗಿ) ಇತರರು (ಬಂಧುಗಳು) ಪಿಂಡದಾನಾದಿ ಉತ್ತರಕ್ರಿಯೆಗಳನ್ನು ಆರಂಭ ಮಾಡಿದ್ದರೆ ಈ ನಡುವೆ ಪುತ್ರಾದಿಗಳು ಹತ್ತಿರಕ್ಕೆ ಬಂದರೂ ದಶಾಹ ಕ್ರಿಯೆಗಳನ್ನು ಆರಂಭ ಮಾಡಿದವರೇ ಮುಗಿಸಬೇಕು. ಏಕಾದಶಾಹದಿಂದ ಮಾಡಬೇಕಾದ ಕ್ರಿಯೆಗಳನ್ನು ಮುಖ್ಯ ಕರ್ತೃವೇ ಮಾಡಬೇಕು.

ಮಂತ್ರಾಗ್ನಿಯಿಂದ ಮತ್ತೊಬ್ಬನು ದಹನಸಂಸ್ಕಾರ ಮಾತ್ರ ಮಾಡಿ ದ್ದರೆ ಪಿಂಡದಾನಾದಿ ಕ್ರಿಯೆಗಳನ್ನು ಹತ್ತುದಿನದ್ದೂ ಮುಖ್ಯಕರ್ತ ಪುತ್ರನೇ ಮಾಡಬೇಕೆಂದು ಕೆಲವರು ಹೇಳುತ್ತಾರೆ,

ಪತ್ನಿಯೇ ಪುತ್ರರಿಲ್ಲದ ಪತಿಗೆ ಕರ್ತೃವಾಗಿದ್ದು ರಜಸ್ವಲೆಯಾದರೆ ನಾಲ್ಕು ದಿನಗಳ ನಂತರ ಸ್ನಾನಮಾಡಿ ಅನಂತರ ಕ್ರಿಯೆಯನ್ನು ಮಾಡಬೇಕು.

ಕರ್ತೃವು ರೋಗದಿಂದ ಅಸ್ವಸ್ಥನಾಗಿದ್ದರೆ ಬೇರೆಯವರು ಅವನ ಹೆಸರಿನಲ್ಲಿ ಎಲ್ಲಾ ಉತ್ತರಕ್ರಿಯೆಯನ್ನು ಮಾಡಬಹುದು.

ಪ್ರೇತಶ್ರಾದ್ಧಗಳಲ್ಲಿ ಪಿತೃಶಬ್ದ, ಸ್ವಧಾಶಬ್ದ, ಅನುಶಬ್ದಗಳನ್ನು ಪುಷ್ಪ-ಧೂಪ-ದೀಪ ಪ್ರದಾನಕಾಲದಲ್ಲಿ ಮಂತ್ರಗಳನ್ನು ಉಚ್ಚರಿಸಬಾರದು.

ಮೂರುದಿನ ಆಶೌಚವಿದ್ದರೆ ಪ್ರಥಮದಿನ ೧ ಪಿಂಡವನ್ನು, ಎರಡನೇ ದಿನ ೪ನ್ನು, ಮೂರನೇ ದಿನ ೫ ಪಿಂಡಗಳನ್ನೂ ಹಾಕಬೇಕು. ಅಪರೆ ಪಲಾಶವಿಧಾನವನ್ನು ಮಾಡುವಲ್ಲಿ ಹತ್ತು ದಿನಗಳೂ ಆಶೌಚವಿರುವುದರಿಂದ

ಪಿಂಡದಾನಾದಿಗಳನ್ನು ಮೂರು ದಿನದಲ್ಲಿ ಮುಗಿಸಬಾರದು. ಕಾರಣ ವೇನೆಂದರೆ ಪ್ರಥಮದಿನದ ಪಿಂಡದಿಂದ ಕ್ರಮವಾಗಿ ಪ್ರೇತದ ಶರೀರವು ಅಂಗಾಂಗಗಳು ನಿರ್ಮಾಣವಾಗಿ ಹತ್ತನೇ ಪಿಂಡದಿಂದ ಪೂರ್ಣವಾಗುವುದು. ಅಲ್ಲದೆ ಹೋದಜೀವಕ್ಕೆ ತೃಪ್ತಿಯಾಗಿ ಹಸಿವು ಹೋಗುವುದು.

ಹತ್ತು ದಿನಗಳೂ ನೀರು, ಹಾಲು ಎರಡನ್ನೂ ಮಡಿಕೆಯಲ್ಲಿ ಹತ್ತಿರ ದಲ್ಲಿ ಪ್ರೇತಕ್ಕಾಗಿ ಇರಿಸಬೇಕು. ದಶದಿನಗಳೂ ಅಖಂಡವಾದ ತೈಲದೀಪ ವನ್ನೂ, ಮಣ್ಣಿನ ಪಾತ್ರೆಯಲ್ಲಿ ನೀರನ್ನೂ ಇರಿಸಬೇಕು. ಅನ್ನವನ್ನೂ ಇರಿಸಬೇಕು.

ಮೃತಾತ್ಮನಿಗೆ ಶ್ರಾದ್ಧ ಮಾಡುವುದು ಯಮಲೋಕಕ್ಕೆ ಹೋಗಲು ಪಾಥೇಯ ಬುತ್ತಿಯಂತೆ ಸಹಾಯಕವಾಗುವುದು. ಆದರಿಂದ ಅವಶ್ಯ ಕರ್ತವ್ಯವಾಗಿದೆ.

ಪ್ರಾಣತ್ಯಾಗವನ್ನು ತೀರ್ಥಕ್ಷೇತ್ರಗಳಲ್ಲೋ ಸ್ವಗೃಹದಲ್ಲೋ ಮಾಡಿದರೆ ಪ್ರೇತಕಾರ್ಯಗಳನ್ನು ಅದೇ ಸ್ಥಳದಲ್ಲಿ ಮಾಡಬೇಕು. ಬೇರೆ ಕಡೆ ಮಾಡಬಾರದು.

ಹೀಗಿದ್ದರೂ ಈಗಿನ ನಗರವಾಸಿಗಳು ಗೋಕರ್ಣ, ಪಶ್ಚಿಮವಾಹಿನಿ, ಪಟ್ಟಣ ಇತ್ಯಾದಿ ಕ್ಷೇತ್ರಗಳಿಗೆ ಹೋಗಿ ಮಾಡುತ್ತಾರೆ. ಇದು ಅಸೌಕರ್ಯ ದಿಂದ ಹೀಗೆ ಮಾಡಿದರೂ ಶಾಸ್ತ್ರೀಯವಲ್ಲ.

ರಾತ್ರಿಯಲ್ಲಿ ದಹನಸಂಸ್ಕಾರವಾಗಿದ್ದರೆ ಮಾರನೆದಿನ ಸೂರ್ಯೋದಯ ವಾದ ನಂತರ ತಿಲೋದಕದಾನ ಮಾಡಬೇಕು. ತಿಲೋದಕ, ಪಿಂಡದಾನ, ನವ ಶ್ರಾದ್ಧಗಳನ್ನು ರಾತ್ರಿಯಲ್ಲೇ ಮಾಡಬೇಕು. ಸಂಧ್ಯಾಕಾಲದಲ್ಲಿ ಮಾಡಿದರೆ ನಿಷ್ಫಲವಾಗುವುದು.

ನಾರಾಯಣ ಸ್ಮರಣಂ

## ದಶಾಹದ ಮಧ್ಯದಲ್ಲಿ ಅಮಾವಾಸ್ಯೆ ಬಂದರೆ ಏನುಮಾಡಬೇಕು

ಮಾತಾಪಿತೃಗಳನ್ನು ಬಿಟ್ಟು ಉಳಿದವರಿಗೆ ಉತ್ತರಕ್ರಿಯೆಯನ್ನು ಆರಂಭಮಾಡಿದರೆ ನಡುವೆ ಅಮಾವಾಸ್ಯೆ ಬಂದರೆ ಉಳಿದ ದಶಾಹ ಕಾರ್ಯ ಗಳನ್ನು ಅಪಕರ್ಷಮಾಡಿ ಅಮಾವಾಸ್ಯೆಯಲ್ಲಿ ಮುಗಿಸಬೇಕು. ಆದರೆ ಮಾತಾಪಿತೃಗಳ ವಿಷಯದಲ್ಲಿ ಮೂರುದಿನಗಳ ನಡುವೆ ಅಮಾವಾಸ್ಯೆ ಬಂದರೂ. ಅಪಕರ್ಷವಿಲ್ಲ. ತ್ರಿರಾತ್ರವಾದನಂತರವಾದರೆ ಮಾತಾಪಿತೃ ಗಳಿಗೂ ಅಪಕರ್ಷಮಾಡಿ ಮುಗಿಸಬಹುದೆಂದೂ, ಮುಗಿಯಿಸಬಾರದೆಂದೂ ಮತಭೇದವಿದೆ.

ದೇಶಾಚಾರ ಶಿಷ್ಟಾಚಾರ ಕೇಳಿ ಮಾಡಬೇಕು

ಒಂದುವೇಳೆ ಅಮಾವಾಸ್ಯೆಯಲ್ಲೇ ಮೇಲೆ ಹೇಳಿದಂತೆ ಸಮಾಪ್ತಿ ಮಾಡಿ ದರೆ ಮಂತ್ರಾಗ್ನಿ-ಪಿಂಡದಾನ ಮಾಡಿದ ಕರ್ತೃವಿಗೆ ಹತ್ತುದಿನವೂ ಆಶೌಚವಿದೆ. ಪುತ್ರರೇ ಮೊದಲಾದ ಸಪಿಂಡರಿಗೆ ಸರ್ವಥಾ ದಶಾಹಾಶೌಚವಿದೆ.

## ನವಶ್ರಾದ್ಧಗಳು

1 ಆಶ್ವಲಾಯನರಿಗೆ ನವಶ್ರಾದ್ಧಗಳು ೫, ಆಪಸ್ತಂಬರಿಗೆ ೬. ಪ್ರಥಮ, ತೃತೀಯ, ಪಂಚಮ, ಸಪ್ತಮ, ನವಮ, ಏಕಾದಶಾಹ. ದಿನಗಳಲ್ಲಿನ ಶ್ರಾದ್ಧಗಳಿಗೆ ನವಶ್ರಾದ್ಧವೆಂದು ಹೆಸರು. ಆಶ್ವಲಾಯನರು ೫ ಎಂಬುವ ಪಕ್ಷದಲ್ಲಿ ಏಕಾದಶಾಹವಲ್ಲಿ ನವಶ್ರಾದ್ಧ ಮಾಡಬಾರದು.

## ನಾರಾಯಣ ಸ್ಮರಣಂ

2 "ನವಶ್ರಾದ್ಧಮಮಂತ್ರಕಂ" ಎಂದು ಆಶ್ವಲಾಯನಸೂತ್ರ ನಾರಾಯಣ ವೃತ್ತಿಯಲ್ಲಿದೆ. ಆದರಿಂದ ನವಶ್ರಾದ್ಧವನ್ನು ಮಂತ್ರವಿಲ್ಲದೆ ಮಾಡಬೇಕು. ಸಪಿಂಡೀಕರಣ ಶ್ರಾದ್ಧದ ಪರ್ಯಂತ ಪ್ರೇತಶ್ರಾದ್ಧಗಳನ್ನು ಆಶ್ವಲಾಯನರು ಲೌಕಿಕಾಗ್ನಿಯಲ್ಲಿ ಆಚರಿಸಬೇಕು.

3 ನವಶ್ರಾದ್ಧಗಳನ್ನು ಅನ್ನದಿಂದ ಮಾಡಬೇಕು. ಶಕ್ಯವಿಲ್ಲದಿದ್ದರೆ ಆಮದಿಂದ ಮಾಡಬೇಕು.

4 ಮಾಸಿಕಕ್ಕೆ ನವಶ್ರಾದ್ಧಕ್ಕೆ ವಿಘ್ನವು ಬಂದರೆ ಯಾವುದೊಂದು ನಿಂತುಹೋಗಿದ್ದರೂ ಮುಂದಿನೊಡನೆ ಸೇರಿಸಿ ತಂತ್ರೇಣ ಅನುಷ್ಠಾನ ಮಾಡಬೇಕು. ಇದನ್ನು ಆಚರಿಸುವಾಗ ಇನ್ನೊಂದು ಶವಸೂತಕ ಬಂದರೂ ಆಚರಿಸಲೇಬೇಕು.

5 ಶೂದ್ರನಿಗೆ ಮಂತ್ರವಿಲ್ಲದೆ ಎಲ್ಲವನ್ನು ನಾಮದಿಂದ ಮಾಡಬೇಕು. ಹೆಚ್ಚು ವಯಸ್ಸಾದವರು ಮೃತಪಟ್ಟರೆ ಕಿರಿಯ ಜ್ಞಾತಿಗಳಿಗೆ ಹತ್ತನೆದಿನ ಕ್ಷೌರವು ವಿಹಿತ.

6 ಮಾತಾ ಪಿತೃ-ಆಚಾರ್ಯ ಇವರು ಮೃತಪಟ್ಟರೆ ನಿಯತವಾಗಿ ಪುತ್ರರು (ಶಿಷ್ಯರು) ಹತ್ತನೆ ದಿನ ಮುಂಡನ ಮಾಡಿಸಬೇಕು. ಹೀಗೆಯೆ ಗಂಡನು ಹೋದರೆ ಸ್ತ್ರೀಗೂ ಮುಂಡನವನ್ನು ವಿಧಿಸಿದೆ. ಇದೆಲ್ಲ ಶುದ್ಧಿಗಾಗಿಯೆ.

7 ಈಗ ಹೆಂಡರು ಯಾರೂ ಮುಂಡನ ಮಾಡಿಸಿಕೊಳ್ಳುವುದಿಲ್ಲ. ಶಾಸ್ತ್ರವನ್ನು ಉಲ್ಲಂಘಿಸಿ ಇಚ್ಛಾನುಸಾರವಾಗಿಯೋ ಕೆಲವು ಲೌಕಿಕ ಕಾರಣ ಗಳಿಂದಲೋ ಮಾಡಿಸಿಕೊಳ್ಳುವುದಿಲ್ಲ.

8 ಪುತ್ರರು ಎಲ್ಲರೂ ದಹನಮಾಡುವ ಕರ್ತನೂ ದಹನಾಂಗವಾಗಿ ಪ್ರಥಮದಿನ, ಹತ್ತನೇ ದಿನದಲ್ಲೂ ಮುಂಡನ ಮಾಡಿಸಬೇಕು.

ಕೆಲವು ಕರ್ನಾಟಕರು ಹತ್ತನೆದಿನ ಮಾಡಿಕೊಳ್ಳುವುದಿಲ್ಲ. ಇದು ಅಶಾಸ್ತ್ರೀಯ. ಹಾಗಿದ್ದರೆ ಶುದ್ಧರಾಗುವುದಿಲ್ಲ. ಇದು ನಿಶ್ಚಿತವು. ಈ ವಿಷಯದಲ್ಲಿ ದೇಶಾಚಾರವು ಇದ್ದಹಾಗೆ ಎಂದು ಸಿಂಧುಕಾರನ ಮತ.

9 ರಾತ್ರಿಯಲ್ಲಿ ಮೃತಪಟ್ಟವನಿಗೆ ರಾತ್ರಿಯೆ ದಹನ ಮಾಡಿದರೆ ಪ್ರಾತಃಕಾಲದಲ್ಲೆ ಮುಂಡನ ಮಾಡಿಸಿಕೊಳ್ಳಬೇಕು.

10 ಹತ್ತನೆದಿನ ಮೊದಲು ಧರಿಸಿದ ವಸ್ತ್ರವನ್ನು ಶುದ್ಧಿಗೊಳಿಸಿ ಗೃಹ ಶುದ್ಧಿಯನ್ನೂ ಮಾಡಿ, ತಿಲದಿಂದ ತಲೆಗೆ ಸ್ನಾನಮಾಡಿ, ಹೊಸವಸ್ತ್ರಗಳನ್ನು ಧರಿಸಿ ಉಟ್ಟುಬಟ್ಟೆಗಳನ್ನೂ ಪ್ರೇತವಸ್ತ್ರಗಳನ್ನೂ ಅಂತ್ಯಜರಿಗೂ; ಆಶ್ರಿತರಿಗೂ ಕೊಟ್ಟು, ಸುವರ್ಣಾದಿ ಮಂಗಳ ದ್ರವ್ಯವನ್ನು ಮುಟ್ಟಿ ನಂತರ ಮನೆಯೊಳಗೆ ಪ್ರವೇಶಿಸಬೇಕು.

(ನಾರಾಯಣಸ್ಮರಣಂ)

## ಅಸ್ಥಿಕ್ಷೇಪ ವಿಧಾನ

1 ವಿಧಿವತ್ತಾಗಿ ಸಂಚಯನ ದಿನ ಅಸ್ಥಿಗಳನ್ನು ತೆಗೆದು ಪಂಚಗವ್ಯದಿಂದ ಶುದ್ಧಿಮಾಡಿ ಪಟ್ಟೆವಸ್ತ್ರದಿಂದ ಸುತ್ತಿ ಮಣ್ಣಿನ ಮಡಿಕೆಯಲ್ಲಿಟ್ಟು ಮುಚ್ಚಿ ಅರಣ್ಯದಲ್ಲಿ, ಮರದ ಬುಡದಲ್ಲಿ ಶುದ್ಧವಾದ ಸ್ಥಳದಲ್ಲಿ ಭದ್ರವಾಗಿಟ್ಟು, ಸೂಕ್ಷ್ಮವಾದ ಅಸ್ಥಿಗಳನ್ನು, ಭಸ್ಮವನ್ನು ನೀರಿನಲ್ಲಿ ಹಾಕಬೇಕು.

2 ಇತರ ತೀರ್ಥಗಳಲ್ಲಿ ಅಥವಾ ಗಂಗೆಯಲ್ಲಿ, ಇತರ ಮಹಾನದಿಗಳಲ್ಲಿ ಹಾಕಬೇಕು. ಪುತ್ರ ಅಥವಾ ದೌಹಿತ್ರ, ಸಹೋದರನು ಅಸ್ಥಿಗಳನ್ನು ತೆಗೆದುಕೊಂಡು ಹೋಗಿ ಹಾಕಬೇಕು. ಪಿತೃಕುಲ, ಮಾತೃಕುಲಕ್ಕೆ ಸೇರಿದವರ ಅಸ್ಥಿಗಳನ್ನೇ ಒಯ್ಯಬೇಕು. ಬೇರೆ ಕುಲದವರ ಅಸ್ಥಿಗಳನ್ನು ತೆಗೆದುಕೊಂಡು ಹೋಗಬಾರದು, ಕೊಂಡುಹೋದರೆ ಪ್ರಾಯಶ್ಚಿತ್ತವಿದೆ.

3 ಗಂಗೆಯಲ್ಲಿ ಯಾವ ಪುಣ್ಯಾತ್ಮನ ಅಸ್ಥಿಯನ್ನು ಹಾಕಿದರೂ ಆತನಿಗೆ ಶಾಶ್ವತ ಬ್ರಹ್ಮಲೋಕವೇ ಸಿಕ್ಕುವುದು. ಪುನರಾವೃತ್ತಿಯಿಲ್ಲ. (ಪುನಃ ಜನ್ಮವಿಲ್ಲವೆಂದು ಹೇಳುತ್ತಾರೆ.)

4 ಗುರು, ಶುಕ್ರಾಸ್ತ ಕಾಲಗಳಲ್ಲಿ, ಮತ್ತು ಮಲಮಾಸದಲ್ಲಿ ಗಂಗೆಯಲ್ಲಿ ಅಸ್ಥಿಯನ್ನು ಹಾಕಬಾರದು-ಹೀಗೆಂದು ಗೌತಮ ಋಷಿಯು ಹೇಳಿರುವನು.

5 ದಶಾಹದೊಳಗೆ ಅಸ್ಥಿಯನ್ನು ಹಾಕುವುದಕ್ಕೆ ಅಸ್ಪಾದಿ ದೋಷಗಳಿಲ್ಲ. ಅಲ್ಲದೆ ಈ ಹತ್ತುದಿನಗಳಲ್ಲಿ ಮೃತಾತ್ಮನ ಅಸ್ಥಿಯು ಗಂಗಾಜಲದಲ್ಲಿ ಮುಳುಗಿದರೆ ಗಂಗೆಯಲ್ಲಿ ಮರಣವಾದರೆ ಯಾವ ಫಲವು ಬರುವುದೋ ಅದೇ ಫಲವು ಬರುವುದು.

6 ತೀರ್ಥದಲ್ಲಿ ಅಸ್ಥಿಯನ್ನು ಬಿಡುವ ಕರ್ತೃವಿಗೆ ಪೂರ್ವಾಂಗವಿಧಿಯಿದೆ. ಅದರ ಪ್ರಯೋಗವನ್ನು ನೋಡಿ ಅದರಂತೆ ಮಾಡಬೇಕು.

7 ಸಪಿಂಡೀಕರಣವಾದ ಮೇಲೆ ಮೃತಾತ್ಮನ ಅಸ್ಥಿಗಳನ್ನು ತೀರ್ಥದಲ್ಲಿ ಬಿಡುವುದಾದರೆ ಅಸ್ಥಿಕ್ಷೇಪಾಂಗವಾದ ಶ್ರಾದ್ಧವನ್ನು ಪಾರ್ವಣವಿಧಿಯಿಂದ ಹಿರಣ್ಯದಿಂದ ಮಾಡಬೇಕು. ಹಿಟ್ಟಿನಿಂದ ಪಿಂಡದಾನ ಮಾಡಬೇಕು. ದಶಾಹದ ಒಳಗಾದರೆ ಏಕೋದ್ದಿಷ್ಟ ವಿಧಿಯಂತೆ ಮಾಡಬೇಕು.

8 ತಿಲತರ್ಪಣ ಮಾಡಿ ಪಂಚಗವ್ಯ, ಪಂಚಾಮೃತಗಳಿಂದ ಅಸ್ಥಿಗಳನ್ನು ತೊಳೆದು ಯಕ್ಷಕರ್ದಮದಿಂದ ಲೇಪನಮಾಡಿ, ಹೂಗಳಿಂದ ಪೂಜಿಸಿ ಕೃಷ್ಣಾಜಿನ, ಕಂಬಳಿ ದರ್ಭೆ, ಭೂರ್ಜಪತ್ರ, ಶಣಬು, ಪಟ್ಟೆವಸ್ತ್ರ, ತಾಳೆ ಓಲೆಗಳಿಂದ ಕ್ರಮವಾಗಿ ಸುಳಾವರ್ತಿ ಸುತ್ತಿ ತಾಮ್ರದ ಸಂಪುಟದಲ್ಲಿ ಇರಿಸಿ, ಚಿನ್ನ, ಬೆಳ್ಳಿ, ಮುತ್ತು ಹವಳ, ನೀಲಿಮಣಿಗಳನ್ನು ಅಸ್ಥಿಗಳಲ್ಲಿ ಹಾಕಿ, ತಾಮ್ರದ ಸಂಪುಟದಲ್ಲಿ ಇರಿಸಬೇಕು. ವಿಧಿವತ್ತಾಗಿ ಮೊದಲು ಹೋಮ ಮಾಡಬೇಕು. ಅನಂತರ ತೀರ್ಥಕ್ಷೇತ್ರಗಳಿಗೆ ಸಂಪುಟವನ್ನು ಒಯ್ಯಬೇಕು.

ಒಯ್ಯುವವನು ಮಲ-ಮೂತ್ರವಿಸರ್ಜನೆ ಮಾಡುವಾಗ ಕೈಯ್ಯಲ್ಲಿ ಇಟ್ಟುಕೊಳ್ಳಬಾರದು. ಶೂದ್ರ, ಅಂತ್ಯಜಾತಿ, ಹೀನಜಾತಿಯವರನ್ನು ಮುಟ್ಟಿಕೊಳ್ಳಬಾರದು, ಶುದ್ಧನಾಗಿದ್ದು ಒಯ್ಯಬೇಕು.

ತೀರ್ಥಕ್ಕೆ ಹೋದಮೇಲೆ ಸ್ನಾನಮಾಡಿ, ಅಸ್ಥಿಗಳನ್ನು ತೊಳೆದು ಸಂಕಲ್ಪವನ್ನು ವಿಧಿವತ್ತಾಗಿ ಮಾಡಿ ವಿಧಿವತ್ತಾಗಿ ಗಂಗಾದಿ ಜಲದಲ್ಲಿ ಬಿಡಬೇಕು. ಅನಂತರ ಸ್ನಾನ ಮಾಡಿ ಹರಿಸ್ಮರಣೆ ಮಾಡಿ ಬ್ರಾಹ್ಮಣನಿಗೆ

ಯಥಾಶಕ್ತಿ ರಜತ-ದಕ್ಷಿಣಾದಾನ ಮಾಡಬೇಕು. (ಎಲ್ಲ ವಿಧಿಯನ್ನೂ ಪುರೋಹಿತರಿಂದ ತಿಳಿದು ಮಾಡಬೇಕು.)

(ನಾರಾಯಣಸ್ಮರಣಂ)

## ಏಕಾದಶಾಹ ಕೃತ್ಯ - ಮಹೈಕೋದ್ದಿಷ್ಟ

1 ಈ ಮಹೈಕೋದ್ದಿಷ್ಟವೆಂಬುದು ಷೋಡಶ ಶ್ರಾದ್ಧಗಳಿಗಿಂತ ಭಿನ್ನವಾದದ್ದು. ಮುಂದೆ ಮಾಡುವ ಎಲ್ಲ ಏಕೋದ್ದಿಷ್ಟ ಶ್ರಾದ್ಧಗಳಿಗೂ ಪ್ರಕೃತಿಯು. ಇದನ್ನು ಪಕ್ವಾನ್ನದಿಂದಲೇ ಮಾಡಬೇಕು. ಬ್ರಾಹ್ಮಣನು ಸಿಕ್ಕಿದರೆ ಭೋಜನ ಮಾಡಿಸಬೇಕು. ಇಲ್ಲವಾದರೆ ಅಗ್ನಿಯಲ್ಲಿ ಹೋಮ ಮಾಡಬೇಕು.

2 "ಬ್ರಾಹ್ಮಣಂ ಭೋಜಯೇದಾದ್ಯೇ ಹೋತವ್ಯಮನಲೇಥವಾ" ಈ ವಚನವು ಹೀಗೆ ಹೇಳುವುದು. ಬ್ರಾಹ್ಮಣನಿಗೆ ಭೋಜನ ಮಾಡಿಸುವ ಪಕ್ಷದಲ್ಲಿ ಬ್ರಾಹ್ಮಣನಿಗೆ ಕ್ಷೌರವೂ, ನಖಚ್ಛೇದವೂ ಆವಶ್ಯಕ. ಅಭ್ಯಂಜನ ಸ್ನಾನವನ್ನು ವಿಧಿವತ್ತಾಗಿ ಮಾಡಿಸಬೇಕು.

3 ಕ್ಷಣ, ಪಾದ್ಯ, ಅರ್ಘ್ಯ, ಆಸನ, ಗಂಧ ಪುಷ್ಪ, ಆಚ್ಛಾದನ ಗಳನ್ನು ಕೊಡಬೇಕು. ಧೂಪದೀಪಗಳಿಲ್ಲ. "ಏಕೋದ್ದಿಷ್ಟಂ ದೈವಹೀನಂ" ಎಂದು ಹೇಳಿದ್ದರಿಂದ ಒಬ್ಬನೇ ಬ್ರಾಹ್ಮಣನನ್ನು ನಿಮಂತ್ರಣ ಮಾಡಬೇಕು. ಅರ್ಘ್ಯಪಾತ್ರ, ಸ್ವಧಾಶಬ್ದ, ನಮಃಶಬ್ದ, ಪಿತೃಶಬ್ದಗಳನ್ನು ಉಚ್ಚರಿಸ ಬಾರದು. ಅಭಿಶ್ರವಣವಿಲ್ಲ. ಎಲ್ಲವನ್ನೂ ಪ್ರಾಚೀನಾವೀತಿಯಾಗಿ ಮಾಡ ಬೇಕು.

4 ಅಗ್ನೌಕರಣ ವಿಕಲ್ಪ, ಪಾಣಿಹೋಮ ಪಕ್ಷದಲ್ಲೂ ಅದನ್ನು ಭಕ್ಷಿಸಬಾರದು, ಅಗ್ನಿಯಲ್ಲೇ ಹಾಕಬೇಕು. ಏಕಪಿಂಡ ಮಾತ್ರ, ಅನು ಮಂತ್ರಣಾದಿಗಳೆಲ್ಲವೂ ಅಮಂತ್ರಕ. ಶ್ರಾದ್ಧಶೇಷ ಭೋಜನವಿಲ್ಲ. ಕೊನೆ ಯಲ್ಲಿ ಸ್ನಾನ ಮಾಡಬೇಕು.

(ನಾರಾಯಣಸ್ಮರಣಂ)

ನವಶ್ರಾದ್ಧಗಳನ್ನು ಅಮಂತ್ರಕವಾಗಿಯೇ ಆಚರಿಸಬೇಕೆಂದು ಹೇಳಿದೆ. ಇತರ ಹೆಚ್ಚಿನ ವಿಷಯಗಳನ್ನು ಪ್ರಯೋಗವನ್ನು ನೋಡಿ ಮಾಡಬೇಕು. ಈ ಏಕೋದ್ದಿಷ್ಟವು ಸ್ತ್ರೀಯರಿಗೂ ಉಂಟು.

5 ಆದ್ಯ ಮಾಸಿಕವನ್ನು 'ಮಾಸಾದೌ ಮಾಸಿಕಂ ಕಾರ್ಯಂ' ಎಂದಂತೆ ನ್ಯಾಯವಾಗಿ ಮೃತಾಹದ ದಿನವೇ ಮಾಡಬೇಕು. ಆಶೌಚವಿರುವುದರಿಂದ ಅದು ಕಳೆದ ಹನ್ನೊಂದನೇ ದಿನ ಮಾಡಬೇಕು.

6 ಸಪಿಂಡೀಕರಣ ಮಾಡಲು ಅಧಿಕಾರಸಿದ್ಧಿಗಾಗಿ ಅಪಕರ್ಷ ಮಾಡಬೇಕಾದ ಷೋಡಶ ಮಾಸಿಕಗಳನ್ನು ಹನ್ನೆರಡನೆ ದಿನ ಮಾಡುವ ಪಕ್ಷದಲ್ಲಿ ಏಕಾದಶಾಹದಲ್ಲೇ ಮಹೈಕೋದ್ದಿಷ್ಟ ಮಾಡಿದ ನಂತರವೇ ಅತಿಕ್ರಾಂತವಾದ ಆದ್ಯಮಾಸಿಕವನ್ನು ಮಾಡಬೇಕು. ಸಂಕಲ್ಪವನ್ನು ಹೀಗೆಯೇ ಮಾಡಬೇಕು. ಈ ಆದ್ಯಮಾಸಿಕದಲ್ಲಿ ಅಗ್ನಿಯಲ್ಲಿ ಹವನವಿಲ್ಲ.

7 ತ್ರಿಪಕ್ಷದಲ್ಲಿ ಸಪಿಂಡಿ ಮಾಡುವ ಪಕ್ಷದಲ್ಲಿ ಏಕಾದಶಾಹದಲ್ಲಿ ಆದ್ಯ ಮಾಸಿಕವನ್ನೂ, ಊನಮಾಸದಲ್ಲಿ ಊನಮಾಸಿಕವನ್ನೂ, ಪಕ್ಷತ್ರಯದಲ್ಲಿ ತ್ರೈಪಕ್ಷವನ್ನೂ ಏಕೋದ್ದಿಷ್ಟ ವಿಧಿಯಿಂದ ಮಾಡಿದ ಉಳಿದ ಮಾಸಿಕಗಳನ್ನು ಅಪಕರ್ಷಮಾಡಿ ಸಪಿಂಡೀ ಮಾಡಬೇಕು.

8 ಮಧ್ಯೆ ಸೂತಕವು ಬಂದರೂ ಸಹ ಸ್ವತಂತ್ರವಾದ ಮಹೈಕೋದ್ದಿಷ್ಟವನ್ನು ಮಾಡಬೇಕು. ಬಿಡಬಾರದು. (ಹನ್ನೊಂದನೇ ದಿನವೇ ಮಾಡಬೇಕು.) ಹೀಗೆಯೇ ವೈದ್ಯನಾಥೀಯ ಧರ್ಮಶಾಸ್ತ್ರದಲ್ಲಿ ವಚನವಿದೆ

ಸೂತಕಾಂತೆ ನರಃಕುರ್ಯಾತ್ ಏಕೋದ್ದಿಷ್ಟದ್ವಯಂ ಬುಧಃ ।
ಸೂತಕೇ ಪತಿತೇಚಾಪಿ ಸ್ವತಂತ್ರಂ ನಾತಿಲಂಘಯೇತ್ ॥

ಇಲ್ಲಿ ಸೂತಕಾಂತೆ ಎಂದರೆ ಏಕಾದಶಾಹದಲ್ಲಿ ಎಂದರ್ಥ. ಸ್ವತಂತ್ರಂ ಎಂದರೆ ಮಹೈಕೋದ್ದಿಷ್ಟ ಎಂದರ್ಥ.

## ಷೋಡಶ ಮಾಸಿಕಗಳು

1 ೧ ಆದ್ಯಮಾಸಿಕ, ೨ ಊನಮಾಸಿಕ, ೩ ದ್ವಿತೀಯಮಾಸಿಕ. ೪ ತ್ರೈಪಕ್ಷಿಕ, ೫ ತೃತೀಯಮಾಸಿಕ, ೬ ಚತುರ್ಥಮಾಸಿಕ, ೭ ಪಂಚಮ ಮಾಸಿಕ. ೮ ಷಷ್ಠಮಾಸಿಕ, ೯ ಊನಷಾಣ್ಮಾಸಿಕ, ೧೦ ಸಪ್ತಮ ಮಾಸಿಕ, ೧೧ ಅಷ್ಟಮಮಾಸಿಕ, ೧೨ ನವಮಮಾಸಿಕ, ೧೩ ದಶಮ ಮಾಸಿಕ, ೧೪ ಏಕಾದಶ ಮಾಸಿಕ, ೧೫ ದ್ವಾದಶಮಾಸಿಕ, ೧೬ ಊನಾಬ್ದಿಕ.

## ಏಕಾದಶಾಹದಲ್ಲಿ ರುದ್ರಗಣಶ್ರಾದ್ಧ

2 ಏಕಾದಶ ರುದ್ರರನ್ನು ಉದ್ದೇಶಿಸಿ ಅಥವಾ ರುದ್ರರೂಪನಾದ ಪ್ರೇತೋದ್ದೇಶದಿಂದ ಮಾಡುವ ಶ್ರಾದ್ಧ ರುದ್ರಗಣಶ್ರಾದ್ಧವು. ಶಕ್ತನಾದ ವನು ಏಕಾದಶರುದ್ರರ ಹೆಸರಿನಿಂದ ಹನ್ನೊಂದು ಜನ ಬ್ರಾಹ್ಮಣರನ್ನು ಭೋಜನ ಮಾಡಿಸಬೇಕು.

3 ಅಶಕ್ತನಾದವನು ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸ ಬೇಕು ಅಥವಾ ಆಮಾನ್ನದಾನ ಮಾಡಬೇಕು. ಅಕ್ಕಿ, ಬೇಳೆ, ತರಕಾರಿ-ಇತ್ಯಾದಿಗಳನ್ನು ದಾನಮಾಡಬೇಕು.

4 ಈ ಶ್ರಾದ್ಧದಲ್ಲಿ ಪಿಂಡದಾನ, ಅರ್ಘ್ಯದಾನ, ಅಗ್ನೌಕರಣ, ವಿಕಿರಗಳು ಈ ಯಾವುದೂ ಇಲ್ಲ.

5 ಅಷ್ಟವಸುಶ್ರಾದ್ಧವನ್ನು ಮಾಡಿದರೂ, ಬಿಟ್ಟರೂ ಸರಿಯೆ. ಆವಶ್ಯವಿಲ್ಲ.

6 ಏಕಾದಶಾಹದಲ್ಲಿ ಪದದಾನಗಳು ೧೩ (೧೦), ಇವುಗಳನ್ನು ಏಕಾದಶಾಹದಲ್ಲೊ, ದ್ವಾದಶದಲ್ಲೋ ಮಾಡುವುದು. ಪ್ರೇತಕ್ಕೆ ಮಾರ್ಗ ದಲ್ಲಿ ಸುಖಗಮನವು ಆಗುವುದಕ್ಕಾಗಿ ಮಾಡುವುದು.

ಆಸನ, ಪಾದುಕೆ, ಛತ್ರಿ, ಉಂಗುರ, ಕಮಂಡಲು. ಉಪವೀತ, ಆಜ್ಯ, ವಸ್ತ್ರ, ಭೋಜನ, ಅನ್ನದತಪ್ಪಲೆ–ಇವು ದಾನಗಳು.

## ಏಕಾದಶಾಹ ಕೃತ್ಯಗಳು

ಹನ್ನೊಂದನೆ ದಿನ ಬೆಳಿಗ್ಗೆ ಎದ್ದು ಮನೆಯನ್ನು ಶುದ್ಧಿಗೊಳಿಸಿ, ಮುಟ್ಟಿಕೊಂಡ ಎಲ್ಲ ವಸ್ತ್ರಗಳನ್ನೂ ಒಗೆಯಬೇಕು. ಎಲ್ಲಾ ಜ್ಞಾತಿಗಳಿಗೂ ಸಚೈಲಸ್ನಾನವಾದ ನಂತರ ಸಂಧ್ಯಾವಂದನೆ, ಪಂಚಮಹಾಯಜ್ಞಾದಿ ಕರ್ಮಗಳಿಂದ ಶುದ್ಧವಾಗುವುದು. ಏಕಾದಶಾಹದಲ್ಲಿ ಪುತ್ರಾದಿ ಕರ್ತೃಗಳಿಗೂ ಪಂಚಮಹಾಯಜ್ಞಾಧಿಕಾರವು ಬರುವುದು.

ಜ್ಞಾತಿಗಳಿಗೆ ಅಮಾವಾಸ್ಯ ಶ್ರಾದ್ಧತರ್ಪಣ, ವಾರ್ಷಿಕಶ್ರಾದ್ಧಗಳಲ್ಲೂ ಅಧಿಕಾರ ಬರುವುದು.

ನಾಂದಿಶ್ರಾದ್ಧವನ್ನು ಮಾತ್ರ ಸಪಿಂಡಿಯಾಗುವುದಕ್ಕೆ ಮುಂಚೆ ಚತುಃ ಪುರುಷ ಸಪಿಂಡರು ಮಾಡಬಾರದು. ಅನಂತರ ದಶಾಹ ಕರ್ಮಗಳನ್ನು ಮಾಡಿದ ಕರ್ತನು ಪುತ್ರ ಮುಂತಾದವರು ವೃಷೋತ್ಸರ್ಗ ಮೊದಲಾದವನ್ನು ಆಚರಿಸಬೇಕು. ಹನ್ನೆರಡನೇ ದಿನವೂ ವೃಷೋತ್ಸರ್ಗವನ್ನು ಮಾಡ ಬಹುದು. ವೃಷೋತ್ಸರ್ಗವನ್ನು ಮನೆಯಲ್ಲಿ ಮಾಡಬಾರದು. ಕರ್ತನೆ ಎಲ್ಲವನ್ನೂ ಮಾಡಬೇಕು. ಆಚಾರ್ಯಾವರಣೆ ಮಾಡಬಾರದು. ವೃಷೋತ್ಸರ್ಗ ಮಾಡದಿದ್ದರೆ ಪ್ರೇತತ್ವವು ಸ್ಥಿರಪಡುವುದು. ವೃದ್ಧಿಶ್ರಾದ್ಧವನ್ನು (ನಾಂದಿಯನ್ನು) ಇಲ್ಲಿ ಮಾಡಬಾರದು. ಮಾತಾಪಿತೃಗಳಿಗೆ ಒಂದು ವರ್ಷದೊಳಗೆ ವೃಷೋತ್ಸರ್ಗ ಮಾಡುವಾಗಲೂ ನಾಂದಿಯನ್ನು ಆಚರಿಸಬಾರದು.

ನಾರಾಯಣಸ್ಮರಣಂ.

## ಉದಕುಂಭ

1 ಹನ್ನೊಂದನೆ ದಿನದಿಂದ ವರ್ಷಪೂರ್ತಿ ದಿನೇ ದಿನೇ ಅನ್ನ, ಕುಂಭದಲ್ಲಿ ನೀರನ್ನು ಪ್ರೇತವನ್ನುದ್ದೇಶಿಸಿ ಇರಿಸಬೇಕು. ಸಂವತ್ಸರದೊಳಗೆ ಸಪಿಂಡೀಕರಣವನ್ನು ಮಾಡುವ ಪಕ್ಷದಲ್ಲಿ ಮಾಸಿಕ ಉದಕುಂಭವನ್ನು ವರ್ಷ ಪರ್ಯಂತರವೂ ದಾನಮಾಡಬೇಕು. ಉದಕುಂಭವನ್ನು ಕೊಡದೆ ಏಷ್ಟೇ

ಶ್ರಾದ್ಧಗಳನ್ನು ಮಾಡಿದರೂ ಮಾನವರ ಏಳಿಗೆಯಾಗುವುದಿಲ್ಲ. ದರಿದ್ರರಾಗಿ ದುಃಖಿಗಳಾಗಿಯೇ ಈ ಸಂಸಾರದಲ್ಲಿ ಬೀಳುವರು. ವರ್ಷಪರ್ಯಂತರ ಉದಕುಂಭದಾನ ಮಾಡಿದರೆ ಅಶ್ವಮೇಧಯಾಗದ ಫಲ ಲಭಿಸುವುದು

2 ಸಪಿಂಡಿಗೆ ಮುಂಚೆ ಏಕೋದ್ದಿಷ್ಟವಿಧಾನದಿಂದ ಉದಕುಂಭ ಶ್ರಾದ್ಧವನ್ನು ಮಾಡಬೇಕು. ಸಪಿಂಡಿಯಾದ ಮೇಲೆ ಪಾರ್ವಣವಿಧಿಯಂತೆ ಮಾಡಬೇಕು. ಇದನ್ನು ಹದಿಮೂರನೆ ದಿನದಿಂದ ಆರಂಭಿಸಿ ಮಾಡಬೇಕೆಂದು ಕುಮಾರಿಲಭಟ್ಟರ ಮತ.

3 ಅದೈವಂ ಪಾರ್ವಣಶ್ರಾದ್ಧಂ ಸೋದಕುಂಭಮಧರ್ಪಕಂ ।
ಕುರ್ಯಾತ್ ಪ್ರತ್ಯಾಬ್ದಿಕಶ್ರಾದ್ಧಾತ್ ಸಂಕಲ್ಪವಿಧಿನಾನ್ವಹಂ ।

ಎಂಬ ವಚನದಂತೆ ದೇವರಹಿತವಾಗಿ ಇದನ್ನು ಮಾಡಬೇಕು. ಪಿಂಡದಾನ ಮಾಡಿದರೂ ಬಿಟ್ಟರೂ ಸಮ.

4 ಪ್ರಾಯಶ್ಚಿತ್ತಾಂಗ ವೈಷ್ಣವ ಶ್ರಾದ್ಧದಂತೆ ಎಲ್ಲಾ ಶ್ರಾದ್ಧಕರ್ಮ ಗಳೂ ಅನುಷ್ಠೇಯವಾಗಿಲ್ಲ. ಕೇವಲ ವಚನಮಾತ್ರದಿಂದ. ಆದರಿಂದ ಸಂಕಲ್ಪ ಶ್ರಾದ್ಧದಂತೆ ಕ್ಷಣಾ, ಪಾದ್ಯ–ಆಸನ ಗಂಧವಸ್ತ್ರ ಪರ್ಯಂತ ಬ್ರಾಹ್ಮ ಣನಿಗೆ ಪೂಜೆಮಾಡಿ ಅನ್ನಪರಿವೇಷಣಮಾಡಿ 'ಪೃಥ್ವೀತೆ ಪಾತ್ರಂ' ಇತ್ಯಾದಿ ಮಂತ್ರವನ್ನು ಹೇಳಿ, ಏಷ ಉದಕುಂಭಃ ಇದಮನ್ನದತ್ತಂ ಚೇತ್ಯಾದಿ ರೂಪದಲ್ಲಿ ತ್ಯಾಗಮಾಡಬೇಕು. ಕೊನೆಗೆ ತಾಂಬೂಲ ದಕ್ಷಿಣಾದಾನ.

5 ಇದರಲ್ಲಿ ಬ್ರಹ್ಮಚರ್ಯ ರಾತ್ರಿ ಉಪವಾಸಾದಿ ನಿಯಮಗಳು ಇಲ್ಲ.

6 ವೃದ್ಧಿನಿಮಿತ್ತ ಮಾಸಿಕಗಳನ್ನು ಅಪಕರ್ಷಮಾಡಿದರೆ, ಉದಕುಂಭ ಶ್ರಾದ್ಧಗಳನ್ನು ಅಪಕರ್ಷಮಾಡಬೇಕು. ಕಾರಣ ಪ್ರೇತ ಶ್ರಾದ್ಧವೆಂಬುದು.

7 ನಿತ್ಯವೂ ಮಾಡಲು ಅಶಕ್ತನಾದವನು ಒಂದುದಿನ ಉಕ್ತಸಂಖ್ಯೆ ಯಲ್ಲಿ ಆಮಾನ್ನಗಳಿಂದಲೂ ಉದಕುಂಭಗಳಿಂದಲೂ, ಅದರ ಪ್ರತ್ಯಾಮ್ನಾಯ ಹಿರಣ್ಯದಾನಗಳಿಂದಲೂ ಅಪಕರ್ಷಮಾಡಬಹುದು.

ಆಶೌಚಾದಿಗಳಿಂದ ಅತಿಕ್ರಾನ್ತವಾದರೆ ಮುಂದಿನ ಮಾಸಿಕ. (ಉದಕುಂಭ) ಶ್ರಾದ್ಧದೊಡನೆ ಸೇರಿಸಿ ತಂತ್ರೇಣ ಅನುಷ್ಠಾನ ಮಾಡಬೇಕು ಸಂಕಲ್ಪ :— ಅತಿಕ್ರಾಂತೋದಕುಂಭಶ್ರಾದ್ಧಾನಿ, ಅದ್ಯತನ – ಉದಕುಂಭಶ್ರಾದ್ಧಂಚ ತಂತ್ರೇಣ ಕರಿಷ್ಯೇ ಎಂದು ದೀಪದಾನವನ್ನು ಮಾಡಬೇಕು.

ಪ್ರತ್ಯಹಂ ದೀಪಕೋದೇಯೋ ಮಾರ್ಗೇತು ವಿಷಮೇನರೈಃ ।
ಯಾವತ್‌ಸಂವತ್ಸರಂವಾಪಿ ಪ್ರೇತಸ್ಯ ಸುಖಲಿಪ್ಸಯಾ ॥

ಪಿತೃಕರ್ಮದಲ್ಲಿ ದಕ್ಷಿಣಮುಖವಾಗಿ ದೀಪವನ್ನು ನೀರಿನೊಂದಿಗೆ ಇರಿಸಬೇಕು.

ಕುರ್ಯಾದ್ಯಾಮ್ಯಮುಖಂ ಪಿತ್ರ್ಯೇ ಅದ್ಭಿಃ ಸಂಕಲ್ಪ್ಯ ಸುಸ್ಥಿರಂ ।
ಪ್ರಾಙ್ಮುಖೋದಙ್ಮುಖಂ ದೀಪಂ ದೇವಾಗಾರೇ ದ್ವಿಜಾಲಯೇ ॥

ಎಂದಂತೆ.

ಪರಂ-ರೂಢಿಯಲ್ಲಿ ಮಾಸಿಕಗಳಲ್ಲಿ ಒಂದು ಉದಕುಂಭವನ್ನಿಟ್ಟು ಕೊಡುವರು,

## ಉಪದಾನಗಳು ೧೪

ಅನ್ನ । ಉದಕುಂಭ । ಪಾದುಕೆ ೨ । ಕಮಂಡಲು । ಛತ್ರಿ । ವಸ್ತ್ರ । ಕೋಲು ಕಬ್ಬಿಣದ ದಂಡ । ಅಗ್ನಿಷ್ಟಿಕೆ । ದೀಪ । ತಿಲ । ತಾಂಬೂಲ । ಚಂದನ । (ಶ್ರೀಗಂಧ) ಪುಷ್ಪಮಾಲಿಕೆ । ವೈತರಣೀಧೇನು, ಉತ್ಕ್ರಾಂತಿಧೇನು । ಮೋಕ್ಷಧೇನು-ಭೂಮಿ ಮೊದಲಾದ ದಶದಾನಗಳನ್ನು ಮರಣಕಾಲದಲ್ಲಿ ಕೊಡದೆ ಇದ್ದರೆ ಏಕಾದಶಾಹ, ದ್ವಾದಶಾಹ ದಿನ ಕೊಡಬೇಕು. ಅಲ್ಲದೆ ಅಶ್ವ । ರಥ । ಗಜ । ಧೇನು । ಮಹಿಷೀ । ಶಿಬಿಕಾ ಪಲ್ಲಕ್ಕಿ ಮುಂತಾದವನ್ನು **ರಾಜ ಮಹಾರಾಜರು ಮಾಡಬೇಕಾದದ್ದು.** ಶಾಲಗ್ರಾಮ । ಪುಸ್ತಕ । ಕಸ್ತೂರಿ । ಕೇಸರಿ । ಮುಂತಾದ ಗಂಧ ದ್ರವ್ಯ, ದಾಸೀ । ದಾಸ । ರತ್ನ । ಆಭರಣ ಹಾಸಿಗೆ । ಛತ್ರಿ । ಚಾಮರ ಇವುಗಳನ್ನು ಸಂಪತ್ತು ಇದ್ದರೆ ದಾನ ಮಾಡಬೇಕು.

## ಷೋಡಶ ಮಾಸಿಕಗಳ ಕಾಲ

ಮಾಸಾದೌ ಮಾಸಿಕಂ ಕಾರ್ಯಂ ಆದ್ಯಂತ್ವೇಕಾದಶೇಽಹನಿ ।
ಏಕದ್ವಿತ್ರಿದಿನ್ಯೈರೂನೇ ತ್ರಿಭಾಗೇನೋನ ಏವವಾ ॥
ಊನಮಾಸಿಕಮೂನಾಬ್ದಂ ಊನಷಾಣ್ಮಾಸಿಕಂ ಚರೇತ್ ।
ತ್ರೈಪಕ್ಷಿಕಂ ತ್ರಿಪಕ್ಷೇಚ ಊನಮಾಸ್ಯದ್ವಾದಶೇಽಹ್ನಿವಾ ॥

ಎಂದಂತೆ ಮಾಸದ ಆದಿಯಲ್ಲಿ (ಮೃತಾಹ ತಿಥಿಯಲ್ಲಿ) ಮಾಸಿಕ ಮಾಡಬೇಕು. ಮೊದಲನೆ ಮಾಸಿಕವನ್ನು ಹನ್ನೊಂದನೆ ದಿನ ಮಾಡಬೇಕು. ಮೃತತಿಥಿಗೆ ಒಂದು ದಿನ ಅಥವಾ ಎರಡು ಮೂರು ದಿನಗಳು ಅಂತರವಿರುವ ಹಿಂದಿನ ದಿನಗಳಲ್ಲಿ ಊನಮಾಸಿಕ, ಊನಷಾಣ್ಮಾಸಿಕ, ಊನಾಬ್ದಿಕಗಳನ್ನು ಮಾಡಬೇಕು.

ಮಾಧವ ಮತ ಬೇರೆ –

ಊನಷಾಣ್ಮಾಸಿಕ, ಊನಾಬ್ದಿಕಗಳನ್ನು ಮೃತತಿಥಿಯ ಹಿಂದಿನ ದಿನ ಮಾಡಬೇಕು. ತ್ರೈಪಕ್ಷಿಕವನ್ನು ಮೂರು ಪಕ್ಷಗಳು ಕಳೆದು ನಂತರ ಬರುವ ಮೃತಾಹದಲ್ಲಿ ಮಾಡಬೇಕು.

## ಆಹಿತಾಗ್ನಿಗಳಿಗೆ ಒಂದು ವಿಶೇಷ

ಆಹಿತಾಗ್ನಿಯು ತ್ರೈಪಕ್ಷಿಕ ಪರ್ಯಂತವಾದ ಮಾಸಿಕಗಳನ್ನು, ಸಂಸ್ಕಾರ ಮಾಡಿದ ತಿಥಿಯಲ್ಲಿ ಉಳಿದ ಮಾಸಿಕಗಳನ್ನು ಪ್ರತ್ಯಾಬ್ದಿಕವನ್ನು, ಆಚರಿಸ ಬೇಕು. ಆದರಿಂದ ಮೊದಲಿನ ಮಾಸಿಕವನ್ನು ದಹನದಿಂದ ೧೧ನೇ ದಿನದಲ್ಲಿ ಮಾಡಬೇಕೆಂದು ಮತ್ತು ಮೂರು ತಿಂಗಳು ನಂತರ ದಹನಸಂಸ್ಕಾರವು ಆದರೆ ಹೀಗೆ ಮಾಡಬೇಕೆಂದು ತೋರುತ್ತದೆ, ತ್ರಿಪಕ್ಷಪರ್ಯಂತವಾದ ಮಾಸಿಕ ಗಳನ್ನು ದಾಹತಿಥಿಯಲ್ಲಿ ಮಾಡಿ ಉಳಿದವುಗಳನ್ನು ಅತಿಪನ್ನವಾದವುಗಳನ್ನು ಮೃತತಿಥಿಯಲ್ಲಿ ಆಗ ಬಂದ ಮಾಸಿಕದ ಜೊತೆಯಲ್ಲಿ ಆಚರಿಸಬೇಕು ಎಂದು ತೋರುತ್ತದೆ.

## ಊನಮಾಸಿಕಗಳಿಗೆ ವರ್ಜ್ಯ ತಿಥಿಗಳು

ತ್ರಿಪುಷ್ಕರೇಷು ನಂದಾಸು ಸೀನೀವಾಲ್ಯಾಂ ಭೃಗೋರ್ದಿನೇ ।
ಚತುರ್ದಶ್ಯಾಂ ಚ ನೋನಾನಿ ಕೃತ್ತಿಕಾಸುದ್ವಿಪುಷ್ಕರೇ ॥

ತ್ರಿಪುಷ್ಕರ ದ್ವಿಪುಷ್ಕರವೆಂದರೇನೆಂಬುದನ್ನು ಹಿಂದೆ ತಿಳಿಸಿದೆ.

ತ್ರಿಪಾದಿ ನಕ್ಷತ್ರಗಳು, ದ್ವಿತೀಯಾ ಸಪ್ತಮೀ. ದ್ವಾದಶಿ, ಮಂಗಳ-ಶನಿ, ಭಾನುವಾರಗಳು—ಈ ಮೂರೂ ಸೇರಿ ಒಂದು ದಿನ ಬಂದರೆ ತ್ರಿಪುಷ್ಕರ.

ಇದೇ ತಿಥಿವಾರಗಳಲ್ಲಿ ಮೃಗಶಿರ, ಚಿತ್ತೆ, ಧನಿಷ್ಠ ನಕ್ಷತ್ರಯೋಗ ಇದ್ದರೆ ದ್ವಿಪುಷ್ಕರಯೋಗ.

ಅಮಾವಾಸ್ಯೆಯ ಪ್ರಥಮಯಾಮವು ಸೀನೀವಾಲೀ, ಅದರ ಕೊನೇ ಯಾಮ ಮತ್ತು ಕೊನೇ ಯಾಮದ ಹಿಂದಿನ ಯಾಮವು ಕುಹೂ ಎಂದಿದೆ.

ಶುಕ್ರವಾರ, ಚತುರ್ದಶಿ, ಕೃತ್ತಿಕಾ ನಕ್ಷತ್ರ ಇರುವಲ್ಲೂ ಊನಮಾಸಿಕಗಳನ್ನು ಮಾಡಬಾರದು.

## ಊನಮಾಸಿಕಾದಿಗಳ ಕಾಲ

ಸಪ್ತವಿಂಶದಿನಾದೂರ್ಧ್ವಂ ತ್ರ್ಯಹಸ್ಸೂನಮಾಸಿಕಂ ।
ಚತ್ವಾರಿಂಶದ್ದಿನಾದೂರ್ಧ್ವಂ ಪಂಚಾಹಸ್ಸು ತ್ರಿಪಕ್ಷಕಂ ॥
ತಥಾದಶಸು ಷಣ್ನ್ಯೂನಂ ಸಪ್ತತ್ಯಧಿಶತಾತ್ ಪರಂ ।
ಊರ್ಧ್ವಂ ಪಂಚದಶಾಹಸ್ಸು ಚತ್ವಾರಿಂಶತ್ ಶತತ್ರಯಾತ್ ।
ಊನಾಬ್ದಿಕಂ ಪ್ರಕುರ್ವೀತ ತಿಥಾವಾಬ್ದಿಕಮಾಚರೇತ್ ॥

ಪ್ರಾಚೀನರು ಹೇಳುವ ಪದ್ಧತಿಯಂತೆ ಮೃತಪಟ್ಟ ದಿನದಿಂದ ಇಪ್ಪತ್ತೇಳು ದಿನಗಳ ಮೇಲೆ ಮೂರು ದಿನಗಳಲ್ಲಿ ಊನಮಾಸಿಕವನ್ನು, ನಲವತ್ತು ಸಂದ ಮೇಲೆ ಐದು ದಿನಗಳಲ್ಲಿ ತ್ರೈಪಕ್ಷಿಕವನ್ನು, ನೂರಎಪ್ಪತ್ತು ದಿನಗಳ ಮೇಲೆ ಹತ್ತು ದಿನಗಳಲ್ಲಿ ಊನಷಾಣ್ಮಾಸಿಕವನ್ನು, ಮುನ್ನೂರ ನಲವತ್ತು

ದಿನಗಳ ನಂತರ ಹದಿನೈದು ದಿನಗಳಲ್ಲಿ ಊನಾಬ್ದಿಕವನ್ನು ಮಾಡಬೇಕೆಂದು ವೈದ್ಯನಾಥೀಯದಲ್ಲಿ ಹೇಳಿದೆ. ಈ ಗಣನೆಯು ಮಲಮಾಸವಿಲ್ಲದಿರುವಾಗ ಗಣನೆ ಮಾಡಿದ ಚಾಂದ್ರಸಂವತ್ಸರದ 354 ದಿನಗಳು. ಮೃತತಿಥಿ ಎರಡನೆ ವರ್ಷಾರಂಭದಲ್ಲಿ ಪ್ರಥಮಾಬ್ದಿಕವನ್ನು ಮಾಡಬೇಕೆಂದು ಹೇಳಿದಂತಾಯಿತು.

2 ಕರ್ಮದ ಆದಿಯಲ್ಲಿ ಸಂಕಲ್ಪ ಮಾಡುವಾಗ ಚಾಂದ್ರಮಾನ ಸಂವತ್ಸರವನ್ನೆ ಸ್ಮರಿಸಬೇಕೆಂದು ಹೇಳಿದೆ.

3 ದ್ವಾದಶಾಹಾದಿಗಳಲ್ಲಿ ಸಪಿಂಡಿ ಮಾಡುವುದಾದರೆ ಷೋಡಶ ಮಾಸಿಕಗಳನ್ನು ಒಂದೇ ದಿನ ಅಪಕರ್ಷ ಮಾಡಿ ಏಕೋದ್ದಿಷ್ಟ ವಿಧಿಯಂತೆ ಮಾಡಬೇಕು, ಅವುಗಳನ್ನು ಮಾಡದೆ ಸಪಿಂಡಿ ಮಾಡಬಾರದು. ಮಾಡುವ ಅಧಿಕಾರ ಬರುವುದಿಲ್ಲ. "**ಶ್ರಾದ್ಧಾನಿ ಷೋಡಶಾದತ್ವಾ ನ ತು ಕುರ್ಯಾತ್ ಸಪಿಂಡನಂ**" ಎಂದು ಹೇಳಿದೆ.

4 ಈ ಷೋಡಶಿಯನ್ನು ಆಮದಿಂದಲೋ ಪಕ್ವಾನ್ನದಿಂದಲೋ ಮಾಡಬಹುದು, ಅನ್ನಶ್ರಾದ್ಧ ಮಾಡುವುದಾದರೆ ಒಂದೇ ಪಾಕ. ಬ್ರಾಹ್ಮಣರು ೧೬ ಜನ. ಅರ್ಘ್ಯ-ಪಿಂಡ-ಇವುಗಳು ೧೬.

5 ದ್ವಾದಶಾಹವಲ್ಲಿ ಸಪಿಂಡಿಗೆ ಮುಂಚೆ ಇವುಗಳನ್ನು ಮಾಡಿದ್ದರೂ ಸಪಿಂಡಿಯಾದ ನಂತರವೂ ಉಕ್ತ ಕಾಲಗಳಲ್ಲಿ ಮಾಸಿಕಗಳನ್ನು ಪಾರ್ವಣ ವಿಧಾನದಿಂದ ಮಾಡಬೇಕು.

ಗೌತಮ ವಚನ—

ಯಸ್ಯ ಸಂವತ್ಸರಾದರ್ವಾಕ್ ವಿಹಿತಾತು ಸಪಿಂಡತಾ ।
ವಿಧಿವತ್ತಾನಿ ಕುರ್ವೀತ ಪುನಃಶ್ರಾದ್ಧಾನಿ ಷೋಡಶ ॥

ಎಂಬ ವಚನವಿದೆ,

ಅರ್ವಾಕ್‌ಸಂವತ್ಸರಾದ್ಯಸ್ಯ ಸಪಿಂಡೀಕರಣಂ ಕೃತಂ ।
ಷೋಡಶಾನಾಂ ದ್ವಿರಾವೃತ್ತಿಂ ಕುರ್ಯಾದಿತ್ಯಾಹಗೌತಮಃ ॥

ಊನಾನಾಂನಾಪಕರ್ಷಃಸ್ಯಾತ್ ಪುನರಪ್ಯಪಕರ್ಷಣೇ ।
ಉತ್ಕರ್ಷಶ್ಚಾಪಿ ನ ಭವೇತ್ ಪ್ರಮಾದಾಂತರಿತಸ್ಯತು ॥

ಯಲ್ಲಾಜಿಯಲ್ಲಿ ಊನಮಾಸಿಕಗಳಿಗೆ ಅಪಕರ್ಷವಿಲ್ಲವೆಂದು ಹೇಳಿದೆ. ಆದರೆ ಧರ್ಮಸಿಂಧುಕಾರನು ಷೋಡಶ ಮಾಸಿಕಗಳನ್ನು ಅಪಕರ್ಷ ಮಾಡದೆ ಸಪಿಂಡಿ ಅಧಿಕಾರವೇ ಬರುವುದಿಲ್ಲವೆಂದು ಸ್ಪಷ್ಟ ಹೇಳಿರುವುದರಿಂದ ಸಿಂಧು ವಿನ ನಿರ್ಣಯವೇ ಯುಕ್ತವೆಂದು ಕಾಣುತ್ತದೆ.

ಷೋಡಶಮಾಸಿಕಗಳಿಗೆ ಆವೃತ್ತಿಯೆಂಬುದು ಹನ್ನೊಂದನೇ ದಿನವೇ ಸಪಿಂಡಿ ಮಾಡಿದರೆ ಮಾತ್ರ ಆದ್ಯಮಾಸಿಕಕ್ಕೆ ಕಾಲವಿದೆ.

ದ್ವಾದಶಾಹದಲ್ಲಿ ಸಪಿಂಡಿ ಮಾಡಿದರೆ **ಪಂಚದಶ** (೧೫) ಮಾಸಿಕಗಳಿಗೆ ಆವೃತ್ತಿಯೆಂದು ಅರಿಯಬೇಕು.

ತ್ರಿಪಕ್ಷದಲ್ಲಿ ಸಪಿಂಡಿ ಮಾಡುವುದಾದರೆ **ತ್ರಯೋದಶ ಮಾಸಿಕಗಳಿಗೆ ಮಾತ್ರ ಆವೃತ್ತಿಯು.** ಏಕೆಂದರೆ, ಆದ್ಯಮಾಸಿಕ, ಊನಮಾಸಿಕ, ದ್ವಿತೀಯ ಮಾಸಿಕಗಳನ್ನು ಆಯಾಯ ಕಾಲದಲ್ಲಿ ಮಾಡಿದ್ದಾಗಿರುತ್ತದೆ. ಅಪಕರ್ಷ ಮಾಡಿದ್ದು ೧೩ ಕ್ಕೆ. ಅವುಗಳಿಗೆ ಪುನರಾವೃತ್ತಿಯೆಂಬುದು ನ್ಯಾಯ. ಇವುಗಳಿಗೆ ಉಕ್ತಕಾಲವು ಬಂದಿಲ್ಲವೆಂಬುದು ಕಾರಣ.

ಅಪಕರ್ಷ ಮಾಡಿದ್ದರೂ ಮಾತಾಪಿತೃಗಳ ವಿಷಯದಲ್ಲಿ ಪುನಃ ಕರಣ, ಬೇರೆಯವರ ವಿಷಯದಲ್ಲಿ ಅಲ್ಲವೆಂದು ಹೇಳಿದೆ.—ಶಿವಸ್ವಾಮಿ ಮತವು.

ಎಂದು ಯಲ್ಲಾಜೀಯ—

ಸಮಾಪ್ಯ ಪಿತ್ರೋರಸ್ತು ಪುನಶ್ಚಕುರ್ಯಾತ್ ಸಂವತ್ಸರಂ ಮಾಸಿಕ ಕರ್ಮಚಾಂಬು । ಪ್ರಾಪ್ತೇಽವಶ್ಯೇಮಾಸಿಕಂ ಕರ್ಮಚೇಷ್ಟಂ ಕುರ್ಯಾತ್ ಪೂರ್ವಂ ಶೋಭನೇ ಶೋಭನಾದೌ ಪಶ್ಚಾತ್ । ಪಿತ್ರೋರೇವ ಶೇಷಾಣಿ ಕುರ್ಯಾತ್ । ಮಾಸೇ ಶ್ರಾದ್ಧಾನ್ಯಬ್ದಪೂರ್ತೇರ್ನಚಾನ್ಯೇ ॥

## ಮಾಸಿಕಗಳು ೧೬

ಆದ್ಯಮಾಸಿಕ, ಊನಮಾಸಿಕ, ದ್ವಿತೀಯ, ತ್ರೈಪಕ್ಷಿಕ, ತೃತೀಯ, ಚತುರ್ಥ, ಪಂಚಮ, ಷಷ್ಠ, ಊನಷಾಣ್ಮಾಸಿಕ, ಸಪ್ತಮ, ಅಷ್ಟಮ, ನವಮ, ದಶಮ, ಏಕಾದಶ, ದ್ವಾದಶ, ಊನಾಬ್ದಿಕ, ಇವು ಒಟ್ಟು ೧೬.

## ರುದ್ರಗಣಶ್ರಾದ್ಧ ವಸುಗಣಶ್ರಾದ್ಧ

ಏಕಾದಶಾಹದಲ್ಲಿ ಏಕಾದಶ ರುದ್ರರನ್ನು ಉದ್ದೇಶಿಸಿ ಅಥವಾ ರುದ್ರ ರೂಪನಾದ ಪ್ರೇತವನ್ನುದ್ದೇಶಿಸಿ ಮಾಡುವ ಶ್ರಾದ್ಧ. ಶಕ್ತರಾದವರು ೧೧ ಜನ ಬ್ರಾಹ್ಮಣರನ್ನು ಕೂರಿಸಿ ಭೋಜನ ಮಾಡಿಸಬೇಕು, ಅಶಕ್ತನಾದವನು ಒಬ್ಬ ಬ್ರಾಹ್ಮಣನಿಗೆ ಏಕಾದಶ ರುದ್ರರ ಆವಾಹನೆ; ಪೂಜೆ ಮಾಡಿ ಭೋಜನ ಮಾಡಿಸಬೇಕು. ಅನ್ನ ಅಥವಾ ಆಮದಿಂದ ಶ್ರಾದ್ಧ ಮಾಡಬಹುದು.

ಈ ಶ್ರಾದ್ಧದಲ್ಲಿ ಪಿಂಡದಾನ, ಅರ್ಘ್ಯ, ಅಗ್ನೌಕರಣ, ವಿಕಿರ–ಇವು ಗಳನ್ನು ಮಾಡಕೂಡದು.

ಇದರಂತೆ ಅಷ್ಟವಸುಶ್ರಾದ್ಧ. ಅಷ್ಟವಸುಗಳನ್ನು ಆವಾಹನೆ ಮಾಡಿ ಭೋಜನ ಮಾಡಿಸಬೇಕು, **ಈ ಶ್ರಾದ್ಧವನ್ನು ಮಾಡಲೇಬೇಕೆಂಬ ನಿಯಮವಿಲ್ಲ.**

ಏಕಾದಶಾಹ ಕೃತ್ಯಗಳನ್ನು ಮೂರುದಿನ ಆಶೌಚವಾಗಿದ್ದರೆ ನಾಲ್ಕನೇ ದಿನ ಮಾಡಬೇಕು, ಎರಡನೇದಿನ ಅಥವಾ ಮೊದಲನೇ ದಿನವೇ ಸಂಚಯನ ಮಾಡಿ ಐದನೇ ದಿನ ಸಪಿಂಡಿಯನ್ನು ಮಾಡಬೇಕು.

## ಪದದಾನಗಳು

ಇದನ್ನು ೧೧ನೇ ದಿನ ಅಥವಾ ೧೨ನೇ ದಿನ ಮಾಡಬೇಕಾದ್ದು. ಆದ ರಿಂದ ಪ್ರೇತನಾದ ಮೃತಾತ್ಮನಿಗೆ ಪ್ರೇತಮಾರ್ಗದಲ್ಲಿ ಸುಖವಾಗಿ ಗಮನ

ಪ ಗುವುದು, ಆಸನ, ಪಾದುಕೆ, ಛತ್ರಿ, ಉಂಗುರ, ಕಮಂಡಲು, ಉಪವೀತ, ಆಜ್ಯ, ವಸ್ತ್ರ. ಭೋಜನ, ಅನ್ನದ ಪಾತ್ರೆ, ಹೀಗೆ ೧೦ ಪದ ದಾನಗಳು.

## ಉಪದಾನಗಳು ಹದಿನಾಲ್ಕು

ಅನ್ನ, ಉದಕುಂಭ, ಪಾದುಕೆ, ಕಮಂಡಲು, ಛತ್ರಿ. ವಸ್ತ್ರ, ಯಷ್ಟಿ (ದಂಡ) ಲೋಹದಂಡ, ಅಗ್ನಿಷ್ಟಿಕೆ, ದೀಪ, ತಿಲ, ತಾಂಬೂಲ, ಚಂದನ, ಪುಷ್ಪಮಾಲಿಕೆ–ಇವು ಉಪದಾನಗಳು.

ಇನ್ನು ವಿಶೇಷ ದಾನಗಳು—

3 ಅಶ್ವ, ರಥ, ಗಜ, ಧೇನು, ಮಹಿಷಿ. ಪಲ್ಲಕ್ಕಿ, ಸಾಲಗ್ರಾಮ, ಪುಸ್ತಕ. ಕಸ್ತೂರಿ, ಕುಂಕುಮಕೇಸರಿ, ದಾಸಿಯರು, ರತ್ನ, ಅಲಂಕಾರಗಳು, ಶಯ್ಯಾ, ಛತ್ರಚಾಮರ ಇವುಗಳನ್ನು ಯಥಾಶಕ್ತಿ ಅರಿತು ಮಾಡಬಹುದು.

### ಉದಕುಂಭ

4 ಹನ್ನೊಂದನೆ ದಿನದಿಂದ ಒಂದು ವರ್ಷಪರ್ಯಂತರ ಅನ್ನ ನೀರು (ನೀರು ತುಂಬಿದ ಕುಂಭ ತಾಮ್ರ ಹಿತ್ತಾಳೆಯ ತಂಬಿಗೆಗಳಲ್ಲಿ ತುಂಬಿದ್ದು ಉದಕುಂಭ) ವನ್ನು ನಿತ್ಯವೂ ವರ್ಷಪರ್ಯಂತ ಕೊಡಬೇಕು.

ಒಂದು ಸಂವತ್ಸರದೊಳಗೆ ಸಪಿಂಡೀಕರಣವಾಗಿದ್ದರೆ ಮಾಸಿಕ ಉದಕುಂಭ ಈ ಎರಡೂ ವರ್ಷಪರ್ಯಂತ ಅವಶ್ಯಕರ್ತವ್ಯ. ಈ ಉದಕುಂಭ ಶ್ರಾದ್ಧವನ್ನು ಸಪಿಂಡಿಯಾಗುವುದಕ್ಕೆ ಮುಂಚೆ ಏಕೋದ್ದಿಷ್ಟ ವಿಧಿಯಂತೆಯೂ ಸಪಿಂಡಿಯಾದ ಮೇಲೆ ಪಾರ್ವಣ ವಿಧಿಯಿಂದಲೂ ಮಾಡಬೇಕು.

ಈ ಶ್ರಾದ್ಧದಲ್ಲಿ ಪಿಂಡದಾನ ನಿಯಮವಿಲ್ಲ. ದೇವಶೂನ್ಯವು.

ಆದ್ಯೈವಂ ಪಾರ್ವಣಶ್ರಾದ್ಧಂ ಸೋದಕುಂಭಮಥರ್ಮಾಕಂ ।
ಕುರ್ಯಾತ್ ಪ್ರತ್ಯಬ್ದಿಕಶ್ರಾದ್ಧಾತ್ ಸಂಕಲ್ಪವಿಧಿನಾನ್ವಹಂ ॥

ಎಂದಂತೆ ಇದನ್ನು ಸಂಕಲ್ಪವಿಧಾನದಿಂದ ಆಚರಿಸಬೇಕು,

ಸಂಕಲ್ಪವಿಧಿಯಿಂದ ಮಾಡುವಾಗ ಸಂಕಲ್ಪಕ್ಷಣ, ಪಾದ್ಯ ಆಸನ ಗಂಧ ವಸ್ತ್ರಾಂತ ಪೂಜೆಮಾಡಿ ಅನ್ನವನ್ನು ಬಡಿಸಿದ ಮೇಲೆ "ಪೃಥಿವೀತೇಪಾತ್ರಂ" ಎಂದು "ಏಷ ಉದಕುಂಭಃ ಇದಮನ್ನಂ ದತ್ತಂಚ" ಎಂದು ದತ್ತಮಾಡಿ ಕೊನೆಯಲ್ಲಿ ತಾಂಬೂಲ ದಕ್ಷಿಣಾದಾನ ಮಾಡತಕ್ಕದ್ದು.

ಷರಾ—ಇದರಲ್ಲಿ ಬ್ರಹ್ಮಚರ್ಯ ಪುನರ್ಭೋಜನಾಭಾವಾದಿ ನಿಯಮ ಗಳಿಲ್ಲ.

5 ಅಭ್ಯುದಯ, ಉಪನಯನ, ವಿವಾಹಾದಿ ಕಾರ್ಯಗಳು ನಿಮಿತ್ತವಾಗಿ ಬಂದರೆ, ಉದಕುಂಭ ಶ್ರಾದ್ಧಗಳನ್ನು ಮಾಸಿಕಗಳಂತೆ ಅಪ ಕರ್ಷ ಮಾಡಬೇಕು.

**ನಿತ್ಯವೂ ಉದಕುಂಭ ದಾನಮಾಡಲು ಸಾಧ್ಯವಿಲ್ಲದೆ ಇದ್ದರೆ** ಒಂದೇ ದಿನ ವರ್ಷಪರ್ಯಂತರ ಬೇಕಾದ ಆಮದ್ರವ್ಯ (ಅಂದರೆ ಅಕ್ಕಿ ಬೇಳೆ ಮುಂತಾದುವುಗಳನ್ನು ಕೊಡುವುದು. ಅಥವಾ ಆಮಾನ್ನ ಪ್ರತ್ಯಾಮ್ನಾಯ **ಉದಕುಂಭ ಪ್ರತ್ಯಾಮ್ನಾಯ ದಕ್ಷಿಣಾದಾನ ಮಾಡಬೇಕು. ನಿತ್ಯ ಈ ಕರ್ಮವನ್ನು ಮಾಡುವಾಗ ಮಧ್ಯೆ ಆಶೌಚ ಬಂದರೆ ಅಷ್ಟು ಶ್ರಾದ್ಧಗಳಿಗೆ ಲೋಪವೇ. ಪುನಃ ಆಚರಿಸಬೇಕಾಗಿಲ್ಲ.**

6 ಆಶೌಚವು ಕಳೆದ ಮೇಲೆ ಪ್ರತಿಬಂಧಕದಿಂದ ಮಾಡದೆ ಬಿಟ್ಟರೆ ಮುಂದಿನ ಉದಕುಂಭವನ್ನು ಮಾಡುವಾಗ ಅತಿಪನ್ನ ಉದಕುಂಭಗಳನ್ನು ಸೇರಿಸಿಕೊಂಡು ತಂತ್ರೇಣ ಏಕಕಾಲದಲ್ಲಿ ಸಂಕಲ್ಪಪೂರ್ವಕ ಆಚರಿಸಬೇಕು.

ಸಂಕಲ್ಪವಿಧಾನ—

"ಅತಿಪನ್ನೋದಕುಂಭ ಶ್ರಾದ್ಧಾನಿ ಅದ್ಯತನೋದಕುಂಭಶ್ರಾದ್ಧಂಚ ತಂತ್ರೇಣ ಕರಿಷ್ಯೆ" ಎಂದು ಸಂಕಲ್ಪ ಮಾಡುವುದು.

7 ಪ್ರಥಮಾಬ್ದದಲ್ಲಿ ದೀಪದಾನವು ವರ್ಷಪರ್ಯಂತರ ಕರ್ತವ್ಯ. ಪರ್ಷಪರ್ಯಂತರ ಪ್ರೇತಾತ್ಮನಿಗೆ ಸುಖವಾಗಲೆಂದು ದೇವಸ್ಥಾನದಲ್ಲಿ ಬ್ರಾಹ್ಮಣ ಗೃಹಗಳಲ್ಲಿಯಾದರೂ ಪೂರ್ವಮುಖವಾಗಿಯೋ, ಉತ್ತರಮುಖವಾಗಿಯೋ ದೀಪಗಳನ್ನು ಇಟ್ಟು ದಾನಮಾಡಬೇಕು ಪಿತೃಕಾರ್ಯದಲ್ಲಿ ದಕ್ಷಿಣದಿಕ್ಕಿಗೆ ಇರಿಸಿ ಸಂಕಲ್ಪಪೂರ್ವಕ ನೀರಿನೊಂದಿಗೆ ದಾನಮಾಡಬೇಕು. ದೀಪ ಅದು ಸ್ಥಿರದೀಪವಾಗುವುದು. ಅತಿ ಕಷ್ಟವಾದ ಯಮಲೋಕದ ಮಾರ್ಗದಲ್ಲಿ ಮೃತಾತ್ಮನಿಗೆ ಸುಖವಾಗಿ ದಾರಿ ಸಾಗುವುದು. ಇದಕ್ಕಾಗಿ ದೀಪದಾನ ಮಾಡಬೇಕು.

8 ಮರಣ ದಿನದಿಂದ ಆರಂಭಿಸಿ ಲೆಖ್ಖಿಸಿದ ಹನ್ನೆರಡು ಮಾಸಗಳಲ್ಲಿ ನಡುವೆ ಅಧಿಕಮಾಸವು ಬಂದರೆ ಆ ಮಾಸದ ಮಾಸಿಕವನ್ನು ಅಧಿಕದಲ್ಲೂ, ಶುದ್ಧದಲ್ಲೂ ಎರಡಾವರ್ತಿ ಮಾಡಬೇಕು.

9 ಮಲಮಾಸದಲ್ಲೇ ಮೃತಪಟ್ಟವನಿಗೆ ಹನ್ನೊಂದನೇದಿನ ಪ್ರಥಮ ಮಾಸಿಕವನ್ನು ಮಾಡಿ ಎರಡನೇ ತಿಂಗಳಲ್ಲಿ ಶುದ್ಧದಲ್ಲಿ ಮೃತತಿಥಿಯಲ್ಲಿ ಪುನಃ ಮಾಡಬೇಕು. ಊನಮಾಸಿಕವನ್ನು ಎರಡನೆ ಮಾಸ ಮುಗಿಯುವ ಮುಂಚಿನ ದಿನಗಳಲ್ಲಿ ಆಚರಿಸಬೇಕು. ಮೂರನೆ ಮಾಸದ ಆರಂಭದಲ್ಲಿ ದ್ವಿತೀಯ ಮಾಸಿಕವನ್ನು ಎರಡು ತಿಂಗಳು ೧೫ ದಿನಗಳು ಕಳೆದೊಡನೆ ತ್ರೈಪಕ್ಷಿಕವನ್ನು ಮಾಡಬೇಕು.

10 **ಚತುಃಪುರುಷರ ನಡುವೆ ಜ್ಞಾತಿಗಳಲ್ಲಿ ನಾಂದೀ ಮಾಡಬೇಕಾದ ಪ್ರಸಂಗ ಬರುವಲ್ಲಿ** ನಾಂದಿ ಮಾಡುವ ಮಾಸದಲ್ಲೇ ನಾಂದಿಗೆ ಹಿಂದೆ (ಯಾವುದಾದರೊಂದು ದಿನ) ಒಂದೇ ದಿನದಲ್ಲಿ ಉಳಿದ ಮಾಸಿಕಗಳನ್ನು ಎಲ್ಲಾ ಅಪಕರ್ಷಮಾಡಿ ಮಾಡಬೇಕು,

ಪ್ರೇತಕರ್ಮಾಣಿ ಸರ್ವಾಣಿ ಸಪಿಂಡೀಕರಣಂ ತಥಾ ।
ಅಪಕೃಷ್ಯಾಪಿ ಕುರ್ವೀತ ಕರ್ತುಂ ನಾಂದಿಮುಖಂ ದ್ವಿಜಃ ॥

ಇದರಲ್ಲಿ ಒಂದೇ ಪಾಕ. ಷೋಡಶಶ್ರಾದ್ಧಪಕ್ಷದಲ್ಲಿ ೧೬ ಜನ ಬ್ರಾಹ್ಮಣರು. ನಲವತ್ತೆಂಟು ಪಿಂಡಗಳನ್ನು ಹಾಕಬೇಕು, ಪುರೂರವಾದ್ರವ ವಿಶ್ವೇದೇವರಿಗಾಗಿ ಒಬ್ಬ ಬ್ರಾಹ್ಮಣ - ಈ ರೀತಿ ತಿಳಿದು ಮಾಡಬೇಕು.

11 ಇದೇ ರೀತಿಯಾಗಿ ಉದಕುಂಭ ಶ್ರಾದ್ಧಗಳನ್ನು ಒಂದೇ ದಿನ ಅಪಕರ್ಷಮಾಡಿ ಮಾಡಬೇಕು.

ಚತುಃಪುರುಷ ಸಪಿಂಡರಲ್ಲಿ ಆಧಾನಾದಿಗಳನ್ನು ಮಾಡಬೇಕಾಗಿ ಬಂದಾಗ ಮೇಲೆ ಹೇಳಿದಂತೆ ಅಪಕರ್ಷಮಾಡಿ ಮಾಡಬೇಕು.

12 ಯಾವಯಾವ ಮಾಸಿಕವು ಸೂತಕಾದಿ ನಿಮಿತ್ತದಿಂದ ಬಿಟ್ಟು ಹೋಗಿರುವುದೋ ಅದನ್ನು ಮುಂದಿನ ಮಾಸಿಕದೊಂದಿಗೆ ಸೇರಿಸಿ ಸಂಕಲ್ಪ ಮಾಡಿ ಮಾಡಬೇಕು.

## ಸಪಿಂಡೀಕರಣವಿಚಾರ ಮತ್ತು ಕಾಲನಿರ್ಣಯ

1 ಪಿತೃವರ್ಗ, ಮಾತೃವರ್ಗಗಳಲ್ಲಿ ಯಾರೊಬ್ಬರು ಮೃತಪಟ್ಟರೂ ಸಾಗ್ನಿಕ (ಶ್ರೌತಾಗ್ನಿಯಿಟ್ಟವನು) ದ್ವಾದಶಾಹದಲ್ಲಿ (೧೨ನೇ ದಿನ) ಸಪಿಂಡಿಯನ್ನು ಮಾಡಿ ಮುಂದೆ ಬರುವ ಅಮಾವಾಸ್ಯೆಯಲ್ಲಿ ಪಿಂಡಪಿತೃಯಜ್ಞವನ್ನು ಮಾಡಬೇಕು.

ಸಾಗ್ನಿಕ ಎಂದರೆ ಸ್ಮಾರ್ತಾಗ್ನಿಯಿಟ್ಟವನು ಆಗಬಹುದೆಂದೂ ಅವನಿಗೂ ಪಿಂಡ ಪಿತೃಯಜ್ಞವಿದೆಯೆಂದು ಧರ್ಮಸಿಂಧುಕಾರ ಹೇಳುವನು. **ಪ್ರೇತಾತ್ಮನು ಸಾಗ್ನಿಕನಾದರೆ ತ್ರಿಪಕ್ಷದಲ್ಲೇ ಸಪಿಂಡಿ ಮಾಡಬೇಕು.**

ಪ್ರೇತಶ್ಚೇಹಿತಾಗ್ನಿಃ ಸ್ಯಾತ್ ಕರ್ತಾನಗ್ನಿರ್ಯದಾ ಭವೇತ್ ।
ಸಪಿಂಡಿಕರಣಂ ತಸ್ಯ ಕುರ್ಯಾತ್ ಪಕ್ಷೇ ತೃತೀಯಕೇ ॥

ಎಂದು ವಚನವಿದೆ,

2 ಸಾಗ್ನಿಃ ಎಂದರೆ ಶ್ರೌತಾಗ್ನಿಯುಳ್ಳವನೆಂದು ಅರ್ಥ. ಎಂದರೆ ಮೃತಪಟ್ಟವನೂ ಮತ್ತು ಕರ್ತೃವೂ ಸಾಗ್ನಿಕನಾದರೆ ದ್ವಾದಶಾಹ (೧೨ನೇ ದಿನವೇ ಸಪಿಂಡಿ ಮಾಡಬೇಕು.

ಸಾಗ್ನಿಕಸ್ತು ಯದಾ ಕರ್ತಾ ಪ್ರೇತೋಽಪ್ಯಗ್ನಿಮಾನ್ ಭವೇತ್ ।
ದ್ವಾದಶಾಹೇ ತದಾ ಕುರ್ಯಾತ್ ಸಪಿಂಡೀಕರಣಂ ಪಿತುಃ ॥

ಎಂದು ಹೇಳಿದೆ.

3 ಪ್ರೇತಾತ್ಮನೂ ಮತ್ತು ಕರ್ತೃವೂ ಅಗ್ನಿಯನ್ನು ಇಟ್ಟಿಲ್ಲವಾದರೆ ಬೇರೆ ಬೇರೆ ಕಾಲಗಳಲ್ಲಿ ಕರ್ತೃವು ಸಪಿಂಡಿ ಮಾಡಬೇಕು. ಒಂದು ವರ್ಷವು ಪೂರ್ಣವಾದ ಮೇಲೋ ಅಥವಾ ಹನ್ನೊಂದನೇ ಮಾಸ, ಆರನೇ ಮಾಸ, ಮೂರನೇ ಮಾಸ ಅಥವಾ ತ್ರಿಪಕ್ಷ ಕಳೆದ ದಿನ, ಮಾಸದ ಕೊನೆ ಅಥವಾ ದ್ವಾದಶಾಹ, ಏಕಾದಶಾಹ ದಿನಗಳೆಂದು ಹೇಳಿದ ಕಾಲಗಳು.

4 ಅಥವಾ ಯಾವ ದಿನ ವೃದ್ಧಿ (ನಾಂದಿಯು ಒದಗುವುದೋ) ಆ ದಿನವೆ ವೃದ್ಧಿನಿಮಿತ್ತವಾದ ಅಪಕರ್ಷ ಮಾಡಿ ಸಪಿಂಡಿ ಮಾಡಬೇಕು. ಅದು ಸಾಗ್ನಿಕನಿಗೂ ಅಗ್ನಿಯಿಲ್ಲದವನಿಗೂ ಸಮಾನ. ವೃದ್ಧಿಯೆಂದರೆ ಚೂಡಾ ಕರ್ಮ, ಉಪನಯನ, ವಿವಾಹ ಮಾತ್ರವೆಂದು ಕೆಲವರು.

ಅದೂ ಸರಿಯಲ್ಲ. ಗರ್ಭಾಧಾನ, ಪುಂಸವನ, ಅನ್ನಪ್ರಾಶನಾಂತ ಸಂಸ್ಕಾರಗಳಲ್ಲಿ ಸಪಿಂಡಿಯನ್ನು ಮೊದಲೇ ಆಚರಿಸದಿದ್ದರೆ ದೋಷವಿದೆ ಯೆಂದು ಸ್ಮೃತಿವಚನವಿರುವುದರಿಂದ ಇಂತಹ ಅವಶ್ಯಕವಾದ ಕರ್ಮಗಳಲ್ಲಿ ವೃದ್ಧಿಶ್ರಾದ್ಧವು ಅವಶ್ಯವಿರುವುದರಿಂದ ಸಪಿಂಡಿಕರ್ಮವನ್ನು ಅಪಕರ್ಷ ಮಾಡಲೇಬೇಕೆಂದು ನಿರ್ಣಯಪಡಿಸಿದ್ದಾರೆ. ಚತುಃಪುರುಷ ಸಪಿಂಡಿಕರಣರಲ್ಲಿ (ಅಂದರೆ ಹಿಂದೆ ತಿಳಿಸಿದ ಚತುಃಪುರುಷರಾದ ಜ್ಞಾತಿಗಳಲ್ಲಿ) ಸಪಿಂಡಿಯಿಲ್ಲದ ಗರ್ಭಾಧಾನಾದಿ ಸಂಸ್ಕಾರಗಳನ್ನು ಮಾಡಲೇಬಾರದೆಂದು ಹೇಳುವರು.

ಆದರಿಂದ ಪಿತಾಮಹ ಮೃತಪಟ್ಟರೆ ಪೌತ್ರನ ವೃದ್ಧಿಕಾರ್ಯವು ಜಾತ ಕರ್ಮ ನಾಮಕರಣಾದಿಗಳು ಬಂದಾಗ ಸಪಿಂಡೀಕರಣ (ಮಾಸಿಕ) ಅನು ಮಾಸಿಕಾದಿಗಳನ್ನು ಅಪಕರ್ಷಮಾಡಬೇಕೆಂದು ತಿಳಿಯುವುದು.

ಈ ಬಗೆಯಾಗಿ ಆವಶ್ಯಕವಾದ ವೃದ್ಧಿಯುಕ್ತವಾದ ಕರ್ಮಗಳು ಒದಗಿದಾಗ ಕನಿಷ್ಠಪುತ್ರನಾಗಲಿ, ಸಹೋದರ, ಸಹೋದರನ ಪುತ್ರ, ಅಥವಾ ಬೇರೆ ಸಪಿಂಡರಾದವರು ಶಿಷ್ಯ, ಈ ಜನರಲ್ಲಿ ಯಾರಾದರೂ ಕರ್ತೃವಾಗಿದ್ದರೂ (ಮುಖ್ಯ ಕರ್ತೃವಲ್ಲದಿದ್ದರೂ) ಇವರ ಕುಲದಲ್ಲಿ ಸಂಭವಿಸುವ ನಾಂದಿಯುಕ್ತವಾದ ಕರ್ಮಗಳಿಂದ ವೃದ್ಧಿಯನ್ನು ಸಾಧಿಸಲು ಸಪಿಂಡನಾದಿಗಳನ್ನು ಅಪಕರ್ಷ ಮಾಡಲೇಬೇಕು.

ಈ ಸಪಿಂಡನಕಾರ್ಯವನ್ನು ಮಾಡಿದ್ದಾಗಿದ್ದರೆ ಪುನಃ ಮುಖ್ಯಪುತ್ರನು ಮಾಡಬೇಕಾಗಿಲ್ಲ. ವೃದ್ಧಿಯುಕ್ತವಾಗಿ ಅಪಕರ್ಷ ಮಾಡಿದ್ದರೆ ಪುನಃ ಮಾಡತಕ್ಕದ್ದಿಲ್ಲ. ಪುನಃ ಮಾಡಿದರೆ—

"ಯೋ ವಾ ಭದ್ರಂದೂಷಯಂತಿ ಸ್ವಧಾಭಿಃ" ಎಂದು ಶ್ರುತಿಯು ಮಂಗಳಕಾರ್ಯವನ್ನು ಸ್ವಧಾಕಾರ್ಯಗಳಿಂದ ಕೆಡಿಸಿದಂತೆ ಆಗುವುದೆಂದು ನಿಂದಿಸಿದೆ. ಇದೇ ಯುಕ್ತವಾದದ್ದು.

ಹೀಗಿದ್ದರೂ ಕೆಲವರು ಷೋಡಶ ಮಾಸಿಕಗಳನ್ನು ಸಪಿಂಡಿಗಾಗಿ ೧೨ನೆ ದಿನ ಅಪಕರ್ಷ ಮಾಡಿದ್ದರೂ ವೃದ್ಧಿನಿಮಿತ್ತವಾಗಿ ಸಪಿಂಡಿಯಾದ ಮೇಲೂ ಮಾತಾಪಿತೃಗಳ ವಿಷಯದಲ್ಲಿ ಪುನಃ ಆಯಾಯ ಕಾಲದ ಮಾಸಿಕಗಳನ್ನು ಮಾಡಬೇಕೆಂದು ಪಾರಿಜಾತಕಾರರು ಕೊಟ್ಟ ವಚನದಂತೆ ಮಾಡುವರು. ಈ ವಿಷಯದಲ್ಲಿ ಧರ್ಮಸಿಂಧುಕಾರ ಹೇಳಿದ್ದೇ ಯುಕ್ತವೆಂದು ತೋರುತ್ತದೆ. ಶಿಷ್ಟಾಚಾರವಿದ್ದಂತೆ ಮಾಡಬಹುದೆಂದು ನಮ್ಮ ಆಶಯ,

ವೃದ್ಧಿನಿಮಿತ್ತವಿಲ್ಲದೆ ಗೌಣಾಧಿಕಾರಿಯು ಸಪಿಂಡಿ ಮೊದಲಾದವುಗಳನ್ನು ಮಾಡಿದ್ದರೂ ಮುಖ್ಯಾಧಿಕಾರಿಯಾದ ಪುತ್ರಾದಿಗಳು ಪುನಃ ಮಾಡಬೇಕೆಂದು ಹೇಳಿದೆ, ಆದರೆ ಏಕಾದಶಾಹಾಂತ ಕರ್ಮಗಳನ್ನು ಪುನಃ ಮಾಡಬೇಕಾಗಿಲ್ಲ. ಮಾಡಬಾರದು.

ಗತಿಯಿಲ್ಲದೆ ಅವಶ್ಯ ಮಾಡಬೇಕಾದ ವೃದ್ಧಿಕರ್ಮವೆಂದು ಆವಶ್ಯಕ ವೆಂಬ ಮಾತಿನಿಂದ ತಿಳಿಯಬೇಕು. ಮಾಡದೆ ಬಿಡುವುದಕ್ಕೆ ಆಗದ ವಿವಾಹಾದಿ ಪ್ರಸಂಗ ಬಂದಾಗ ಈ ಅಪಕರ್ಷವನ್ನು ಪುನಃ ಮಾಡಬೇಕು.

ಉಪನಯನಾದಿಗಳನ್ನು ವರ್ಷ ಕಳೆದ ನಂತರ ನಡೆಯಿಸುವ ಸಂದರ್ಭ ವಿದ್ದರೆ ಪುನಃ ಅಪಕರ್ಷ ಬೇಕಿಲ್ಲ. ಆಯಾಯ ಕಾಲದಲ್ಲಿ ಮಾಸಿಕಾದಿಗಳನ್ನು ಮಾಡುವುದು. ಇದೇ ವ್ಯವಸ್ಥೆಯು.

## ದ್ವಾದಶಾಹವೇ ಸಪಿಂಡೀಕರಣಕ್ಕೆ ಪ್ರಶಸ್ತದಿನ

ಆನಂತ್ಯಾತ್ ಕುಲಧರ್ಮಾಣಾಂ ಪುಂಸಾಂಚಾಯುಷಃ ಕ್ಷಯಾತ್ ।
ಅಸ್ಥಿರತ್ವಾತ್ ಶರೀರಸ್ಯ ದ್ವಾದಶಾಹಃ ಪ್ರಶಸ್ಯತೇ ॥

ಇಲ್ಲಿ ಕುಲಧರ್ಮವೆಂದರೆ ನಾಂದಿಯೆಂಬುವ ವೃದ್ಧಿಶ್ರಾದ್ಧವಿರುವ ಕರ್ಮ. ಗರ್ಭಾಧಾನಾದಿಗಳು ಎಂದರ್ಥ. ಪಂಚಮಹಾಯಜ್ಞ, ದೇವ ಪೂಜಾದಿ ನಿತ್ಯಕರ್ಮಗಳಲ್ಲಿ ಸಪಿಂಡಿನಿಮಿತ್ತವಾದ ಅಡ್ಡಿಗಳು ನಿತ್ಯಕರ್ಮ ಗಳಿಗಿಲ್ಲ. ಈ ವಿಷಯಕ್ಕೆ ವಚನವೇ ಇಲ್ಲ,

ಪ್ರಕೃತ ಪಿತೃಕುಲ, ಮಾತೃಕುಲದಲ್ಲಿ ಕುಲಧರ್ಮಗಳು ಬಹಳವಾಗಿರು ವುದರಿಂದ ಮಾನವರಿಗೆ ಆಯುಷ್ಯಕ್ಷಯಿಸುವುದರಿಂದಲೂ ಕರ್ತೃವಿನ ಶರೀರವು ಅಸ್ಥಿರವಾದ್ದರಿಂದಲೂ ವರ್ಷಪರ್ಯಂತ ನಿರೀಕ್ಷಿಸದೆ ದ್ವಾದಶಾಹವನ್ನೇ ಹಿಡಿದು ಸಪಿಂಡಿ ಮಾಡುವುದು ಒಳಿತೆಂದು ಶ್ಲೋಕದ ಅರ್ಥ.

ಮೂರು ದಿನದ ಆಶೌಚವಾದರೆ ಆಶೌಚ ಕಳೆದ ಐದನೇ ದಿನ ಸಪಿಂಡೀ ಕರಣ ಮಾಡಬೇಕು.

ದ್ವಾದಶಾಹ ಮೊದಲಾದ ಉಕ್ತ ಕಾಲಗಳೂ ಮೀರಿಹೋದರೆ ಪ್ರಮಾದದಿಂದ ಅನುಷ್ಠಾನ ಮಾಡದಿದ್ದರೆ ಮುಂದೆ ಮುಂದೆ ಹೇಳಿದ ಕಾಲ ದಲ್ಲಿ ಆಚರಿಸಬೇಕು.

ಹಸ್ತ, ಆರಿದ್ರ, ರೋಹಿಣಿ, ಅನೂರಾಧಾ ನಕ್ಷತ್ರವಿರುವ ದಿನ ಆಚರಿಸಬೇಕು.

ಷರಾ—ವರ್ಷಾಂತ್ಯದಲ್ಲಿ ಸಪಿಂಡಿಯನ್ನು ಮಾಡುವ ಪದ್ಧತಿಯು ಈಗ ನಿಂತುಹೋಗಿದೆ. ಆದರಿಂದ ಈ ವಿಷಯವನ್ನು ಬಿಟ್ಟಿದೆ.

ಇಲ್ಲಿಗೆ ಕಾಲವಿಚಾರವಾಯಿತು.

ಸಪಿಂಡಿಯನ್ನು ಪುತ್ರನು ವಿದೇಶದಲ್ಲಿರುವಾಗ ಮತ್ತೊಬ್ಬರು ಮಾಡಬಾರದು. ಷೋಡಶ ಶ್ರಾದ್ಧಗಳನ್ನು ಮಾತ್ರ ಜ್ಯೇಷ್ಠಪುತ್ರನು ಹತ್ತಿರದಲ್ಲಿ ಇಲ್ಲದಿದ್ದರೆ ಕನಿಷ್ಠನು ಮಾಡಬೇಕು. ಪುನಃ ಜ್ಯೇಷ್ಠಪುತ್ರನು ಇವುಗಳನ್ನು ಮಾಡಕೂಡದು.

ವೃದ್ಧಿ (ಚೂಡಾ, ಉಪನಯನ, ವಿವಾಹಾದಿ) ನಿಮಿತ್ತವಾಗಿ ಕನಿಷ್ಠ ಪುತ್ರಾದಿಗಳು ಸಪಿಂಡೀಕರಣವನ್ನು ಮಾಡಿದ್ದರೂ ಜ್ಯೇಷ್ಠಪುತ್ರನು ಪುನಃ ಮಾಡಬೇಕು.

ಆಹಿತಾಗ್ನಿಯಾದ ಕನಿಷ್ಠನೂ ಸಪಿಂಡಿಯನ್ನು ಮಾಡಬಹುದು. ಈತನು ಮಾಡಿದ್ದರೂ ಜ್ಯೇಷ್ಠನು ಪುನಃ ಮಾಡಬೇಕು. ಪುನಃ ಮಾಡುವಾಗ ಪ್ರೇತಶಬ್ದವನ್ನು ಉಚ್ಚರಿಸಬಾರದು. ದೇಶಾಂತರದಲ್ಲಿರುವ ಪುತ್ರರು ಮಾತಾಪಿತೃಗಳ ಮರಣವಾರ್ತೆಯನ್ನು ಕೇಳಿದೊಡನೆ ವಪನ ಮಾಡಿಸಬೇಕು. ದಶಾಹ ಸೂತಕವಿದ್ದು ಕೊನೆಯಲ್ಲಿ ಸಪಿಂಡಿ ಆಚರಿಸಬೇಕು,

## ಸಪಿಂಡೀಕರಣವು ಕೆಲವರಿಗೆ ನಿಷೇಧಿಸಲ್ಪಟ್ಟದೆ.

ದ್ವಾದಶಾಬ್ದಾದಧಶ್ಚೋರ್ಧ್ವಂ ಕನ್ಯಕಾಯಾಃ ಸಪಿಂಡನಂ ।
ಸ್ವಾಮ್ಯಭಾವಾದ್ಧಿನಾಸ್ತ್ಯೇವ ನಾರಾಯಣಬಲಿಂ ಚರೇತ್ ॥

(ವೈದ್ಯನಾಥೀಯೇ)

ಸಪಿಂಡೀಕರಣಂ ನೈವ ಮೃತಾನಾಂ ಬ್ರಹ್ಮಚಾರಿಣಾಮ್ ।
ಕ್ಲೀಬಾನಾಂ ಪತಿತಾನಾಂ ಚ ದುಷ್ಟಸ್ತ್ರೀಣಾಂ ತಥೈವಚ ॥
ನೈಷ್ಠಿಕಾನಾಂ ಯತೀನಾಂಚ ಶ್ರಾದ್ಧಂ ನಾರಾಯಣಾರ್ಪಣಮ್ ।
ಉಪಕುರ್ವಾಣಕಸ್ಯೈವ ಸಪಿಂಡೀಕರಣಂ ವಿದುಃ ॥

ಈ ಮೇಲೆ ಹೇಳಿದ ವಚನಗಳಂತೆ ಕನ್ಯೆಯು ಅವಿವಾಹಿತಳಾಗಿದ್ದು ಮೃತಪಟ್ಟರೆ ಹನ್ನೆರಡು ವರ್ಷ ವಯಸ್ಸಿನೊಳಗೂ, ಇದಕ್ಕೆ ಮೇಲ್ಪಟ್ಟು ವಯಸ್ಸಾಗಿದ್ದೂ ಮೃತಪಟ್ಟರೆ ಸ್ವಾಮಿಯು (ಪತಿಯು) ಇಲ್ಲವಾದ್ದರಿಂದ **ಸಪಿಂಡೀಕರಣವಿಲ್ಲ.** ಇದಕ್ಕೆ ಬದಲು **ನಾರಾಯಣ ಬಲಿಯನ್ನು ಮಾಡಬೇಕು.** ೧೨ ವರ್ಷ ವಯಸ್ಸು ಪೂರ್ಣವಾಗದಿರುವ ಬ್ರಹ್ಮಚಾರಿಗಳಿಗೂ. ನಪುಂಸಕರಿಗೂ, ಪತಿತರಿಗೂ, ವ್ಯಭಿಚಾರಾದಿ ದೋಷಗಳಿಂದ ಕೆಟ್ಟ ಸ್ತ್ರೀಯರಿಗೂ, ನೈಷ್ಠಿಕ ಬ್ರಹ್ಮಚಾರಿಗಳಿಗೂ, ಯತಿಗಳಿಗೂ ಸಪಿಂಡೀಕರಣ ಮಾಡಬಾರದು. ಆದರೆ ೧೨ನೇ ದಿನದಲ್ಲಿ ನಾರಾಯಣಬಲಿಯನ್ನು ಮಾಡಬೇಕು. ನಾರಾಯಣಬಲಿಯನ್ನು ಉದ್ದೇಶಿಸಿ ಎಂಟು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು.

ಅಪೂರ್ಣ ದ್ವಾದಶಾಬ್ದಾನಾಂ ಮೃತಾನಾಂ ಬ್ರಹ್ಮಚಾರಿಣಾಂ ।
ದಾಹಾದಿ ಷೋಡಶಾಂತಂತು ನಿರ್ವರ್ತ್ಯೈವ ಯಥಾವಿಧಿ ।
ದ್ವಾದಶಾಹನಿ ಸಂಪ್ರಾಪ್ತೇ ನೈವ ಕುರ್ಯಾತ್ ಸಪಿಂಡನಂ ।
ನಾರಾಯಣಂ ಸಮುದ್ದಿಶ್ಯ ವಿಪ್ರಾನಾಷ್ಟೌತು ಭೋಜಯೇತ್ ॥

ಈ ವಚನದಂತೆಯೂ ಹನ್ನೆರಡು ವರ್ಷ ತುಂಬದಿರುವ ಮೃತ ಬ್ರಹ್ಮಚಾರಿಗಳಿಗೆ ದಹನಸಂಸ್ಕಾರದಿಂದ ಆರಂಭಿಸಿ, ಷೋಡಶ ಶ್ರಾದ್ಧಪರ್ಯಂತ ಮಾಡಿ, ಅನಂತರ ೧೨ನೇ ದಿನಸ ಪಿಂಡೀಕರಣ ಮಾಡದೆ ಎಂಟು ಜನ ಬ್ರಾಹ್ಮಣರಿಗೆ ನಾರಾಯಣನನ್ನುದ್ದೇಶಿಸಿ ಭೋಜನ ಮಾಡಿಸಬೇಕು.

ಸಹಗಮನ ಮಾಡಿದರೂ ಒಂದೇದಿನ ಸತಿಪತಿಗಳು ಮೃತಪಟ್ಟರೂ ಸ್ತ್ರೀಗೆ ಸಪಿಂಡಿಯಿಲ್ಲ. ಪತಿಗೆ ಸಪಿಂಡೀ ಮಾಡಿದಲ್ಲಿ ಪತ್ನಿಗೂ ಆದಂತೆಯೇ ಎಂದು ಕೆಲವರು ಹೇಳುವರು.

ಯಾರೂ ಇಲ್ಲದಿದ್ದರೆ ಪತ್ನಿಯು ತನ್ನ ಪತಿಗೆ ಅಮಂತ್ರಕವಾಗಿ ಸಪಿಂಡೀಕರಣವನ್ನು ಅನಂತರ ಮಾಡಬೇಕೆಂದು ಹೇಳುವರು.

ಮಕ್ಕಳಿಲ್ಲದವರಿಗೂ ವ್ಯುತ್ಕ್ರಮ (ಕ್ರಮತಪ್ಪಿ) ಮೃತಪಟ್ಟವರಿಗೂ ಸಪಿಂಡೀಕರಣವಿಲ್ಲವೆಂದು ಮತಾಂತರವಿರುವುದು. ಧರ್ಮಸಿಂಧುಕಾರರ ಮತ. ಆದರೆ ಆಚಾರದಲ್ಲಿ ಸಪಿಂಡಿಯನ್ನು ಮಾಡುವುದೇ ರೂಢಿಯಲ್ಲಿದೆ. ಆದ್ದರಿಂದ ಮಾಡದೇ ಇರುವುದು ಶಿಷ್ಟಾಚಾರದಲ್ಲಿ ಕಂಡಿಲ್ಲ.

### ಕ್ರಮತಪ್ಪಿ ಮೃತಪಟ್ಟವರಿಗೆ ಸಪಿಂಡಿ ಮಾಡುವ ವಿಧಾನ

ಮೃತೇ ಪಿತರಿ ಯಸ್ಯಾಥ ವಿದ್ಯತೇಚ ಪಿತಾಮಹಃ ।
ತೇನದೇಯಾ ಸ್ತ್ರಯಃ ಪಿಂಡಾಃ ಪ್ರಪಿತಾಮಹ ಪೂರ್ವಕಂ ॥
ತೇಭ್ಯಶ್ಚ ಪೈತೃಕಃ ನಿಯೋಕ್ತವ್ಯಸ್ತು ಪೂರ್ವವತ್ ।
ಮಾತರ್ಯಥ ಮೃತಾಯಾಂ ತು ವಿದ್ಯತೇಚ ಪಿತಾಮಹೀ ।
ಪ್ರಪಿತಾಮಹೀ ಪೂರ್ವಸ್ತು ಕಾರ್ಯಸ್ತತ್ರಾಪ್ಯಯಂ ವಿಧಿಃ ॥

1 ಯಾರ ತಂದೆಯು ಪಿತಾಮಹನಿದ್ದಂತೆಯೇ ಮೃತಪಟ್ಟಿರುವನೋ ಅವರು ಪ್ರಪಿತಾಮಹಪೂರ್ವಕ ತ್ರಿಪಿಂಡಗಳನ್ನು ದತ್ತಮಾಡಬೇಕು.

2 ಹೀಗೆಯೇ ತಾಯಿಯು ಪಿತಾಮಹಿಯಿದ್ದ ಹಾಗೆ ಮೃತಪಟ್ಟರೆ ಪ್ರಪಿತಾಮಹೀಪೂರ್ವವಾಗಿಯೇ ತ್ರಿಪಿಂಡಗಳನ್ನು ದತ್ತಮಾಡಬೇಕು.

3 ಹೀಗೆಯೇ ಪ್ರಪಿತಾಮಹ ಇರುವಾಗಲೇ ತಂದೆಯು ಮೃತಪಟ್ಟರೆ ಪ್ರಪಿತಾಮಹನ ಪಿತೃ ಮುಂತಾದವರೊಡನೆ ಸಪಿಂಡಿ ಮಾಡಬೇಕು.

4 ಪ್ರಪಿತಾಮಹಾದಿ ವರ್ಗತ್ರಯದೊಂದಿಗೆ ಪಿತೃವಿಗೆ ಸಪಿಂಡಿ ಮಾಡಿದ ಮೇಲೆ ಪಿತಾಮಹ ಮೃತಪಟ್ಟರೆ ಪುನಃ ಪಿತಾಮಹನೊಂದಿಗೆ ಪಿತೃವಿಗೆ ಸಪಿಂಡೀಕರಣ ಮಾಡಬೇಕು.

5 ಪಿತೃವಿಗೆ ಸಪಿಂಡೀಕರಣವಾಗುವ ಮೊದಲೆ ಪಿತಾಮಹ ಮೃತಪಟ್ಟರೆ ಆಗ ಪಿತಾಮಹನ ಸಪಿಂಡಿಯನ್ನು ಮಾಡಿ ಅನಂತರ ಪಿತಾಮಹಾದಿಗಳೊಂದಿಗೆ ಪಿತೃವಿನ ಸಪಿಂಡಿಯನ್ನು ಮಾಡಬೇಕು.

6 ಪಿತೃವಿನ ಮರಣಾನಂತರ ಪಿತಾಮಹ ಅಥವಾ ಪ್ರಪಿತಾಮಹನು ಮೃತಪಟ್ಟರೆ ಈ ಇಬ್ಬರ ಪುತ್ರನು ಮತ್ತೊಬ್ಬನು ಸಪಿಂಡನಾಧಿಕಾರಿಯು. ದೇಶಾಂತರದಲ್ಲಿದ್ದರೆ ಆಗ ದಹನಸಂಸ್ಕಾರದಿಂದ ಆರಂಭಿಸಿ ಏಕಾದಶಾಹ ಪರ್ಯಂತ ಮಾಡಬೇಕಾದ ಕರ್ಮಗಳನ್ನು ಮಾತ್ರ ಮಾಡಿ ನಂತರ ಸಪಿಂಡೀಕರಣವಿಲ್ಲದೆ ನಿಂತಿದ್ದರೂ ಪಿತಾಮಹ, ಪ್ರಪಿತಾಮಹರೊಡನೆ ಪಿತೃವಿಗೆ ಸಪಿಂಡಿಯನ್ನು ಮಾಡಬೇಕು.

7 ಪಿತಾಮಹ, ಪ್ರಪಿತಾಮಹ ಇಬ್ಬರಿಗೂ ಬೇರೆಬೇರೆ ಪುತ್ರರಿಲ್ಲದಿದ್ದರೆ ಪೌತ್ರನೋ. ಪ್ರಪೌತ್ರನೋ ಸಪಿಂಡಿ ಮಾಡಿದ ನಂತರವೇ ಪಿತೃವಿಗೆ ಸಪಿಂಡಿಯನ್ನು ಮಾಡಬೇಕು.

8 ಪಿತಾಮಹನಿಗೆ ಬೇರೆ ಪುತ್ರರಿಲ್ಲದಿದ್ದರೆ ಪೌತ್ರನು ಸಪಿಂಡೀಕರಣ ಷೋಡಶ ಮಾಸಿಕಗಳನ್ನು ಮಾತ್ರ ಮಾಡಬೇಕು. ಪಿತಾಮಹನ ವಾರ್ಷಿಕವನ್ನು ಅವಶ್ಯ ಮಾಡಬೇಕಾಗಿಲ್ಲ. ತನ್ನ ಇಚ್ಛೆಯಿಂದ ಪಿತಾಮಹನ ವಾರ್ಷಿಕ ಶ್ರಾದ್ಧವನ್ನು ಮಾಡಿದಲ್ಲಿ ಅತಿಶಯವಾದ ಫಲವಿರುವುದು.

9 ಪಿತೃವಿನ ದಶಾಹ ಕಾರ್ಯವನ್ನು ಮಾಡುತ್ತಿರುವಾಗಲೆ ಪುತ್ರನು ಮೃತಪಟ್ಟರೆ ಅವನ ಪುತ್ರನೇ ತಂದೆಯ ಉತ್ತರಕ್ರಿಯೆಯನ್ನು ಮುಗಿಸಿ ನಂತರ ಪಿತಾಮಹನ ಉತ್ತರಕ್ರಿಯೆಯನ್ನು ಪುನಃ ಎಲ್ಲವನ್ನೂ ಆವೃತ್ತಿಯಂತೆ ಮಾಡಬೇಕು. ದಶಾಹವು ಮುಗಿದಿದ್ದರೆ ಪುನಃ ಮಾಡಬೇಕಾಗಿಲ್ಲ. ಬೇರೆ

ಪುತ್ರರಿಲ್ಲದಿದ್ದರೆ ಪಿತಾಮಹನ ಸಪಿಂಡಿಯಾದ ನಂತರ ಪಿತೃವಿಗೆ ಸಪಿಂಡಿಯನ್ನು ಆಚರಿಸಬೇಕೆಂದು ಹಿಂದೆ ತಿಳಿಸಿದೆ,

10 ತಂದೆಯು ಅಶಕ್ತನಾದರೆ ತಂದೆಯ ಅನುಜ್ಞೆಯನ್ನು ತೆಗೆದುಕೊಂಡು ಪೌತ್ರನು ಪಿತಾಮಹನ ದಶಾಹಕರ್ಮಗಳನ್ನು ಆರಂಭಿಸಿದ್ದು ಅನಂತರ ಪಿತೃವು ಮೃತಪಟ್ಟರೆ ಪಿತೃವಿನ ಅಶೌಚದಲ್ಲಿದ್ದ ಹಾಗೆಯೇ ಪೌತ್ರನು ಪಿತಾಮಹನ ಉತ್ತರಕ್ರಿಯೆಯನ್ನು ಮಾಡಬೇಕು, ಕಾರಣ–ಮೊದಲೇ ಆರಂಬಿಸಿದ್ದರಿಂದ. ಈ ನಡುವೆ ತಂದೆಯ ದಶಾಹಕರ್ಮವೂ ಒದಗಿದೆಯಾದ್ದರಿಂದ ಇದನ್ನು ಆಚರಿಸಬೇಕು.

## ಸ್ತ್ರೀಯರ ವಿಷಯದಲ್ಲಿ ಸಪಿಂಡಿಯನ್ನು ಆಚರಿಸುವ ವಿಧಾನ

1 " ಪಿತಾಮಹ್ಯಾದಿಭಿಃಸಾರ್ಧಂ ಮಾತರಂತು ಸಪಿಂಡಯೇತ್ । ಎಂಬ ವಚನದಂತೆ ಪಿತಾಮಹಿ ಮೊದಲಾದವರೊಂದಿಗೆ ಸೇರಿಸಿ ಸಪಿಂಡಿಯನ್ನು ಮಾಡಬೇಕು,

2 ದೌಹಿತ್ರನು ಸಪಿಂಡಿಯನ್ನು ಮಾಡುವುದಾದರೆ ಮಾತಾಮಹನೊಂದಿಗೆ ಸಪಿಂಡಿಯನ್ನು ಮಾಡಬೇಕೆಂದು ಕೆಲವರ ಮತ.

3 ಪಿತೃಮರಣಾನಂತರ ಮಾತೃ ಮೃತಪಟ್ಟರೆ ಪಿತೃವಿನೊಂದಿಗೆ ಮಾತೃವಿನ ಸಪಿಂಡಿಯನ್ನು ಮಾಡಬೇಕೆಂದು ಕೆಲವರ ಮತ.

4 ಯಾರೊಂದಿಗಾದರೂ ಸಪಿಂಡಿಯನ್ನು ಆಚರಿಸದಿದ್ದರೂ ಪ್ರತಿವಾರ್ಷಿಕ ಮುಂತಾದ ಶ್ರಾದ್ಧಗಳಲ್ಲಿ ಪಿತಾಮಹಿ ಮುಂತಾದವರೊಂದಿಗೆ ಸೇರಿಸಿಯೇ ಮಾತೃವಿನ ಪಾರ್ವಣಶ್ರಾದ್ಧವನ್ನು ಆಚರಿಸಬೇಕು.

ಈ ಸಪಿಂಡೀಕರಣವು ಪಾರ್ವಣ ಮತ್ತು ಏಕೋದ್ದಿಷ್ಟರೂಪವುಳ್ಳದು. ಪಿತಾಮಹಾದಿ ತ್ರಯಕ್ಕಾಗಿ ಮೂರು ಜನ ಬ್ರಾಹ್ಮಣರು, ಅವಶ್ಯ. ಪ್ರೇತ

ಕ್ಕಾಗಿ ಒಬ್ಬ ಬ್ರಾಹ್ಮಣ ಬೇಕು. ವಿಶ್ವೇದೇವಾರ್ಥ ಇಬ್ಬರು ಬ್ರಾಹ್ಮಣರು ಬೇಕು. ಪಿತಾಮಹಾದಿ ತ್ರಯವನ್ನು ಉದ್ದೇಶಿಸಿ ಮೂರು ಪಿಂಡ, ಮೂರು ಅರ್ಘ್ಯ, ಪ್ರೇತಕ್ಕಾಗಿ ಒಂದು ಪಿಂಡ, ಒಂದು ಅರ್ಘ್ಯ. ಅಥವಾ ಪಾರ್ವಣ ಕ್ಕಾಗಿ ಒಬ್ಬ ಬ್ರಾಹ್ಮಣ, ಪ್ರೇತಕ್ಕಾಗಿ ಒಬ್ಬ, ವಿಶ್ವೇದೇವರಿಗಾಗಿ ಒಬ್ಬ. ಹೀಗೆ ಮೂರು ಜನ ಬ್ರಾಹ್ಮಣರಾದರೂ ಅವಶ್ಯ, **ವಿಶ್ವೇದೇವರು ಕಾಮ ಕಾಲವೆಂಬ ಹೆಸರಿನವರು.**

ಪ್ರೇತವಾದ ಪಿತ್ರಾದಿಗಳ ಅರ್ಘ್ಯಪಾತ್ರವನ್ನು ಪಿತಾಮಹಾದಿಗಳ ಅರ್ಘ್ಯಪಾತ್ರತ್ರಯದಲ್ಲಿ ಯೋಜಿಸಬೇಕು. ಇದೇರೀತಿ ಪ್ರೇತಪಿಂಡವನ್ನು ಪಿತಾಮಹಾದಿ ಪಿಂಡತ್ರಯದಲ್ಲಿ (3ರಲ್ಲಿ) ಸೇರಿಸಬೇಕು. ಪಿತೃಸ್ಥಾನದ ಬ್ರಾಹ್ಮಣನ ಹಸ್ತದಲ್ಲಿ ಹೋಮಮಾಡಬೇಕು. ಇದು ಸಾಗ್ನಿಕನಿಗೂ ವಿಹಿತ. **ಸಪಿಂಡೀಕರಣ ಶ್ರಾದ್ಧವನ್ನು ಅನ್ನದಿಂದಲೇ ಮಾಡಬೇಕು.**

ಷರಾ—ಬ್ರಾಹ್ಮಣರು ಸಿಕ್ಕದಿದ್ದರೆ ಅನ್ನದಿಂದಲೇ ಚಟಕಶ್ರಾದ್ಧವನ್ನು ಮಾಡಬೇಕಕು ಈಗ ಇದೇ ರೂಢಿಯಲ್ಲಿದೆ, ಪ್ರತಿ ತಿಂಗಳ ಮಾಸಿಕಗಳನ್ನು ಅನ್ನದಿಂದಲೇ ಮಾಡಬೇಕು.

ಪ್ರೇತಃಸಪಿಂಡನಾದೂರ್ಧ್ವಂ ಪಿತೃಲೋಕಂ ಸಗಚ್ಛತಿ !
ಕುರ್ಯಾತ್ತಸ್ಯಚ ಪಾಥೇಯಂ ದ್ವಿತೀಯೇಽಹ್ನಿ ಸಪಿಂಡನಾತ್ ॥

## ಪಾಥೇಯ ಶ್ರಾದ್ಧ

ಪ್ರೇತವು ಸಪಿಂಡಿಕರಣವಾದ ಮೇಲೆ ಪಿತೃಲೋಕಕ್ಕೆ ಹೋಗುವುದು. ಆದ್ದರಿಂದ ಸಪಿಂಡಿಯಾದ ಮರುದಿನ ಆಪ್ರೇತವನ್ನು ಉದ್ದೇಶಿಸಿ **ಪಾಥೇಯ ಶ್ರಾದ್ಧವನ್ನು 13ನೇ ದಿನ ಮಾಡಬೇಕು.** ಅನಂತರ ಪುಣ್ಯಾಹವನ್ನು ಮಾಡಿಕೊಂಡು ವರ್ಷಪರ್ಯಂತರ ಪ್ರತಿನಿತ್ಯ ಉದಕುಂಭ ಶ್ರಾದ್ಧವನ್ನು ಮಾಡಬೇಕು. ಅಶಕ್ತರು ಮಾಸಿಕಶ್ರಾದ್ಧದಲ್ಲಿ ಉದಕುಂಭವನ್ನು (ನೀರು ತುಂಬಿದ ತಂಬಿಗೆಯನ್ನು) ದಾನಮಾಡಬೇಕು.

ಸಪಿಂಡಿಯಾದ ನಂತರ ಅನುಮಾಸಿಕಗಳನ್ನು ಪಾರ್ವಣವಿಧಿಯಂತೆ ಆಚರಿಸಬೇಕು. ಉಪನಯನ, ವಿವಾಹಾದಿಗಳು ಕರ್ತವ್ಯವಾಗಿ ಬಂದಲ್ಲಿ ಅವುಗಳನ್ನು ಪುನಃ ಅಪಕರ್ಷ ಮಾಡಬೇಕು. ಈ ಅಪಕರ್ಷವು ನಾಲ್ಕುಬಗೆ ತಲೆಮಾರಿನ (ಚತುಃಪುರುಷರ) ಜ್ಞಾತಿಗಳಲ್ಲೇ ಕರ್ತವ್ಯವು. ಚತುಃಪುರುಷ ಗಣನೆಯು ಕ್ರಮವನ್ನು ಹಿಂದೆ ತಿಳಿಸಿದೆ.

ಈರೀತಿಯಾಗಿ ವರ್ಷಪರ್ಯಂತರ ಮಾಸಿಕಗಳನ್ನು ಮಾಡಿ ವರ್ಷದ ಕೊನೆಯಲ್ಲಿ ಅಬ್ದವಿಮೋಕಶ್ರಾದ್ಧವನ್ನು (ವರ್ಷಾಂತಿಕವನ್ನು) ಮಾಡಬೇಕು. ಅದನ್ನು ಪಾರ್ವಣವಿಧಿಯಂತೆ ಮಾಡಬೇಕು. ಇದಕ್ಕೆ ಅಬ್ದಪೂರ್ತಿಶ್ರಾದ್ಧ ಎಂದೂ ಹೆಸರಿದೆ.

2 ಇದರಲ್ಲಿ ತಿಲತರ್ಪಣವನ್ನು ಮಾಡಬಾರದು –

ವೃದ್ಧಿಶ್ರಾದ್ಧೇ ಸಪಿಂಡ್ಯಾಂಚ ಪ್ರೇತಶ್ರಾದ್ಧೇಽನುಮಾಸಿಕೇ ।
ಸಂವತ್ಸರವಿಮೋಕೇಚ ನಕುರ್ಯಾತ್ ತಿಲತರ್ಪಣಂ ॥

ವೃದ್ಧಿಶ್ರಾದ್ಧವೆನ್ನುವ ನಾಂದಿಶ್ರಾದ್ಧದಲ್ಲೂ, ಸಪಿಂಡೀಕರಣದಲ್ಲೂ, ಅನುಮಾಸಿಕಶ್ರಾದ್ಧದಲ್ಲೂ, ಈ ಅಬ್ದಿಕಶ್ರಾದ್ಧದಲ್ಲೂ, ತಿಲತರ್ಪಣ ಮಾಡ ಬಾರದೆಂದು ಈ ವಚನದ ಅರ್ಥ.

3 ಈ ಅಬ್ದವಿಮೋಕವು ಊನಾಬ್ದಿಕಾಂತ ಷೋಡಶ ಮಾಸಿಕಗಳಿಗಿಂತ ಭಿನ್ನವಾದದ್ದು. ಆದರಿಂದ ಪ್ರೇತಶ್ರಾದ್ಧವಲ್ಲವಾದ್ದರಿಂದ ಇದಕ್ಕೆ ಅಭ್ಯುದಯ ನಾಂದಿಯು ಒದಗಿದಾಗಲೂ ಅಪಕರ್ಷವಿಲ್ಲ.

ವರ್ಷಾಂತ್ಯದಿನದಲ್ಲಿ ಶಕ್ತರಾದವರು ಭೂರಿಭೋಜನ ಮಾಡಿಸಬಹುದು. ಬೇಕು ಎಂದು ಭಟ್ಟರ ಮತ. (ಅಂತ್ಯೇಷ್ಟಿಪದ್ಧತಿಯಲ್ಲಿ)

ಜೀವತೋ ವಾಕ್ಯಕರಣಾತ್ ಪ್ರತ್ಯಬ್ದಂ ಭೂರಿಭೋಜನಾತ್ ।
ಗಯಾಯಾಂ ಪಿಂಡದಾನಾಚ್ಚ ತ್ರಿಭಿಃ ಪುತ್ರಸ್ಯ ಪುತ್ರತಾ ॥

ಈ ವಚನದಂತೆ ಈ ಭೂರಿಭೋಜನವು ಪ್ರತ್ಯಾಬ್ದಿಕ ಶ್ರಾದ್ಧಕ್ಕೆ ಬೇರ್ಪಟ್ಟಿದೆ, ಬಹುಜನ ಬ್ರಾಹ್ಮಣರ ಭೋಜನವಿದು. 'ಶ್ರಾದ್ಧೇ ಕುರ್ಯಾನ್ನ ವಿಸ್ತರಮ್' ಎಂದು ವಿಸ್ತಾರಕೂಡದೆಂಬ ನಿಷೇಧವು ಶ್ರಾದ್ಧಕ್ಕೆ ಮಾತ್ರ.

## ಶಾತಾತಪಃ—ಪುನಃ ಕ್ರಮಸಾಪಿಂಡ್ಯ ವಿಧಾನ

ವ್ಯುತ್ಕ್ರಮೇಣ ಕೃತಂ ಶ್ರಾದ್ಧಂ ಸಪಿಂಡೀಕರಣಂ ಚ ಯತ್ ।
ಕ್ರಮಸಾಪಿಂಡನಂ ಕಾರ್ಯಂ ಪ್ರೇತಶಬ್ದಾದಿಕಂ ವಿನಾ ।
ಮೃತೇ ಪಿತರಿ ಯಸ್ಯಾಥ ವಿದ್ಯತೇ ಚ ಪಿತಾಮಹಃ ।
ವ್ಯುತ್ಕ್ರಮೇಣೈವ ಕರ್ತವ್ಯಂ ಸಪಿಂಡೀಕರಣಂ ತಥಾ ॥

ಎಂಬ ವಚನದಂತೆ ಪಿತಾಮಹ ಬದುಕಿದ್ದಂತೆ ತಂದೆಯು ಮೃತಪಟ್ಟರೆ ವ್ಯುತ್ಕ್ರಮವಾಗಿ ಸಪಿಂಡಿಯನ್ನು ಮಾಡಬೇಕು. ಇದನ್ನು ಮಾಡಿದಮೇಲೆ ಪಿತಾಮಹನು ಮೃತಪಟ್ಟರೆ ಆ ಕರ್ತೃಕಾಲದಲ್ಲಿ ಆತನ ಸಪಿಂಡೀಕರಣವಾದ ಮೇಲೆ ಕರ್ತೃವಿನ ಪಿತೃಶ್ರಾದ್ಧದಿನಕ್ಕೆ ಮೊದಲು ವ್ಯುತ್ಕ್ರಮಣ ಸಪಿಂಡೀಯಾಗಿದ್ದ ಪಿತಾಮಹನಿಗೆ ಕ್ರಮಸಾಪಿಂಡ್ಯವು ಸಿದ್ಧಿಸಲು ಕ್ರಮವಾಗಿ ಪುನಃ ಸಪಿಂಡೀಕರಣವಾಗಬೇಕು. ಆದರೆ ಪ್ರೇತಶಬ್ದವಿಲ್ಲದೆ ಕ್ರಮಸಾಪಿಂಡ್ಯವನ್ನು ಮಾಡಿ ಅಲ್ಲಿಂದ ಆಚೆಗೆ ಪಿತೃ-ಪಿತಾಮಹ-ಪ್ರಪಿತಾಮಹವೆಂಬ ಈ ಕ್ರಮದ ವರ್ಗತ್ರಯವನ್ನು ಉದ್ದೇಶಿಸಿ ಪ್ರತ್ಯಾಬ್ದಿಕ ಶ್ರಾದ್ಧವನ್ನು ಮಾಡಬೇಕು.

## ಕ್ರಮಸಾಪಿಂಡ್ಯವಿಧಾನಕ್ಕೆ ಸಂಕಲ್ಪವಿಧಾನ

ದೇಶಕಾಲೌ ಸಂಕೀರ್ತ್ಯ, ಪಿತುಃ ಸಪಿಂಡೀಕರಣಕಾಲೇ ಪಿತಾಮಹಸ್ಯ ಜೀವದ್ದಶತ್ವೇ ವ್ಯುತ್ಕ್ರಮ ಸಪಿಂಡೀಕರಣಸ್ಯ ಅನುಷ್ಠಿತತ್ವಾತ್ ಇದಾನೀಂ

ಮೃತಸ್ಯ ಪಿತಾಮಹಸ್ಯ ಅನುಕ್ರಮೇಣ ಪಿತುಃ ತತ್ಪಿತ್ರಾದಿ ಸಾಪಿಂಡ್ಯ ಸಿದ್ಧ್ಯರ್ಥಂ ಅಸ್ಮದ್ಪಿತುಃ - ಗೋತ್ರಸ್ಯ - ಶರ್ಮಣಃ ವಸುರೂಪಸ್ಯ ಅಸ್ಮತ್ಪಿತಾಮಹ - ಪ್ರಪಿತಾಮಹ - ಪ್ರಪ್ರಪಿತಾಮಹ್ಯೈಃ - ಗೋತ್ರೈಃ -- ಶರ್ಮಭಿಃ ವಸುರುದ್ರಾದಿತ್ಯ ರೂಪೈಃ ಸಹ ಸಮಾನೋದಕ ಸಾಪಿಂಡ್ಯ ಸಿದ್ಧ್ಯರ್ಥಂ, ಪಿತುಃ ಗೋತ್ರಸ್ಯ - ಶರ್ಮಣಃ - ವಸುರೂಪಸ್ಯ ಏಕೋದ್ದಿಷ್ಟ ವಿಧಾನೇನ ಪಿತಾಮಹ - ಪ್ರಪಿತಾಮಹ - ಪ್ರಪ್ರಪಿತಾಮಹಾನಾಂ ಗೋತ್ರಾಣಾಂ - ಶರ್ಮಣಾಂ ವಸುರುದ್ರಾದಿತ್ಯರೂಪಾಣಾಂ ಪಾರ್ವಣ ವಿಧಾನೇನ ಚ, ಕಾಲಕಾಮಕ ವಿಶ್ವೇದೇವಪೂರ್ವಕಂ ವಿಷ್ಣ್ವಂತಂ – ಇತ್ಥಂ ಪಾರ್ವಣೈಕೋದ್ದಿಷ್ಟೋಭಯಾತ್ಮಕಂ ಅಸ್ಮತ್ಪಿತುಃ ಕ್ರಮಸಪಿಂಡೀಕರಣ ಶ್ರಾದ್ಧಂ, ಅನ್ನಾದಿದ್ರವ್ಯೇಣ ಅದ್ಯ ಕರಿಷ್ಯೇ— ಇತಿ ಸಂಕಲ್ಪಃ.

ಅರ್ಘ್ಯಸಂಯೋಜನ, ಪಿಂಡಸಂಯೋಜನ ಇತ್ಯಾದಿ ಎಲ್ಲವನ್ನೂ ಪ್ರೇತಶಬ್ದವನ್ನು ಉಚ್ಚರಿಸದೆ ಹಿಂದಿನಂತೆ ಯಥಾವಿಧಿ ಮಾಡಬೇಕು. ಈ ವಿಚಾರವೆಲ್ಲವೂ ಆಪಸ್ತಂಬ ಯಲ್ಲಾಜೀಯದಂತೆ ತಿಳಿಸಲ್ಪಟ್ಟಿದೆ.

## ಪಿಂಡಸಂಯೋಜನ ವಿಷಯದಲ್ಲಿ ವಿಶೇಷ

1 ಪುತ್ರರಿಲ್ಲದ ಸ್ತ್ರೀಯು ಮೃತಪಟ್ಟರೆ ಪತಿಯು ಶ್ವಶ್ರು ಮುಂತಾದವರೊಂದಿಗೆ ಸೇರಿಸಿ ಸಪಿಂಡೀಕರಣ ಮಾಡಬೇಕು. ಪುತ್ರರಿಲ್ಲದ ಸ್ತ್ರೀಯು ಪಿಂಡವನ್ನು ಮೊದಲೇ ಮೃತಪಟ್ಟ ಪತಿಯೊಂದಿಗೆ ಸೇರಿಸಬೇಕು.

2 ಪುತ್ರವತಿಯಾದ ಸ್ತ್ರೀಯ ಪಿಂಡವನ್ನು ಪಿತಾಮಹಿ ಮೊದಲಾದವರೊಂದಿಗೆ ಸೇರಿಸಬೇಕು, ಮಾತೃವಿಗೆ ಪಿತೃವಿನೊಂದಿಗೆ ಸೇರಿ ಸಪಿಂಡೀಕರಣವಾಗಬೇಕು.

ವಚನ. –

## ಮೃತಪಟ್ಟ ಪ್ರಥಮವರ್ಷದಲ್ಲಿ ವರ್ಜ್ಯವಾದವು

1 ಮಾತಾಪಿತೃಗಳು ಮೃತಿಹೊಂದಿದ ಪ್ರಥಮ ವರ್ಷ ಪುತ್ರರು ಪರಾನ್ನವನ್ನು ವರ್ಷಪರ್ಯಂತ ವರ್ಜಿಸಬೇಕು. ಅಲ್ಲದೆ ಹೂಮಾಲಿಕೆ, ಗಂಧದ್ರವ್ಯ ಸೇವನೆ, ಸ್ತ್ರೀಸಂಗ, ಅಭ್ಯಂಗಸ್ನಾನವನ್ನು ವರ್ಜಿಸಬೇಕು. ಆದರೆ ಋತುಕಾಲದಲ್ಲಿ ವಿಹಿತವಾದ ಭಾರ್ಯಾಸಂಗವನ್ನು ಮಾಡಬಹುದು. ' ಋತೌಭಾರ್ಯಾಮುಪೇಯಾತ್ " ಎಂಬುದೇ ಶಾಸ್ತ್ರ.

2 ಆರ್ತ್ವಿಜ್ಯ, ಲಕ್ಷಹೋಮ, ಮಹಾದಾನಾದಿ ಕಾಮ್ಯಕರ್ಮಗಳು ತೀರ್ಥಯಾತ್ರೆ, ವಿವಾಹ, ನಾಂದಿಯಿರುವ ಕರ್ಮಗಳು, ಶಿವಪೂಜೆ ಇವೂ ಸಹ ವರ್ಜ್ಯವಾಗಿವೆ. ಆದರೆ ಸಂಧ್ಯಾವಂದನೆ, ದೇವರಪೂಜೆ. ಪಂಚ ಮಹಾಯಜ್ಞ, ವೈಶ್ವದೇವ ಇವುಗಳನ್ನು ವರ್ಜಿಸಬಾರದು.

ಇದಕ್ಕೆ ಹೇಳಿದ ವಚನಗಳು —

ಪ್ರಮೀತೌ ಪಿತರೌಯಸ್ಯ ದೇಹಸ್ತಸ್ಯಾಶುಚಿರ್ಭವೇತ್ ।
ನ ದೈವಂ ನಾಪಿಪಿತ್ರ್ಯಂ ವಾ ಯಾವತ್ ಪೂರ್ಣೋ ನವತ್ಸರಃ ।
ಮಹಾತೀರ್ಥಸ್ಯಗಮನಂ ಉಪವಾಸವ್ರತಾನಿಚ ।
ಸಪಿಂಡೀಶ್ರಾದ್ಧ ಮನ್ಯೇಷಾಂ ವರ್ಜಯೇದ್ವತ್ಸರಂ ಬುಧಃ ॥

ಇವಕ್ಕೆ ಅಪವಾದಶಾಸ್ತ್ರ ಹೀಗಿದೆ—

ಪತ್ನೀಪುತ್ರಸ್ತಥಾಪೌತ್ರಃ ಭ್ರಾತಾ ತತ್ತನಯಃ ಸ್ನುಷಾ ।
ಮಾತಾಪಿತ್ರವ್ಯಶ್ಚೈತೇಷಾಂ ಮಹಾಗುರುನಿಪಾತನೇ ।
ಕುರ್ಯಾತ್ ಸಪಿಂಡನಶ್ರಾದ್ಧಂ ನಾನ್ಯೇಷಾಂ ತು ಕದಾಚನ ।
ಏಕಾದಶಾಹ ಪರ್ಯಂತಂ ಪ್ರೇತಶ್ರಾದ್ಧಂ ಚರೇತ್ಸದಾ ।
ಪಿತ್ರೋರ್ಮೃತೌಚ ನಾನ್ಯೇಷಾಂ ಕುರ್ಯಾಚ್ಛ್ರಾದ್ಧಂಚ ಪಾರ್ವಣಂ।
ಗಯಾಶ್ರಾದ್ಧಂ ಮೃತಾನಾಂತು ಪೂರ್ಣೇತ್ವಬ್ದೇ ಪ್ರಶಸ್ಯತೇ ॥

ಗಾರುಡೇ –

ತೀರ್ಥಶ್ರಾದ್ಧಂ ಗಯಾಶ್ರಾದ್ಧಂ ಶ್ರಾದ್ಧಮನ್ಯಚ್ಚ ಪೈತೃಕಂ ।
ಅಬ್ದಮಧ್ಯೇ ನ ಕುರ್ವೀತ ಮಹಾಗುರು ವಿಪತ್ತಿಷು ॥

ಎಂದು ವಿಶೇಷವಚನಗಳಂತೆ ಹೆಂಡತಿ, ಪುತ್ರ, ಪೌತ್ರ, ಸಹೋದರ, ಅವನ ಮಗ, ಸೊಸೆ, ತಾಯಿ, ದೊಡ್ಡಪ್ಪ, ಚಿಕ್ಕಪ್ಪ—ಇವರಿಗೂ ಮಹಾಗುರುವು ಮೃತಪಟ್ಟರೆ ಅವರಿಗೂ ಸಹ ಸಪಿಂಡೀಕರಣವನ್ನು ಮಾಡಬೇಕು, ಇವರನ್ನು ಬಿಟ್ಟು ಬೇರೆಯವರಿಗೆ ಸಪಿಂಡಿಯನ್ನು ಮಾಡಬಾರದು.

ಆದರೆ ಮೊದಲಿಗೆ ಏಕಾದಶಾಹಾಂತವಾದ ಪ್ರೇತಶ್ರಾದ್ಧವನ್ನು ಮಾಡಬಹುದು. ತಂದೆತಾಯಿಗಳು ಮೃತಪಟ್ಟರೆ ಇವರನ್ನು ಬಿಟ್ಟು ಮತ್ತೊಬ್ಬರಿಗೆ ಪಾರ್ವಣಶ್ರಾದ್ಧವನ್ನು ಪ್ರಥಮವರ್ಷ ಮಾಡಬಾರದು. ಗಯಾಶ್ರಾದ್ಧವನ್ನು ವರ್ಷವು ಪೂರ್ಣವಾದ ಮೇಲೆ ಮಾಡುವುದು ಪ್ರಶಸ್ತ. ವರ್ಷಮಧ್ಯದಲ್ಲಿ ತೀರ್ಥಶ್ರಾದ್ಧ. ಗಯಾಶ್ರಾದ್ಧ, ಬೇರೆ ಪಿತೃಕಾರ್ಯ ಇವುಗಳನ್ನು ಮಹಾಗುರುವು ಮೃತಪಟ್ಟಾಗಲೂ ಮಾಡಬಾರದೆಂದು ತಿಳಿಯಬೇಕು.

ಪರಾ —ಈ ನಿಷೇಧಗಳೆಲ್ಲಾ ವರ್ಷದ ಕೊನೆಯಲ್ಲಿ ಸಪಿಂಡಿ ಮಾಡುವ ಪಕ್ಷದಲ್ಲೇ ಹೊರತು ದ್ವಾದಶಾಹದಲ್ಲಿ ಸಪಿಂಡಿಮಾಡುವ ಪಕ್ಷದಲ್ಲಿ ಇಲ್ಲ ಎಂದು ಮತಭೇದವಿದೆ.

ಆದರೆ ಒಂದು ವ್ಯವಸ್ಥೆ ಇದೆ.—ನಾಂದಿ ಮಾಡುವ ಪ್ರಸಂಗವಿಲ್ಲದೆ ತನ್ನ ಇಚ್ಛೆಯಿಂದ ಮೊದಲೇ ೧೨ ದಿನ ಸಪಿಂಡಿಯನ್ನು ಅಪಕರ್ಷಮಾಡಿದಲ್ಲಿ ಪ್ರೇತತ್ವನಿವೃತ್ತಿಯು ವರ್ಷದ ಕೊನೆಯಲ್ಲಿ ಆಗುವುದು.

ಕೃತೇ ಸಪಿಂಡಿಕರಣೇ ನರಃ ಸಂವತ್ಸರಾತ್ ಪರಂ ।
ಪ್ರೇತದೇಹಂ ಪರಿತ್ಯಜ್ಯ ಭೋಗದೇಹಂ ಪ್ರಪದ್ಯತೇ ॥

ಎಂಬ ವಚನವಿದೆ. ಆದ್ದರಿಂದ ಸಪಿಂಡಿಯಾಗಿದ್ದರೂ ನಾಂದಿಯಿರುವ ಕಾಲ ಉಪನಯನ ವಿವಾಹಾದಿಗಳಲ್ಲಿ ಅಧಿಕಾರವಿರುವುದಿಲ್ಲ. ವೃದ್ಧಿನಿಮಿತ್ತವಾಗಿ

(ಮಂಗಳಕಾರ್ಯಕ್ಕಾಗಿ) ಅಪಕರ್ಷ ಮಾಡಿದ್ದರೆ ವೃದ್ಧಿಕಾರ್ಯಗಳಲ್ಲಿ ಅಧಿಕಾರ ಬರುವುದು, ಇದೇ ವ್ಯವಸ್ಥೆಯು. ಇದರಿಂದ ಆಪತ್ತು ಮುಂತಾದ ಕಾಲದಲ್ಲಿ ತಂದೆಯು ಮೃತಪಟ್ಟಿರುವ ಮಕ್ಕಳ ವಿಷಯದಲ್ಲಿ ತಂದೆತಾಯಿಗಳು ಮೃತಪಟ್ಟ ಪುತ್ರನೂ ಕೂಡ ತನ್ನ ಮಕ್ಕಳ ಜಾತಕರ್ಮ ನಾಮಕರಣ ಚೌಲಾದಿ ಸಂಸ್ಕಾರಗಳನ್ನು ಪ್ರಥಮವರ್ಷದಲ್ಲೂ ಮಾಡಬಹುದೆಂದು ಕಾಲತತ್ತ್ವನಿರ್ಣಯದಂತೆ ಸಿಂಧುಕಾರನು ಹೇಳಿರುವನು.

## ಧನಿಷ್ಠಾಪಂಚಕ ತ್ರಿಪಾದಿನಕ್ಷತ್ರಗಳಲ್ಲಿ ಮೃತಪಟ್ಟರೆ

1 ಧನಿಷ್ಠಾಪಂಚಕ ಎಂದರೆ ಧನಿಷ್ಠಾನಕ್ಷತ್ರದ ಉತ್ತರಾರ್ಧದಿಂದ ಆರಂಭಿಸಿ ರೇವತಿನಕ್ಷತ್ರಪರ್ಯಂತ ಇರುವ ನಕ್ಷತ್ರಗಳು. ಧನಿಷ್ಠಾ, ಅರ್ಧ ಶತತಾರೆ, ಪೂರ್ವಾಭಾದ್ರ, ಉತ್ತರಾಭಾದ್ರ, ರೇವತಿ (೫). ತ್ರಿಪಾದಿ ನಕ್ಷತ್ರಗಳು - ಪುನರ್ವಸು, ಉತ್ತರಾಷಾಢ, ಕೃತ್ತಿಕಾ, ಉತ್ತರೆ, ಪೂರ್ವಾಭಾದ್ರ, ವಿಶಾಖ, ಈ ಆರು ನಕ್ಷತ್ರಗಳು.

2 ಈ ಧನಿಷ್ಠಾನಕ್ಷತ್ರದಲ್ಲಿ ಮೃತಪಟ್ಟರೆ ನೇರಾ ದಹನವನ್ನು ನಿಷೇಧಿಸಿದೆಯಾದ್ದರಿಂದ ದರ್ಭೆಯಿಂದ ಮಾಡಿದ ಪುತ್ಥಳಿಗಳನ್ನು ಗೋಧಿಹಿಟ್ಟಿನಿಂದ ಲೇಪಮಾಡಿ ಐದು ಉಣ್ಣೆಯ ದಾರಗಳಿಂದ ಸುತ್ತಿ ಇದರೊಂದಿಗೆ ಶವವನ್ನು ದಹಿಸಬೇಕು. ಇದರ ವಿಧಿಯನ್ನು ಪ್ರಯೋಗ ನೋಡಿ ಮಾಡಬೇಕು.

3 ಸೂತಕವು ತೀರಿದ ನಂತರ ಕೊನೆಯಲ್ಲಿ ತಿಲ, ಚಿನ್ನ, ಆಜ್ಯ-ಇವುಗಳನ್ನು ದಾನಮಾಡಿ, ಕಂಚಿನ ಪಾತ್ರೆಯಲ್ಲಿ ತೈಲವನ್ನು ಹಾಕಿ ಅದರಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಬ್ರಾಹ್ಮಣನಿಗೆ ದಾನಮಾಡಬೇಕು. ಶಾಂತಿಯನ್ನು ಮಾಡಬೇಕು.

4 ಬೇರೆ ನಕ್ಷತ್ರಗಳಲ್ಲಿ ಮೃತಪಟ್ಟವರಿಗೆ ಪಂಚಕದಲ್ಲಿ ದಹನಮಾಡ ಬೇಕಾಗಿ ಬಂದರೆ ಪುತ್ತಲಿವಿಧಿಯನ್ನೇ ಮಾಡಬೇಕು. ಶಾಂತಿ ಬೇಕಿಲ್ಲ.

5 ಪಂಚಕದಲ್ಲಿ ಮೃತನಾಗಿದ್ದವನಿಗೆ ಅಶ್ವಿನೀನಕ್ಷತ್ರದಲ್ಲಿ ದಹನ ಮಾಡಬೇಕಾಗಿ ಬಂದಗೆ ಶಾಂತಿಯನ್ನೇ ಮಾಡಬೇಕು, ಈ ಪುತ್ತಲೀವಿಧಿ ಬೇಕಿಲ್ಲ.

6 ರುದ್ರಜಪ, ಲಕ್ಷಹೋಮ ಈ ಎರಡರಲ್ಲಿ ಒಂದು ಶಾಂತಿ ಮಾಡ ಬೇಕು. ಅಥವಾ ಕುಂಭದಲ್ಲಿ ಯಮನ ಪ್ರತಿಮೆಯನ್ನು ಆವಾಹನೆ ಮಾಡಿ ಪೂಜಿಸಿ. ಅಗ್ನಿಪ್ರತಿಷ್ಠಾಪನೆ ಮಾಡಿಕೊಂಡು ಅನ್ವಾಧಾನಾದಿ ಚರುಶ್ರಪ ಣಾಂತ ಕಾರ್ಯವನ್ನು ಮಾಡಿ. ಆಜ್ಯಭಾಗಾಂತದಲ್ಲಿ ೧೪ ಯಮಾದಿನಾಮ ಗಳಿಂದ ೧೪ ಹೋಮಮಾಡಿ, ಹೋಮಶೇಷವನ್ನು ಮುಗಿಸಿ, ಕಪ್ಪು ಹಸುವನ್ನು, ಕಪ್ಪುಬಟ್ಟೆಯನ್ನು ಹೊದಿಸಿ ಸುವರ್ಣದಕ್ಷಿಣಾಸಹಿತ ದಾನ ಮಾಡಬೇಕು, ಅಶಕ್ತರು ಇದರ ಪ್ರತ್ಯಾಮ್ನಾಯ ದಕ್ಷಿಣಾದಾನ ಮಾಡ ಬೇಕು.

ಇದೇರೀತಿ ತ್ರಿಪಾದಿ ನಕ್ಷತ್ರದಲ್ಲಿ ಮೃತಪಟ್ಟರೂ ಶಾಂತಿ ಮಾಡ ಬೇಕು. ತ್ರಿಪುಷ್ಕರ. ದ್ವಿಪುಷ್ಕರಯೋಗವಿದ್ದು ಮೃತಪಟ್ಟರೂ ಕೃಚ್ಛ್ರ ತ್ರಯಾಚರಣೆ ಪ್ರಾಯಶ್ಚಿತ್ತ ಮಾಡಿ, ಗೋಧಿಹಿಟ್ಟಿನ ಪುತ್ತಲಿಗಳನ್ನು ಮೂರನ್ನು ಮಾಡಿ ಅದರೊಂದಿಗೆ ಪ್ರೇತದಹನವನ್ನು ಮಾಡಬೇಕು. ಸೂತಕದ ಕೊನೆಯಲ್ಲಿ ಶಾಂತಿಯನ್ನು ಮಾಡಬೇಕು. ಇದರಿಂದ ಮಂಗಳ ವುಂಟಾಗುವುದು.

ಖನನ ಮಾಡಿದರೂ ತದ್ದೋಷಶಾಂತಿಗಾಗಿ ಸುವರ್ಣ ದಕ್ಷಿಣೆ, ಕಪ್ಪು ವಸ್ತ್ರವನ್ನು ದಾನಮಾಡಬೇಕು. ಕೊನೆಯಲ್ಲಿ ಶಾಂತಿಯನ್ನು ಮಾಡಬೇಕು. ಇದರಿಂದ ಮಂಗಳವುಂಟಾಗುವುದು.

**ಬ್ರಹ್ಮಚಾರಿಗಳು ಮೃತಪಟ್ಟರೆ** – ಏಕಾದಶಾಹಾಂತ ಕೃತ್ಯಗಳನ್ನು ನಡೆಸಿ ನಂತರ ದ್ವಾದಶಾಹದ ದಿನ ಸಪಿಂಡಿಗೆ ಬದಲು ನಾರಾಯಣಬಲಿಯನ್ನು ಮಾಡಬೇಕು. ಮೂವತ್ತು ಜನ ಬ್ರಹ್ಮಚಾರಿಗಳಿಗೆ ಅಥವಾ ಎಂಟು ಜನರಿಗೆ ಕೌಪೀನ, ಕೃಷ್ಣಾಜಿನ, ಕರ್ಣಾಭರಣ, ಪಾದುಕೆ, ಛತ್ರ, ಗೋಪಿಚಂದನ, ಮಾಲೆ, ಯಜ್ಞೋಪವೀತ ವಸ್ತ್ರಗಳನ್ನು ದಾನಮಾಡಿ ಭೋಜನ ಮಾಡಿಸಬೇಕು.

2 **ಕುಷ್ಠರೋಗಿಯು ಮೃತಪಟ್ಟರೆ**— ಈತನ ದೇಹವನ್ನು ತೀರ್ಥದಲ್ಲಿ ಹಾಕಬೇಕು, ಭೂಮಿಯಲ್ಲಾದರೂ ಹೂಳಬೇಕು. ದಹನವನ್ನೂ ಉದಕ, ಪಿಂಡ ಈ ಎಲ್ಲವನ್ನೂ ವರ್ಜಿಸಬೇಕು. ಒಂದು ವೇಳೆ ಸ್ನೇಹದಿಂದ ದಹನವನ್ನು ಮಾಡಿದಲ್ಲಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಇಂತಹ ಮಹಾರೋಗದಿಂದ ಮೃತನಾದರೆ ದಹನಾದಿ ಕರ್ಮಗಳನ್ನು. ಯಥಾಶಕ್ತಿ ಪ್ರಾಯಶ್ಚಿತ್ತ ಮಾಡಿಯೇ ನಂತರ ಮಾಡಬೇಕು. ಅನ್ಯಥಾ ಮಾಡಬಾರದು.

3 ಬಹಿಷ್ಠೆಯಾದ ಸ್ತ್ರೀಯು ಮೃತಪಟ್ಟರೆ ಸಂಸ್ಕಾರಾದಿಗಳನ್ನು ಆಚರಿಸಬಾರದು. ಮೂರು ರಾತ್ರಿಯು ಕಳೆದ ನಂತರ ಸ್ನಾನ ಮಾಡಿಸಿ, ಶವಸಂಸ್ಕಾರವನ್ನು ವಿಧಿವತ್ತಾಗಿ ಮಾಡಬೇಕು,

2) ಅಥವಾ ಬಹಿಷ್ಠೆಯಾದವಳ ಮಲವನ್ನು ತೆಗೆಯಿಸಿ ತೊಳೆಯಿಸಿ ಸ್ನಾನಮಾಡಿಸಿ ಕಾಷ್ಠವನ್ನು ದಹಿಸುವಂತೆ ಮಂತ್ರವಿಲ್ಲದೆ ದಹನಮಾಡಿ, ಈಕೆಯ ಅಸ್ಥಿಗಳನ್ನು ಮಂತ್ರಾಗ್ನಿಯಿಂದ ದಹಿಸಬೇಕು.

3) ಇದೇ ರೀತಿಯಾಗಿ ಬಾಣಂತಿಯಾಗಿ ಮೃತಪಟ್ಟರೂ ಹೀಗೆಯೆ ಮಾಡಬೇಕು. ಪ್ರಾಯಶ್ಚಿತ್ತ ಮಾತ್ರ ಇದ್ದೇ ಇದೆ,

4) ಮಂತ್ರವತ್ತಾಗಿ ದಹನಮಾಡಬೇಕೆಂಬ ಇಚ್ಛೆಯಿದ್ದಲ್ಲಿ ಸಂಕಲ್ಪವನ್ನು ಈ ಕೆಳಗೆ ಕಂಡಂತೆ ಮಾಡಿ, ೧೦೮ ಸಲ ಮೊರದಿಂದ ಸ್ನಾನಮಾಡಿಸಿ,

ಭಸ್ಮ, ಗೋಮಯ, ಮೃತ್ತಿಕಾ, ಕುಶೋದಕಗಳಿಂದಲೂ ಪಂಚಗವ್ಯಗಳಿಂದ ಶುದ್ಧೋದಕಗಳಿಂದಲೂ ಸ್ನಾನಮಾಡಿಸಬೇಕು. ಹಿಂದಿನ ವಸ್ತ್ರವನ್ನು ತೆಗೆದು ಬೇರೆ ವಸ್ತ್ರವನ್ನು ಹೊದಿಸಿ ದಹಿಸಬೇಕು.

## ಸಂಕಲ್ಪವಿಧಾನ

ಪ್ರಾಣಾನಾಯಮ್ಯ. ದೇಶಕಾಲೌ ಸಂಕೀರ್ತ್ಯ, ಅದ್ಯ - ಅಮುಕ ಗೋತ್ರಾಯಾಃ, ರಜಸ್ವಲಾವಸ್ಥಾಯಾಃ, ಮರಣನಿಮಿತ್ತ ಪ್ರತ್ಯವಾಯ ಪರಿಹಾರಾರ್ಥಂ ಔರ್ಧ್ವದೇಹಿಕ ಯೋಗ್ಯತಾಸಿದ್ಧ್ಯರ್ಥಂ ಚಾಂದ್ರಾಯಣ-ಪ್ರಾಯಶ್ಚಿತ್ತ (ಪ್ರತ್ಯಾಮ್ನಾಯ ಕೃಚ್ಛ್ರಾಚರಣ) ಪೂರ್ವಕಂ ಶೂರ್ಪೇಣ ಅಷ್ಟೋತ್ತರ ಶತಸ್ನಾನಾನಿ ಕಾರಯಿಷ್ಯೇ — ಇತಿ ಸಂಕಲ್ಪ್ಯ, ಚಾಂದ್ರಾಯಣ ತ್ರಯ ಪ್ರತ್ಯಾಮ್ನಾಯಂ ಕೃತ್ವಾ, ಯವಪಿಷ್ಟೇನ ಪ್ರೇತಮನುಲಿಪ್ಯ, ಸ್ವಯಂ ಸ್ನಾತ್ವಾ, ಶೂರ್ಪೋದಕೈಃ ಅಷ್ಟೋತ್ತರಶತವಾರಂ ಸ್ನಾಪಯೇತ್. ತತೋ ಭಸ್ಮ-ಗೋಮಯ ಮೃತ್ತಿಕಾ ಕುಶೋದಕೈಃ, ಶುದ್ಧೋದಕೈಃ ಪಂಚಗವ್ಯೈಶ್ಚ ಸಂಸ್ನಾಪ್ಯ ಯದಂತಿ ಯಚ್ಚ ದೂರಕೇ - ಇತ್ಯಾದಿ ಪಾವಮಾನೀಭಿಃ, ಆಪೋಹಿಷ್ಠೇತಿ ತೃಚೇನ ಕಯಾನಿ ಇತ್ಯಾದಿಭಿಶ್ಚ ಸಂಸ್ನಾಪ್ಯ. ಪೂರ್ವವಸ್ತ್ರಂ ಸಂತ್ಯಜ್ಯ, ಅನ್ಯವಸ್ತ್ರೇಣ ಸಂವೇಷ್ಟ್ಯ, ದಹೇತ್,

ಸೂತಿಕಾಯಾ-ಅಪಿ ಏವಂ ವಿಧಿಃ.

2 ಇದೇರೀತಿಯಾಗಿ ಬಾಣಂತಿ ಮೃತಪಟ್ಟರೂ ಮಾಡಬೇಕು. ಮಾಸಪರ್ಯಂತರವಾಗಿಯೂ ಬಾಣಂತಿಯ ವಿಷಯದಲ್ಲಿ ಕೃಚ್ಛ್ರತ್ರಯ ವನ್ನು ಆಚರಿಸಿ ಉಳಿದುದನ್ನು ಹಿಂದೆ ಹೇಳಿದಂತೆ ಮಾಡಬೇಕು.

3 ಮಿತಾಕ್ಷರಿಯಲ್ಲಿ ಮತ್ತೊಂದು ವಿಶೇಷವನ್ನು ಹೇಳಿದೆಯೆಂದು ಧರ್ಮಸಿಂಧುವಿನಲ್ಲಿ ಬರೆದಿದ್ದಾರೆ.— ಅದು ಹೀಗಿದೆ, –

ಕುಂಭದಲ್ಲಿ ನೀರನ್ನು ತಂದು, ಪಂಚಗವ್ಯವನ್ನು ಹಾಕಿ, ಆಪೋಹಿಷ್ಠಾ ವಾಮದೇವ್ಯ-ವರುಣ ಮಂತ್ರಗಳಿಂದ ಅಭಿಮಂತ್ರಿಸಿ, ಈ ಮಂತ್ರಗಳಿಂದ ಸ್ನಾನಮಾಡಿಸಿ ಅನಂತರ ದಹನ ಮಾಡಬೇಕೆಂದು ಹೇಳಿದೆ.

4 ಗರ್ಭಿಣಿಯು ಮೃತಪಟ್ಟರೆ, ಶುದ್ಧಿಗಾಗಿ ಮೂವತ್ತು ಕೃಚ್ಛ್ರಾಚರಣೆ ಮಾಡಿ, ಗೋ, ಭೂಮಿ, ಸುವರ್ಣಗಳನ್ನು ದಾನಮಾಡಿ, ಗರ್ಭದಲ್ಲಿರುವ ಮಗುವನ್ನು ತೆಗೆದು ಬೇರ್ಪಡಿಸಿ, ಆಕೆಯನ್ನು ದಹಿಸಬೇಕು. ಗರ್ಭಸಹಿತ ದಹಿಸಿದರೆ ಭ್ರೂಣಹತ್ಯಾ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು, ಕರ್ತೃವಿಗೂ ಮೂರುವರ್ಷ ಪ್ರಾಯಶ್ಚಿತ್ತವಿದ.

ಷರಾ ಸಹಗಮನವು ಈ ಕಾಲದಲ್ಲಿ ಇಲ್ಲವಾದ್ದರಿಂದ ಅದರ ವಿಧಿಯನ್ನು ತಿಳಿಸಿಲ್ಲ.

## ಮೃತಯತಿಸಂಸ್ಕಾರ (ಧರ್ಮಸಿಂಧುವಿನಂತೆ)

ಪುತ್ರ ಅಥವಾ ಶಿಷ್ಯನು ಸ್ನಾನಮಾಡಿ ಕೃಚ್ಛ್ರಾಚರಣೆ ಮತ್ತು ವಪನ ಮಾಡಿಸಬೇಕು, (ಪುತ್ರಭಿನ್ನರಿಗೆ ವಪನ ಅವಶ್ಯವಿಲ್ಲ). ದೇಶಕಾಲಸಂಕೀರ್ತನೆ ಮಾಡಿ **ಬ್ರಹ್ಮೀಭೂತಯತೇಃ ಶೌನಕೋಕ್ತವಿಧಿನಾ ಸಂಸ್ಕಾರಂ ಕರಿಷ್ಯೇ** ಎಂದು ಸಂಕಲ್ಪಮಾಡಿ, ಹೊಸ ಕುಂಭದಲ್ಲಿ ನೀರನ್ನು ತುಂಬಿ **ಗಂಗೇಚ ಯಮುನೆಚ್ಚೈವ-ನಾರಾಯಣ ಪರಂಬ್ರಹ್ಮ-ಯಚ್ಚ ಕಿಂಚಿತ್ ಜಗತ್ ಸರ್ವಂ** ಎಂಬ ಮಂತ್ರಗಳಿಂದ ಅಭಿಮಂತ್ರಿಸಿ ರುದ್ರಸೂಕ್ತ-ವಿಷ್ಣುಸೂಕ್ತ-ಆಪೋಹಿಷ್ಠಾದಿ ಮಂತ್ರಗಳಿಂದ ಯತಿಗೆ ಸ್ನಾನಮಾಡಿಸಿ ಚಂದನಾದಿಗಳಿಂದ ಕಳೇಬರವನ್ನು ಪೂಜಿಸಿ, ಹೂ-ತುಳಸೀಮಾಲಿಕೆಗಳಿಂದ ಅಲಂಕರಿಸಿ, ವಾದ್ಯ, ಘೋಷ, ವೇದಘೋಷಗಳಿಂದ ಶುದ್ಧವಾದ ಪ್ರದೇಶಕ್ಕೆ ಒಯ್ಯಬೇಕು, (ಜಲದಲ್ಲಾಗಲಿ ನೆಲದಲ್ಲಾಗಲಿ ಸಮಾಧಿ ಮಾಡಬೇಕು. ನೆಲದಲ್ಲಿ ಮಾಡುವಲ್ಲಿ ಭೂಮಿಯನ್ನು ವ್ಯಾಹೃತಿಯಿಂದ ಪ್ರೋಕ್ಷಿಸಿ; ಒಂದು ದಂಡಪ್ರಮಾಣ ಹಳ್ಳ ಮಾಡಿ ಮಧ್ಯದಲ್ಲಿ ಒಂದೂವರೆ ಹಸ್ತಪ್ರಮಾಣ ಸಣ್ಣ ಹಳ್ಳ ತೋಡಿ, ಸಪ್ತವ್ಯಾಹೃತಿಗಳಿಂದ ಪಂಚಗವ್ಯಗಳಿಂದ ಪ್ರೋಕ್ಷಿಸಿ; (ಜಲದಲ್ಲಾದರೆ ನದಿಯಲ್ಲಿ ಪಂಚಗವ್ಯವನ್ನು ಹಾಕಿ) ದರ್ಭೆಯನ್ನು ತಳದಲ್ಲಿ ಹಾಸಿ

ಗಾಯಂತ್ರಿಯಿಂದ ಯತಿಯ ದೇಹವನ್ನು ಪ್ರೋಕ್ಷಿಸಿ, ಶಂಖೋದಕದಿಂದಲೂ ಪುರುಷಸೂಕ್ತದಿಂದ (೧೦೮ ಸಲ ಪ್ರಣವದಿಂದಲೂ) ಸ್ನಾನಮಾಡಿಸಿ ನಾರಾಯಣ ಅಷ್ಟಾಕ್ಷರಿಯಿಂದ ಷೋಡಶೋಪಚಾರಗಳಿಂದ ಪೂಜಿಸಿ, ತುಲಸೀ ಮಾಲಿಕೆಗಳಿಂದ ಅಲಂಕರಿಸಿ "ವಿಷ್ಣೋ ಹವ್ಯಂ ರಕ್ಷಸ್ವ" ಎಂದು ಹಳ್ಳದಲ್ಲಿ (ನದಿಯಲ್ಲಿ ಇಳಿಸಬೇಕು. "ಇದಂ ವಿಷ್ಣುಃ" ಎಂಬ ಮಂತ್ರದಿಂದ ದಂಡವನ್ನು ಮೂರು ತುಂಡಾಗಿ ಮಾಡಿ ಬಲಹಸ್ತದಲ್ಲಿ ಇರಿಸಬೇಕು.

2 ನಂತರ **ಹಂಸಶ್ಶುಚಿಷತ್ — ಪರೇಣನಾಕಂ ನಿಹಿತಂ ಗುಹಾಯಾಂ - - — ಶುದ್ಧಸತ್ವಾಃ** ಎಂಬ ಮಂತ್ರಗಳನ್ನು ಹೃದಯದಲ್ಲಿ ಜಪಿಸಬೇಕು. ಪುರುಷಸೂಕ್ತವನ್ನು ಯತಿಯ ಹುಬ್ಬುಗಳ ನಡುವೆ ಜಪಿಸಿ. **ಬ್ರಹ್ಮಜಜ್ಞಾನಂ** ಶಿರಸ್ಸಿನಲ್ಲಿ ಜಪಿಸಿ, **ಓಂ ಭೂರ್ಭುವಸ್ಸುವಃ** ಎಂದು ಶಂಖದಿಂದ ಶಿರಸ್ಸನ್ನು ಭೇದಿಸಬೇಕು.

ಶಿರಸ್ಸನ್ನು ಭೇದಿಸುವುದಕ್ಕೆ ಅಸಮರ್ಥವಾದರೆ ಶಿರಸ್ಸಿನಮೇಲೆ ಒಂದು ಬೆಲ್ಲದ ಅಚ್ಚನ್ನು ಇರಿಸಿ ಒಡೆಯಬೇಕು.

(ನಾಯಿ ನರಿ ಮುಂತಾದ ಪ್ರಾಣಿಗಳಿಗೆ ಸಿಕ್ಕದಂತೆ ಉಪ್ಪು ಮರಳು ಮುಂತಾದವುಗಳಿಂದ ಹಳ್ಳವನ್ನು ಭರ್ತಿಮಾಡಬೇಕು;

3 ಮೊದಲು ಹಳ್ಳದಲ್ಲಿ ಪುರುಷಸೂಕ್ತದಿಂದ ಉಪ್ಪನ್ನು ತುಂಬಬೇಕು. (ನದಿಯಲ್ಲಿ ಬಿಡುವುದಾದರೆ ಶಿರಸ್ಸನ್ನು ಭೇದಿಸಿ, ದರ್ಭೆಗಳಿಂದ ಮುಚ್ಚಿ; ವ್ಯಾಹೃತಿಗಳಿಂದ ಅಭಿಮಂತ್ರಿಸಿ ಕಲ್ಲನ್ನು ಕಟ್ಟಿ ಓಂ ಸ್ವಾಹಾ ಎಂದು ಮಡುವಿನಲ್ಲಿ ಬಿಡಬೇಕು,) ಅನಂತರ "ಅಗ್ನಿನಾಗ್ನಿಃ ಸಮಿದ್ಧ್ಯತೇ ತ್ವಂಹ್ಯಗ್ನೇ—ತಂ ಮಾರ್ಜಯಾನ್ತಂ ಸುಕ್ರತುಂ—ಯಜ್ಞೇನ ಯಜ್ಞಂ ಎಂಬ ನಾಲ್ಕು ಋಕ್ಕುಗಳಿಂದ ಚಿತ್ತಿಸ್ರುಕ್ ಇತ್ಯಾದಿ ದಶಹೋತ್ರವೆಂಬುವ ಯಜುರ್ಮಂತ್ರಗಳಿಂದಲೂ ಅಭಿಮಂತ್ರಿಸಬೇಕು,

4 ಅನಂತರ ಯತಿಯ ಅನುಯಾಯಿಗಳು ಬಂದವರು "ಅತೋ ದೇವಾ" ಎಂದು ಜಪಿಸಿ; ಅಶ್ವಮೇಧಫಲಕ್ಕೆನಾವು ಇಂದು ಭಾಗಿಗಳಾಗಿದ್ದೇವೆ ಎಂದು ಭಾವಿಸುತ್ತಾ, ಪಾಪನಿರ್ಮುಕ್ತರಾದೆವೆಂದು ತಿಳಿದು, ಅವಭೃತಸ್ನಾನವೆಂದು ಭಾವಿಸಿ, ಸ್ನಾನಮಾಡಿ ಗಂಧಾದಿಗಳನ್ನು ಹಚ್ಚಿಕೊಂಡು ಉತ್ಸವದೊಂದಿಗೆ ಮನೆಗೆ ಹಿಂತಿರುಗಬೇಕು.

5 ಕರ್ತೃವು ಸ್ನಾನಮಾಡಿ "ಸಿದ್ಧಿಂಗತಸ್ಯ ಪರಮಹಂಸಸ್ಯ ಯತೇಃ ನಾರಾಯಣತೃಪ್ತ್ಯರ್ಥಂ ಕ್ಷೀರೇಣತರ್ಪಣಂಕರಿಷ್ಯೆ" ಎಂದು ಸಂಕಲ್ಪಮಾಡಿ, ಆತ್ಮಾನಂ ತರ್ಪಯಾಮಿ; ಅಂತರಾತ್ಮಾನಂ ತರ್ಪಯಾಮಿ, ಪರಮಾತ್ಮಾನಂ ತರ್ಪಯಾಮಿ, ಜೀವಾತ್ಮಾನಂ ತರ್ಪಯಾಮಿ, ತರ್ಪಣ ಮಾಡಬೇಕು.

ಷರಾ—(ಶುಕ್ಲಪಕ್ಷದಲ್ಲಿ ಮೃತಪಟ್ಟಿದ್ದರೆ, ಕೇಶವಾದಿ ದ್ವಾದಶನಾಮಗಳಿಂದ, ಕೇಶವಂ ತರ್ಪಯಾಮಿ—ಇತ್ಯಾದಿಯಾಗಿ ತರ್ಪಣ ಮಾಡಬೇಕು.

ಕೃಷ್ಣಪಕ್ಷದಲ್ಲಿ ಮೃತಪಟ್ಟಿದ್ದರೆ ಸಂಕರ್ಷಣಾದಿ ದ್ವಾದಶನಾಮಗಳಿಂದ ಸಂಕರ್ಷಣಂ ತರ್ಪಯಾಮಿ—ಇತ್ಯಾದಿಯಾಗಿ ತರ್ಪಣ ಮಾಡಬೇಕು, ಇದು ಧರ್ಮಸಿಂಧುವಂತೆ ಹೇಳಿದ ಕ್ರಮವು. ಆಪಸ್ತಂಬ ಯಲ್ಲಾಜೀಯಂತೆ ಅಷ್ಟ ದಿಕ್ಕುಗಳಲ್ಲೂ ಓಂ ಇಂದ್ರಂ ತರ್ಪಯಾಮಿ — ಇತ್ಯಾದಿಯಾಗಿ ಎಲ್ಲ ದಿಕ್ಪಾಲಕರುಗಳಿಗೂ ತರ್ಪಣ ಮಾಡಬೇಕು. ಕೇಶವಾದಿ ನಾಮಗಳಿಂದ ತರ್ಪಣ ಮಾಡಬಾರದು.

6 ಅನಂತರ "ಸಿದ್ಧಿಂಗತಸ್ಯ ಭಿಕ್ಷೋಃ ಪರಮಹಂಸಸ್ಯ ತೃಪ್ತ್ಯರ್ಥಂ ನಾರಾಯಣ ಪೂಜಾಂ, ಬಲಿದಾನಂ, ಘೃತದೀಪದಾನಂಚ ಕರಿಷ್ಯೆ - ಎಂದು ಸಂಕಲ್ಪ ಮಾಡಿ, ಸಮಾಧಿಮಾಡಿದ ಸ್ಥಳದಲ್ಲಿ ಅದರಮೇಲೆ (ಅಥವಾ ನದೀತೀರದಲ್ಲಿ ಮಣ್ಣಿನ ಲಿಂಗವನ್ನು ಮಾಡಿ, ಒಂದು ಸಾಲಗ್ರಾಮವನ್ನು ಇರಿಸಿ ಪುರುಷಸೂಕ್ತದಿಂದಲೋ, ಅಷ್ಟಾಕ್ಷರಿಯಿಂದಲೋ ಷೋಡಶೋಪಚಾರ ಪೂಜೆಯನ್ನು ಮಾಡಿ, ಆಜ್ಯಮಿಶ್ರಿತವಾದ ಪಾಯಸವನ್ನು ಬಲಿಯಾಗಿ ದತ್ತ ಮಾಡಿದ ನಂತರ ಘೃತದೀಪವನ್ನು ಹೊತ್ತಿಸಿ, ಕೊಟ್ಟ ಬಲಿಪಾಯಸವನ್ನು ಹೊಳೆನೀರಿನಲ್ಲಿ ಬಿಡಬೇಕು. (ಎಸೆಯಬೇಕು.)

7 ಅನಂತರ ' ಓಂ ಬ್ರಹ್ಮಣೇ ನಮಃ ' ಎಂದು ಶಂಖದಿಂದ ಎಂಟು ಅರ್ಘ್ಯವನ್ನು ಕೊಟ್ಟು ಮನೆಗೆ ಹಿಂತಿರುಗಬೇಕು. ಇದು ಮೊದಲನೇ ದಿನದ ಕರ್ತವ್ಯಕರ್ಮ, ಇದೇ ರೀತಿಯಾಗಿ ಹತ್ತು ದಿನಗಳೂ ಪ್ರತಿನಿತ್ಯ ತರ್ಪಣ, ಲಿಂಗಪೂಜೆ, ಪಾಯಸ ಬಲಿದಾನ, ದೀಪದಾನ -ಇವುಗಳನ್ನು ಆಚರಿಸಬೇಕು. (ದ್ವಿತೀಯಾದಿ ದಿನಗಳಲ್ಲಿ ಖನನದಿನಾದಾರಭ್ಯ ದ್ವಿತೀಯೆ ದಿನೆ — ಇತ್ಯಾದಿಯಾಗಿ ಹೇಳಬೇಕು.)

8 **ಪುತ್ರನಾಗಿದ್ದರೆ, ಹನ್ನೊಂದನೇ ದಿನ ಪಾರ್ವಣಶ್ರಾದ್ಧ ಮಾಡುವುದು.** ಸ್ನಾನಮಾಡಿ ಮಧ್ಯಾಹ್ನ ನದಿ ಮೊದಲಾದ ಸ್ಥಳಗಳಿಗ ಹೋಗಿ ಶ್ರಾದ್ಧಾಂಗ ತಿಲತರ್ಪಣ ಮಾಡಿ, ನಂತರ ದೇಶ ಕಾಲ ಸಂಕೀರ್ತನ ಪೂರ್ವಕ–ಏವಂಗುಣ ವಿಶೇಷಣವಿಶಿಷ್ಟಾಯಾಂ ಪುಣ್ಯತಿಥೌ, ಪ್ರಾಚೀನಾವೀತಿ ಅಮುಕ ಗೋತ್ರಸ್ಯ–ಅಮುಕ ಶರ್ಮಣಃ ಬ್ರಹ್ಮೀಭೂತಸ್ಯ - ಅಸ್ಮತ್ಪಿತುಃ ಕರಿಷ್ಯಮಾಣ ದರ್ಶಾದಿ ಶ್ರಾದ್ಧಾಧಿಕಾರ ಸಿದ್ಧ್ಯರ್ಥಂ, ಆದ್ಯ ಪಾರ್ವಣ ಶ್ರಾದ್ಧಂ ಕರಿಷ್ಯೆ - ಎಂದು ಸಂಕಲ್ಪ ಮಾಡಬೇಕು

9 **ಶಿಷ್ಯನೇ ಕರ್ತೃವಾದರೆ,** ಬ್ರಹ್ಮೀಭೂತ ಗುರೋಃ ಪ್ರತ್ಯಾಬ್ದಿಕಾದಿ ಶ್ರಾದ್ಧಾಧಿಕಾರಸಿದ್ಧ್ಯರ್ಥಂ ತತ್ಪಿತೃಸಂಬಂಧಿ ನಾಮಗೋತ್ರೋದ್ದೇಶ್ಯತಾ ಸಿದ್ಧ್ಯರ್ಥಂ ಚ ಪಾರ್ವಣಶ್ರಾದ್ಧಂ ಕರಿಷ್ಯೆ – ಎಂದು ಸಂಕಲ್ಪ ಮಾಡಬೇಕು. ಬಾಕಿ ಎಲ್ಲವೂ ಸಮಾನ.

ಷರಾ —ಯತಿಯು ಶಿಷ್ಯನಾಗಿದ್ದರೆ. ಪಾರ್ವಣಶ್ರಾದ್ಧವನ್ನು ತಾನು ಮಾಡುವ ಹಾಗಿಲ್ಲವಾದ್ದರಿಂದ ಮತ್ತೊಬ್ಬರಿಂದ ಮಾಡಿಸಬೇಕಾಗುತ್ತದೆ. ಯತಿಗೆ ಆರಾಧನೆ ಮಾತ್ರ ಮಾಡುವ ಅಧಿಕಾರವಿರುತ್ತದೆ.

10 ಈ ಶ್ರಾದ್ಧದಲ್ಲಿ ಪುರೂರವಾರ್ದ್ರವ ಸಂಜ್ಞೆಯ ವಿಶ್ವೇದೇವರು, ಪಿತೃ-ಪಿತಾಮಹ-ಪ್ರಪಿತಾಮಹರ ನಾಮ, ಗೋತ್ರ-ರೂಪಗಳನ್ನು ಉಚ್ಚರಿಸಬೇಕು. ಸರ್ವತ್ರ ಬ್ರಹ್ಮೀಭೂತ ಪಿತೃ ಎಂದು ಉಚ್ಚರಿಸಬೇಕು. ಉಳಿದದ್ದು ಪ್ರತಿಸಾಂವತ್ಸರಿಕ ಶ್ರಾದ್ಧದಂತೆ.

ಶಿಷ್ಯನೇ ಕರ್ತನಾಗುವಲ್ಲಿ ಆತ್ಮಾನಂ, ಅಂತರಾತ್ಮಾನಂ, ಪರಮಾತ್ಮಾನಂ ಚ ಉದ್ದಿಶ್ಯ, ಸಾಧುಗುರುಸಂಜ್ಞಕ ವಿಶ್ವೇದೇವರೊಂದಿಗೆ, ಸವ್ಯದಲ್ಲಿ (ಉಪವೀತಿಯಾಗಿಯು) ದೇವಧರ್ಮದೊಂದಿಗೆ, ನಾಂದೀಶ್ರಾದ್ಧದಂತೆ, ಹನ್ನೊಂದನೇ ದಿನ ಪಾರ್ವಣಶ್ರಾದ್ಧ ಮಾಡಬೇಕೆಂದು ಕೆಲವರು ಹೇಳುತ್ತಾರೆ. ಹೀಗೆಯೇ ಯಲ್ಲಾಜಿಯಲ್ಲಿದೆ,

## ಆಪಸ್ತಂಭ ಯಲ್ಲಾಜಿಯಂತೆ ಯತಿಸಂಸ್ಕಾರ ವಿಧಿ

1 ಕರ್ತೃವಾದವನು ಪುತ್ರನಾಗಿರಲಿ ಅಥವಾ ಶಿಷ್ಯನಾಗಿರಲಿ, ಹತ್ತಿರದ ಬಂಧುವಾಗಿರಲಿ, ಯಾರಾದರೂ ಮೃತಪಟ್ಟ ಯತಿಗೆ ಸಂಸ್ಕಾರವನ್ನು ಮಾಡಬೇಕು. ಅದರ ವಿಧಿಯು ಹೀಗಿದೆ -

2 ಕರ್ತನು ಸ್ನಾನಮಾಡಿ ಶುದ್ಧಾತ್ಮನಾಗಿದ್ದು ಪಂಚಾಮೃತದಿಂದ ಸ್ನಾನಮಾಡಿಸಿ, ಆಪೋಹಿಷ್ಠಾ ಎಂಬ ತೃಚಮಂತ್ರದಿಂದಲೂ ವರುಣಮಂತ್ರ ವಿಷ್ಣುಸೂಕ್ತ, ತ್ರಿಯಂಬಕ ಮಂತ್ರಗಳಿಂದಲೂ, ಶುದ್ಧೋದಕದಿಂದ ಸ್ನಾನ ಮಾಡಿಸಬೇಕು.

3 ಅನಂತರ ದೊಡ್ಡ ಶಿಕ್ಕದಲ್ಲಿ (ಗೂಡಿನಲ್ಲಿ) ಯತಿಶರೀರವನ್ನು ಇರಿಸಿ, ಸುಗಂಧ-ಮಾಲಿಕೆಗಳಿಂದಲೂ, ತುಲಸೀಮಾಲೆಗಳಿಂದಲೂ ಅಲಂಕರಿಸಿ ಜಯಶಬ್ದದಿಂದ ಘೋಷಣೆ ಮಾಡುತ್ತಾ, ವಾದ್ಯ ಅಥವಾ ದುಂದುಭಿ ಭೇರಿ ನಾದವನ್ನು ಮಾಡಿಸುತ್ತಾ, ಗ್ರಾಮಪ್ರದಕ್ಷಿಣೆಯನ್ನು ಮಾಡಿಸಿ, ವೇದವಿತ್ತರಾದ ಬ್ರಾಹ್ಮಣರಿಂದ ಉಪನಿಷತ್ತುಗಳನ್ನು ಹೇಳಿಸುತ್ತಾ, ಪೂರ್ವ ಅಥವಾ ಉತ್ತರದಿಕ್ಕಿಗೆ ಶುದ್ಧವಾದ ಪ್ರದೇಶಕ್ಕೆ ಕೊಂಡೊಯ್ಯಬೇಕು,

ಅನಂತರ ನದೀತೀರದಲ್ಲಿ, ಅಶ್ವತ್ಥಮೂಲದಲ್ಲೋ, ದೇವಾಲಯದ ಹತ್ತಿರವಲ್ಲೋ, ಅರಣ್ಯದಲ್ಲೋ, ಗೋಶಾಲೆಯಲ್ಲೋ ಕೆಳಗೆ ವ್ಯಾಹೃತಿಯಿಂದ ಭೂಮಿಯನ್ನು ಪ್ರೋಕ್ಷಿಸಿ, ದಂಡಪ್ರಮಾಣದಷ್ಟು ಹಳ್ಳ ತೆಗೆದು,

ಪುನಃ ವ್ಯಾಹೃತಿಯಿಂದ ಪ್ರೋಕ್ಷಿಸಿ, ಉತ್ತರಾಗ್ರವಾಗಿ ದರ್ಭೆಯನ್ನು ತಳ ದಲ್ಲಿ ಹಾಸಿ, ಉಪ್ಪನ್ನು ತುಂಬಿ ಗಾಯತ್ರಿಯಿಂದ ಯತಿಶರೀರವನ್ನು ತೊಳೆದು ಗಂಧ-ಹೂಮಾಲೆಗಳಿಂದ ಅಲಂಕರಿಸಿ, "ವಿಷ್ಣೋಃಹವ್ಯಂ ರಕ್ಷಸ್ವ" ಎಂದು ಹಳ್ಳದಲ್ಲಿ ಶರೀರವನ್ನು ಇರಿಸಿ "ಇದಂ ವಿಷ್ಣುರ್ವಿಚಕ್ರಮೆ" ಎಂಬ ಮಂತ್ರದಿಂದ ಬಲಹಸ್ತದಲ್ಲಿ ದಂಡವನ್ನು ಇರಿಸಿ ಮುಟ್ಟಿಕೊಂಡು ಜಪಿಸ ಬೇಕು.

"ಬ್ರಹ್ಮಜಜ್ಞಾನಮ್" ಎಂಬುದರಿಂದ ಶಿರಸ್ಸನ್ನು ಮುಟ್ಟಿಕೊಂಡು ಜಪಿಸಬೇಕು, "ಭೂಮಿರ್ಭೂಮಿಮಗಾತ್ ಮಾತಾ ಮಾತರಮಭ್ಯಗಾದ್ ಭೂಯಾಸ್ಮಪುತ್ರೈಃ ಪಶುಭಿರ್ಯೋನೋದ್ವೇಷ್ಟಿ ಸಭಿದ್ಯತಾಮ" ಎಂದು ಸುತ್ತಿಗೆಯಿಂದ ಶಿರಸ್ಸನ್ನು ಭೇದಿಸಬೇಕು, ಪ್ರಣವದಿಂದ ಅಭಿಮಂತ್ರಿಸಿ, "ದೇವಯಜನಂ ಮೇ ವಯತು – – – – ಮದಧಾತ್" ಎಂದು ಉಪ್ಪು ಮೊದಲಾದುವುಗಳಿಂದ ತುಂಬಿ ಈ ಮುಂದೆ ಹೇಳಿದ ಮಂತ್ರಗಳಿಂದ ಜಪಿಸಿ ನಮಸ್ಕರಿಸಬೇಕು.

1 "ಅಗ್ನಿನಾಗ್ನಿಸ್ಸಮಿಧ್ಯತೇ ತ್ವಂಹ್ಯಗ್ನೇ ಅಗ್ನಿನಾ ತಮಂರ್ಜ ಯನ್ನು ಸುಶ್ಮತಮ್" "ಯಜ್ಞೇನ ಯಜ್ಞ - - ದೇವಾ" ಇತಿ ಋಚಃ.

2 "ಪೃಥಿವೀಹೋತಾ – ಅಗ್ನಿರ್ಹೋತಾ, ಸೂರ್ಯಂತೇ ಚಕ್ಷುಃ ಮಹಾಹವಿರ್ಹೋತಾ- ಇತಿ ಚತುರ್ಹೋತೃ ಮಂತ್ರಾಃ.

3 "ಅತೋದೇವಾ - - ಧಾಮಭಿಃ । ಇದಂ ವಿಷ್ಣುರ್ವಿಚಕ್ರಮೇ। ತ್ರೀಣಿಪದಾ ವಿಚಕ್ರಮೇ । ವಿಷ್ಣೋಃಕರ್ಮಾಣಿ - - ಸಖಾ । ತದ್ವಿಷ್ಣೋಃ ಪರಮಂ ಪದಂ - ಇತಿ ಮಂತ್ರೈಃ ಜಪೇತ್ ಎಂದಿದೆ.

**ಪರಾ—ಇದರಲ್ಲಿ ಬೇರೆ ಸಂಸ್ಕಾರವೇನೂ ಇಲ್ಲ.**

ಕರ್ತೃವಿಗೆ ಸಿದ್ಧಿಹೊಂದಿದ ಯತಿಯ ಆಶೌಚವಿಲ್ಲ, ಆಶೌಚ ಶಂಕೆ ಯಿಂದ ಸ್ನಾನಮಾಡಬಾರದು. ನದ್ಯಃ ಶುಚಿತ್ವವಿರುವುದು. ಸಿದ್ಧಿ

ಹೊಂದಿದ ದಿನದಿಂದ ಹತ್ತು ದಿನಗಳು ಸಮಾಧಿಯ ವೇದಿಕೆಯ ಮೇಲೆ ಪುಷ್ಪಾಕ್ಷತೆಗಳನ್ನು ಅರ್ಪಿಸಿ, ಧೂಪ ದೀಪ ನೈವೇದ್ಯಾದಿಗಳನ್ನು ಅರ್ಪಿಸಿ, ಗಾಯತ್ರಿಯಿಂದಲೋ ಪ್ರಣವದಿಂದಲೋ ಅರ್ಘ್ಯವನ್ನು ಕೊಡಬೇಕು. ಎಂಟು ದಿಕ್ಕುಗಳಿಗೂ ಕೊಡಬೇಕು.

ಖನನ ಮಾಡಿದ ಸ್ಥಳದಲ್ಲಿ — 'ಪೂರ್ವೋಕ್ತ ಏವಂಗುಣ ವಿಶೇಷಣ ವಿಶಿಷ್ಟಾಯಾಂ ಶುಭತಿಥೌ ಸಿದ್ಧಿಂಗತಸ್ಯ, ಪರಮಹಂಸಸ್ಯ ಮಮ ಪಿತುಃ (ಗುರೋಃ) ತೃಪ್ತ್ಯರ್ಥಂ ತರ್ಪಣಂ ಕರಿಷ್ಯೇ. ಎಂದು ಸಂಕಲ್ಪ ಮಾಡಿ ತರ್ಪಣ ಕೊಡಬೇಕು.

" ಆತ್ಮಾನಂ ತರ್ಪಯಾಮಿ । ಅಂತರಾತ್ಮಾನಂ ತರ್ಪಯಾಮಿ । ಪರಮಾತ್ಮಾನಂ ತರ್ಪಯಾಮಿ । (ಜೀವಾತ್ಮಾನಂ ತರ್ಪಯಾಮಿ).

ಓಂ ಇಂದ್ರಾಯನಮಃ ಇಂದ್ರಂ ತರ್ಪಯಾಮಿ — ಎಂಬ ರೀತಿಯಲ್ಲಿ ಎಂಟು ದಿಕ್ಕುಗಳಲ್ಲೂ ಕ್ಷೀರದಿಂದ ತರ್ಪಣ ಮಾಡಿ, ಅನಂತರ ವೇದಿಕೆಗೆ ಪ್ರದಕ್ಷಿಣೆ ಬಂದು ಪರಿಷತ್ ಪೂಜೆ ಮಾಡಿ ತಾಂಬೂಲ ದಕ್ಷಿಣೆಗಳನ್ನು ಬ್ರಾಹ್ಮಣರಿಗೆ ಕೊಟ್ಟು ಅವರೊಡನೆ ಮತ್ತು ಬಂಧುಗಳೊಡನೆ ಅವಭೃತ ಸ್ನಾನಮಾಡಿ ಮನೆಗೆ ಹಿಂತಿರುಗಬೇಕು. ಮಹಾಪೂಜೆಯನ್ನೂ ಮಾಡಬೇಕು.

ಸಮಂತ್ರಕ ಸಂಸ್ಕಾರ ಪ್ರಯೋಗವನ್ನು ಯಲ್ಲಾಜಿಯಲ್ಲಿ ನೋಡಿ ಮಾಡಬೇಕು.

## ಯತಿಗಳು ಸಿದ್ಧಿಹೊಂದಿದಾಗ ಆಚರಣೆಯ ಕ್ರಮ

ಯತಿಗಳು ಮರಣಹೊಂದಿದರೆ ಸ್ಪರ್ಶದೋಷವಿಲ್ಲ. ಆಶೌಚವಿಲ್ಲ. ಆಶೌಚವೆಂಬ ಬುದ್ಧಿಯಿಂದ ಸ್ನಾನಮಾಡಬಾರದು.' ಹೀಗೆ ಮಾಡುವವನಿಗೆ ನರಕವು. ಅಲ್ಲದೆ ಇಂಥವನು ಉಪಪಾತಕವುಳ್ಳವನಾಗುತ್ತಾನೆ, ಉದಕ ದಾನವಿಲ್ಲ. ಯತಿಯ ಕಳೇಬರವನ್ನು ಹೊರುವವರಿಗೆ ಅಶ್ವಮೇಧಫಲವು,

ಮತ್ತು ಪುತ್ರನಿಗೂ, ಹೆಂಡತಿಗೂ; ಜ್ಞಾತಿಗಳಿಗೂ ಯತಿಮರಣನಿಮಿತ್ತ ಆಶೌಚವಿಲ್ಲ. ಸ್ನಾನವನ್ನು ಮಾಡಬೇಕಾಗಿಲ್ಲ. ಅಗ್ನಿಸಂಸ್ಕಾರವಿಲ್ಲ, ಒದ್ದೆ ಬಟ್ಟೆಯನ್ನು ಉಡಬಾರದು. ಏಕೋದ್ದಿಷ್ಟವಿಲ್ಲ. ಷೋಡಶಿ, ಸಪಿಂಡೀ ಕರಣಗಳಿಲ್ಲ. ಆದರೆ ಏಕಾದಶಾಹದಲ್ಲಿ ಪುತ್ರನು ಮಾಡಬೇಕಾದ ಪಾರ್ವಣ ವಿಧಿಯಿದೆ. ದ್ವಾದಶಾಹದಲ್ಲಿ ನಾರಾಯಣಬಲಿಯನ್ನು ಮಾಡಬೇಕು. ತ್ರಯೋದಶ (೧೩) ನೇ ದಿನ ಆರಾಧನೆಯನ್ನು ಮಾಡಬೇಕು. ಒಂದು ವರ್ಷಪರ್ಯಂತ (**ಪ್ರತಿ ತಿಂಗಳಲ್ಲಿ ಸಿದ್ಧಿಹೊಂದಿದ ದಿನ ಆರಾಧನೆ ಯನ್ನುಮಾತ್ರ ಮಾಡಬೇಕು. ಮಾಸಿಕಗಳನ್ನು ಮಾಡಬಾರದು.**)

## ನಿತ್ಯಪೂಜಾವಿಧಿ ಸಂಕ್ಷೇಪ

ಖನನಮಾಡಿ ಮುಚ್ಚಿದ ವೇದಿಕೆಯಮೇಲೆ ಲಿಂಗವನ್ನು ಮಣ್ಣಿನಿಂದ ಮಾಡಿ ಸಾಲಗ್ರಾಮವನ್ನು ಇರಿಸಿ ಪೂಜಿಸಬೇಕು. ಸ್ನಾನ, ಆಚಮನ, ಸಂಕಲ್ಪ—ಪ್ರಾಣಾಯಾಮ್ಯ - - ತಿಥೌ ಅಸ್ಮದ್‌ಗುರೋಃ ಸಿದ್ಧಿಂಗತಸ್ಯ ಪರಮಹಂಸಸ್ಯ ಪ್ರೀತ್ಯರ್ಥಂ ಸಮಾಧಿವೇದಿಕಾಯಾಂ ಪುರುಷಸೂಕ್ತ ವಿಧಾ ನೇನ ಗುರುಪೂಜಾಂ ಕರಿಷ್ಯೆ—ಎಂದು ಸಂಕಲ್ಪಮಾಡಿ, ಕಲಶಪೂಜೆ, ಶಂಖ ಪೂಜೆ, ಮಾಡಿಕೊಂಡು, ಷೋಡಶ ಋಕ್ಕುಗಳಿಂದ ಕ್ರಮವಾಗಿ ಪೂಜಿಸಿ, ಸಂಕಲ್ಪಪೂರ್ವಕ ಕ್ಷೀರತರ್ಪಣವನ್ನು ಮಾಡಬೇಕು. ತರ್ಪಣವು ಹಿಂದೆ ಹೇಳಿದಂತೆಯೇ: ಬ್ರಾಹ್ಮಣರಿಗೆ ದಕ್ಷಿಣಾದಾನ ತಾಂಬೂಲದಾನ ಮಾಡಿ, ಮನೆಗೆ ಎಲ್ಲರೊಡನೆ ಬರಬೇಕು.

ಮಾರನೇ ದಿನದಿಂದ ಇದೇರೀತಿಯಾಗಿ ನಿತ್ಯಪೂಜೆ ಮಾಡಿ ಹತ್ತನೆದಿನ ಮಹಾಪೂಜೆಯನ್ನು ಮಾಡಬೇಕು.

## ಮಹಾಪೂಜಾಕ್ರಮ (ಯಲ್ಲಾಜಿಯಲ್ಲಿ ಹೇಳಿದಂತೆ)

ಮೊದಲು ಪರಿಷತ್ತಿನ ಅನುಜ್ಞೆಯನ್ನು ಈರೀತಿ ಹೇಳಿ ಪಡೆಯಬೇಕು.

" ಅಶೇಷೇ ಹೇ ಪರಿಷತ್, ಅಸ್ಮದ್ ಗುರೋಃ, ಸಿದ್ಧಿಂಗತಸ್ಯ ಪರಮಹಂಸಸ್ಯ ನಾರಾಯಣಸ್ಯ ಪ್ರೀತ್ಯರ್ಥಂ ಖನನದಿನಾದಾರಭ್ಯ ಅದ್ಯ ದಶಮದಿನೇ ಅಸ್ಯಾಂ ಸಮಾಧಿವೇದಿಕಾಯಾಂ ಮಹಾಪೂಜಾಂ ಕರ್ತುಂ ಯೋಗ್ಯತಾಸಿದ್ಧಿರಸ್ತ್ವಿತಿ ಅನುಗ್ರಹಾಣ " ಎಂದು ಬ್ರಾಹ್ಮಣರಿಂದ ಅನುಜ್ಞೆ ಪಡೆದು, ಹಿಂದೆ ಹೇಳಿದಂತೆ ಸಂಕಲ್ಪ, ಪೂಜೆ, ತರ್ಪಣಗಳನ್ನು ಮಾಡಿ. ದಕ್ಷಿಣಾ ತಾಂಬೂಲಾದಿಗಳನ್ನು ಕೊಟ್ಟು ಮನೆಗೆ ಬರಬೇಕು.

ಏಕಾದಶಾಹದಲ್ಲಿ ಪಾರ್ವಣಮಾಡುವ ವಿಧಾನವನ್ನು ಧರ್ಮಸಿಂಧುವಿನಂತೆ ಹಿಂದೆ ಹೇಳಿದ ಕ್ರಮವು ಯಲ್ಲಾಜಿಯದು ಒಂದೇ ಸಮನಾಗಿದೆ.

## ದ್ವಾದಶಾಹದ ದಿನ ನಾರಾಯಣಬಲಿ

1 ಮೊದಲು ಪುಣ್ಯಾಹ ಮಾಡಬೇಕು. ನಂತರ ಸಂಕಲ್ಪವನ್ನು ಈರೀತಿ ಮಾಡಬೇಕು.—

" ಅಸ್ಮದ್ಗುರೋಃ ಸಿದ್ಧಿಂಗತಸ್ಯ ಪರಮಹಂಸಸ್ಯ ಯತೇಃ ತುಷ್ಟ್ಯರ್ಥಂ ನಾರಾಯಣಸ್ಯಚ ಪ್ರೀತ್ಯರ್ಥಂ ಖನನದಿನಾದಾರಭ್ಯ ದ್ವಾದಶ ದಿನೆ ನಾರಾಯಣಬಲ್ಯಾಖ್ಯಕರ್ಮ ಕರಿಷ್ಯಮಾಣಃ, ವಿಶ್ವಂಭರಪೂರ್ವಕಂ ಕೇಶವಾದಿ ತ್ರಯೋದಶಬ್ರಾಹ್ಮಣವರಣಾಖ್ಯ ಕರ್ಮಕರಿಷ್ಯಮಾಣಃ, ಆದೌ ಗೃಹಭೂಮಿಭಾಂಡ (ಭಾಜನ) ಆತ್ಮ-ದ್ರವ್ಯ-ಸ್ಥಳಶುದ್ಧ್ಯರ್ಥಂ ವೃದ್ಧ್ಯರ್ಥಂ ಅಭ್ಯುದಯಾರ್ಥಂಚ ಮಹಾಜನೈಃಸಹ ಸ್ವಸ್ತಿಪುಣ್ಯಾಹವಾಚನಂ ಕರಿಷ್ಯೇ " ಎಂದು ಸಂಕಲ್ಪಮಾಡಿ, ' ಸರ್ವೇಭ್ಯೋ ಬ್ರಾಹ್ಮಣೇಭ್ಯೋ ನಮಃ ' ಎಂದು ಪರಿಷದನುಜ್ಞೆಯನ್ನು ಕೇಳಬೇಕು.

ಓಂ ಅಶೇಷೇ ಹೇ ಪರಿಷತ್ ಅದ್ಯ ಸಿದ್ಧಿಂಗತಸ್ಯ ಅಸ್ಮದ್ಗುರೋಃ ಖನನದಿನಾದಾರಭ್ಯ ದ್ವಾದಶದಿನೇ ಇಮಾಂ ಸೌವರ್ಣಿಂ ಯಥಾಸಂಭವ ದಕ್ಷಿಣಾಂ ಸ್ವೀಕೃತ್ಯ, ನಾರಾಯಣಬಲಿಂ ಕರ್ತುಂ ಯೋಗ್ಯತಾಸಿದ್ಧಿಂ ಅನುಗ್ರಹಾಣ ಎಂದು ಪರಿಷದನುಜ್ಞೆಯನ್ನು ತೆಗೆದುಕೊಂಡು, ನಾರಾಯಣಬಲಿಯನ್ನು ಮಾಡುವ ಸಂಕಲ್ಪ ಮಾಡಿ ಯಥಾವಿಧಿ ಆಚರಿಸಬೇಕು.

ಕೇಶವಾದಿ ದ್ವಾದಶನಾಮಗಳಿಗೆ ಹನ್ನೆರಡು ಜನ, ವಿಷ್ಣುವಿಗಾಗಿ ಮತ್ತೊಬ್ಬ ಬ್ರಾಹ್ಮಣ, ಒಟ್ಟು ಹದಿಮೂರು ಜನ (ಯತಿಗಳು) ಬ್ರಾಹ್ಮಣ ರನ್ನು ವರಣೆ ಮಾಡಬೇಕು,

ಶುಭತಿಥೌ - - - ಅಸ್ಮದ್ಗುರೋಃ ಸಿದ್ಧಿಂಗತಸ್ಯ ಪರಮಹಂಸಸ್ಯ ಪ್ರೀತ್ಯರ್ಥಂ ಶ್ರೀನಾರಾಯಣ ಪ್ರೀತ್ಯರ್ಥಂ ಚ ಖನನದಿನಾದಾರಭ್ಯ ಅದ್ಯ ದ್ವಾದಶದಿನೇ ನಾರಾಯಣಬಲ್ಯಾಖ್ಯಂ ಕರ್ಮಕರಿಷ್ಯೇ – ಎಂದು ಸಂಕಲ್ಪ ಮಾಡಿ ಪ್ರಯೋಗದಲ್ಲಿ ಹೇಳಿದಂತೆ ಇದರ ವಿಧಿಯನ್ನು ಆಚರಿಸಬೇಕು.

## ಇದರ ಸಂಕ್ಷೇಪ ಪರಿಚಯ

ಸಂಕಲ್ಪ, ಬ್ರಾಹ್ಮಣವರಣೆ ಕ್ಷಣದಾನ, ಪುನಃ ಸಂಕಲ್ಪ ಮಾಡಿ ನಾರಾಯಣಬಲ್ಯಂಗ ವಿಷ್ಣುಪೂಜಾ, ಪುರುಷಸೂಕ್ತ ವಿಧಾನದಿಂದ ಸಾಲ ಗ್ರಾಮ ಸನ್ನಿಧಿಯಲ್ಲಿ ವಿಷ್ಣುಪೂಜೆ ಮಾಡಿ, ಸ್ವಗೃಹ್ಯಸೂತ್ರೋಕ್ತ ವಿಧಿ ಯಂತೆ ಅಗ್ನಿಪ್ರತಿಷ್ಠಾಪನೆ ಮಾಡಿ, ಅಗ್ನಿಮುಖಾಂತ ವಿಧಿಯನ್ನು ಮಾಡಿ ವ್ಯಾಹೃತಿಯಿಂದ ಹೋಮಮಾಡಿ, ಪುರುಷಸೂಕ್ತದಿಂದ ಸಮಿತ್, ಪಾಯಸ ಆಜ್ಯ ಈ ದ್ರವ್ಯಗಳಿಂದ ಪ್ರತ್ಯೇಕ ಹದಿನಾರು ಆಹುತಿಗಳನ್ನು ಕೊಡಬೇಕು, ಪುರುಷಾಯ ನಾರಾಯಣಾಯೇದಂ ನಮಮ ಎಂದು ಸರ್ವತ್ರ ಉದ್ದೇಶ ತ್ಯಾಗ ಮಾಡಬೇಕು. ಅನಂತರ –

ಓಂ ನಮೋ ನಾರಾಯಣಾಯ ಸ್ವಾಹಾ
ಓಂ ನಮೋ ಭಗವತೇ ವಾಸುದೇವಾಯ ಸ್ವಾಹಾ
ಓಂ ಅತೋದೇವಾ ಇತಿ - ದೇವೇಭ್ಯಃ ಇದಂ ನಮಮ
ಓಂ ಇದಂ ವಿಷ್ಣುರಿತಿ ವಿಷ್ಣವೇ
ತ್ರೀಣಿಪದಾ - - ಧಾರಯನ್ ಸ್ವಾಹಾ, ವಿಷ್ಣವೇ - - ನಮಮ
ವಿಷ್ಣೋಃ ಕರ್ಮಾಣಿ ಪಶ್ಯತ - - ವಿಷ್ಣವ ಇದಂ ನಮಮ
ಓಂ ತದ್ವಿಷ್ಣೋಃ ಪರಮಂ ಪದಂ - ಇತಿ ವಿಷ್ಣವ ಇದಂ ನಮಮ.

ನಂತರ ಆಜ್ಯದಿಂದ ಕೇಶವಾದಿ ದ್ವಾದಶನಾಮಗಳಿಂದ ಹೋಮವು, ಕೃಷ್ಣಪಕ್ಷದಲ್ಲಿ ಸಿದ್ಧಿಹೊಂದಿದ್ದರೆ ಸಂಕರ್ಷಣಾದಿ ದ್ವಾದಶನಾಮಗಳಿಂದ ಹೋಮಮಾಡಬೇಕು.

ನಂತರ ಸ್ವಿಷ್ಟಕೃದಾದಿ ಹೋಮಶೇಷವನ್ನು ಮುಗಿಯಿಸಿ, ಅಗ್ನಿಯ ಮುಂದೆ ಪೂರ್ವಾಗ್ರವಾಗಿ ದರ್ಭೆಯನ್ನು ಹಾಸಿ, ಪುರುಷಸೂಕ್ತದಿಂದ ಓಂ ನಮೋ ನಾರಾಯಣಾಯ ಬಲಿಂದದಾಮಿ ಎಂದು ಪಾಯಸ ಬಲಿದಾನ ಮಾಡಬೇಕು. ಆದರ ಮೇಲೆ ಉದಕವನ್ನು ಬಿಡಬೇಕು. ಯಜ್ಞೇಶ್ವರಾಯೇತಿ ಸರ್ವೋಪಚಾರ ಪೂಜಾಂ ಕುರ್ಯಾತ್. ಅನಂತರ ಯಸ್ಯ ಸ್ಮೃತ್ಯಾ – ತದಸ್ತುತೇ, ಅನೇನ ನಾರಾಯಣ ಬಲಿಹೋಮೇನ ಜಪೇನಚ ಭಗವಾನ್ ಸರ್ವಾತ್ಮಕಃ ಸರ್ವಂ ಶ್ರೀ ಯಜ್ಞೇಶ್ವರ ಪ್ರೀಣಾತು, ಎಂದು ಸಮರ್ಪಣೆ ಮಾಡಬೇಕು.

ಅನಂತರ ಬ್ರಾಹ್ಮಣರ ಪೂಜೆ - ಸ್ವಾಗತ, ಪಾದ್ಯ, ಆಸನ ಮೊದಲಾದ ಕ್ರಮವನ್ನು ಅನುಸರಿಸಬೇಕು. ಯಥಾವಿಧಿ ಪಾತ್ರಪರಿವೇಷಣ ಮಾಡಿ ದತ್ತಮಾಡಿ ಆಪೋಶನ ಹಾಕಬೇಕು. ಭೋಜನಕಾಲದಲ್ಲಿ ನಾರಾಯಣ ಉಪನಿಷತ್ತನ್ನು ಹೇಳಬೇಕು. ಭೋಜನಾನಂತರ ಬ್ರಾಹ್ಮಣಸನ್ನಿಧಿಯಲ್ಲಿ ಪೂರ್ವಾಗ್ರವಾಗಿ ದರ್ಭೆಯನ್ನು ಹಾಸಿ, ಯವೋದಕವನ್ನು ಬಿಟ್ಟು ಅವಶಿಷ್ಟಾನ್ನದಿಂದ ಬಲಿಯನ್ನು ಹಾಕಿಸಬೇಕು.

ಅನಂತರ ಪುನಃ ಸಂಕಲ್ಪಮಾಡಿ, ನಾರಾಯಣಬಲಿಗೆ ಅಂಗವಾಗಿ ಕೇಶವಾದಿ ದ್ವಾದಶಪಿಂಡಪ್ರದಾನ ಮಾಡಬೇಕು. ಕೇಶವಾಯ ಇದಂ ಪಿಂಡಂ ದದಾಮಿ–ಇತ್ಯಾದಿಯಾಗಿ ಉಚ್ಚರಿಸಬೇಕು. ಆದರಮೇಲೆ ಜಲದಿಂದ ಮಾರ್ಜನೆ ಮಾಡಬೇಕು. ಪುನಃ ವಿಷ್ಣುಪೂಜೆ ಮಾಡಿ ಗುರುಪ್ರೀತಿಗಾಗಿ ಸಾಲಗ್ರಾಮ ದಾನ, ದಶದಾನಗಳನ್ನು ಮಾಡಬೇಕು. ಅನಂತರ ಬ್ರಾಹ್ಮಣರಿಗೆ ಪ್ರದಕ್ಷಿಣೆ ನಮಸ್ಕಾರಮಾಡಿ, ಪುರುಷಸೂಕ್ತದಿಂದ ಸ್ತುತಿಸಿ ಬ್ರಾಹ್ಮಣರನ್ನು ವಿಸರ್ಜಿಸಬೇಕು. ೧೩ನೇ ದಿನ ಆರಾಧನೆ ಮಾಡಬೇಕು.

## ಯತಿಯ ಆರಾಧನೆಯ ಸಂಕ್ಷೇಪವಿಧಿ

ದ್ವಾದಶಾಹ (೧೨ನೇ ದಿನ), ತ್ರಯೋದಶಾಹ (೧೩ನೇ ದಿನ) ವಾಗಲಿ ಆಚಾರವಿದ್ದಂತೆ ಯತಿಯ ಆರಾಧನೆ ಮಾಡಬೇಕು. ಹದಿನಾರು (೧೬) ಜನ ಬ್ರಾಹ್ಮಣರು (ಅಥವಾ ಯತಿಗಳು) ಇವರನ್ನು ನಿಮಂತ್ರಣಕ್ಕೆ ಆಹ್ವಾನಿಸಬೇಕು. ಅಶಕ್ತನಾದವನು ಯಥಾಶಕ್ತಿ ೪ ಜನ ಬ್ರಾಹ್ಮಣರನ್ನಾದರೂ ಕರೆದು ಯಥೋಚಿತ ಗುರು, ಪರಮಗುರು, ಪರಮೇಷ್ಠಿಗುರು, ಪರಾತ್ ಪರಗುರುಗಳನ್ನು ಕೇಶವಾದಿ ದ್ವಾದಶನಾಮಗಳಿಂದ ನಾರಾಯಣಪ್ರೀತಿಗಾಗಿ ಆರಾಧನೆ ಮಾಡಬೇಕು.

2 ದೇಶಕಾಲಗಳನ್ನು ಸ್ಮರಿಸಿ, ಶುಭತಿಥೌ – - ಖನನದಿನಾದಾರಭ್ಯ ಅಸ್ಮಿನ್ ತ್ರಯೋದಶ ದಿನೇ, ಅಸ್ಮದ್ ಗುರೋಃ ಬ್ರಹ್ಮೀಭೂತಸ್ಯ ನಾರಾಯಣಪ್ರೀತ್ಯರ್ಥಂ ಸಮಾರಾಧನಂ ಕರಿಷ್ಯೇ–ಎಂದು ಸಂಕಲ್ಪ ಮಾಡಬೇಕು.

3 (೧೬) ಕ್ಷಣದಾನ, ಪಾದಪ್ರಕ್ಷಾಳನ. ಆಚಮನ ಮಾಡಿ, ಪಾದೋದಕವನ್ನು ಬೇರೆ ಪಾತ್ರೆಯಲ್ಲಿ ಹಿಡಿದಿಟ್ಟು, ಗಂಧಪುಷ್ಪಾದಿಗಳಿಂದ ಭೋಜನಾನಂತರ ಪೂಜಿಸಬೇಕು.

4 ಬ್ರಾಹ್ಮಣರನ್ನು ಪೂರ್ವ ಅಥವಾ ಉತ್ತರಮುಖವಾಗಿ ಕೂರಿಸಿ. ಷೋಡಶೋಪಚಾರಗಳಿಂದ ಅಥವಾ ಪಂಚೋಪಚಾರಗಳಿಂದ ಪೂಜಿಸಿ. ಸಪರಿಕರ ಅನ್ನವನ್ನು ಪರಿವೇಷಣಮಾಡಿ ಗಾಯತ್ರಿಯಿಂದ ಪ್ರೋಕ್ಷಿಸಿ. ಯಥಾವಿಧಿ ಅನ್ನದಾನ ಮಾಡಬೇಕು. ತಂಬಿಗೆ ಪಂಚಪಾತ್ರೆಗಳನ್ನು ಶಕ್ತರಾದವರು ಪ್ರತ್ಯೇಕ ವಸ್ತ್ರಗಳೊಡನೆ ಕೊಡಬೇಕು. ಭೋಜನಾನಂತರ ದಕ್ಷಿಣೆ ತಾಂಬೂಲ ದಾನಮಾಡಬೇಕು.

5 ತೀರ್ಥ ಹಿಡಿದ ಪಾದೋದಕವನ್ನು ಒಂದು ಕಲಶದಲ್ಲಿ ಇಟ್ಟು ಪದ್ಮಮಂಡಲ ಬರೆದು ಅಕ್ಕಿಯನ್ನು ಹಾಕಿ ಅದರ ಮೇಲೆ ಕಲಶವಿರಸಬೇಕು. ಪುರುಷಸೂಕ್ತದಿಂದ ತೀರ್ಥರಾಜಾಯನಮಃ ಎಂದು ಷೋಡಶೋಪಚಾರ ಪೂಜೆ ಮಾಡಬೇಕು.

ಅನಂತರ ಆ ತೀರ್ಥಕಲಶವನ್ನು ತಲೆಯಮೇಲೆ ಇರಿಸಿಕೊಂಡು ಬಂಧುಗಳೊಡನೆ ಬ್ರಾಹ್ಮಣರನ್ನು ಪ್ರದಕ್ಷಿಣೆ ಮಾಡಿ ನಮಸ್ಕರಿಸಿ, ಮೊದಲು ಕುಳಿತ ಬ್ರಾಹ್ಮಣಹಸ್ತದಿಂದ ಆ ತೀರ್ಥವನ್ನು ಸ್ವೀಕರಿಸಿ ಕುಡಿಯಬೇಕು.

6 ಆದರ ಮಂತ್ರ ಹೀಗಿದೆ—

ಅವಿದ್ಯಾಮೂಲಶಮನಂ ಸರ್ವಪಾಪಪ್ರಣಾಶನಂ ।
ಪಿಬಾಮಿ ಗುರುಪತ್ತೀರ್ಥಂ ಪುತ್ರಪೌತ್ರಪ್ರವರ್ಧನಂ ॥

ಅವಿದ್ಯಾಮೂಲಶಮನಂ ಸರ್ವಪಾಪ ಪ್ರಣಾಶನಂ ।
ಗುರುಪಾದೋದಕಂ ತೀರ್ಥಂ ಸಂಸಾರದ್ರುಮನಾಶನಂ ॥

ಅನಂತರ ಕರ್ಮವನ್ನು ಈಶ್ವರಾರ್ಪಣೆ ಮಾಡಿ, ಸುಹೃತ್ ಬಂಧುಗಳೊಡನೆ ಭುಂಜಿಸಬೇಕು. **ಇದೇ ರೀತಿಯಾಗಿ ಪ್ರತಿತಿಂಗಳೂ ಆರಾಧನೆ ಮಾಡಬೇಕು. ಆದರೆ ಮಾಸಿಕಶ್ರಾದ್ಧ ಮಾಡಬಾರದು.** ಪುತ್ರನಾದವನು ಪ್ರತಿವರ್ಷವೂ ಪಾರ್ವಣಶ್ರಾದ್ಧವನ್ನು ಮಾಡಿ, ಅನಂತರ ಆರಾಧನೆ ಮಾಡಬೇಕು.

ಪುತ್ರಾದಿ ಫಲಕಾಮನೆಯಿದ್ದರೆ –

ಶೋಷಣಂ ಪಾಪಪಂಕಸ್ಯ ದೀಪನಂ ಜ್ಞಾನತೇಜಸಃ ।
ಗುರೋಃಪಾದೋದಕಂ ಚಿತ್ರಂ ಪುತ್ರಪೌತ್ರಪ್ರವರ್ಧನಂ ॥

ಎಂಬ ಮಂತ್ರದಿಂದ ತೀರ್ಥವನ್ನು ಸ್ವೀಕರಿಸಬೇಕು.

## ನಾರಾಯಣಬಲಿ–ಪಾರ್ವಣಶ್ರಾದ್ಧಾದಿ ದಿನವಿಚಾರ

1 ನಾರಾಯಣಬಲಿ, ಪಾರ್ವಣ ಶ್ರಾದ್ಧಗಳನ್ನು ಒಂದೇ ದಿನ ಮಾಡುವ ಪಕ್ಷದಲ್ಲಿ ೧೧ನೆ ದಿನ, ಅಥವಾ ೧೨ನೇ ದಿನ ನಾರಾಯಣಬಲಿಯನ್ನು ಮಾಡಿ, ಅನಂತರ ಪಾರ್ವಣ ಮಾಡಬೇಕು.

2 ಎರಡು ದಿನಗಳಲ್ಲಿ ಮಾಡುವುದಾದರೆ ೧೧ನೇ ದಿನ ಪಾರ್ವಣ, ೧೨ನೇ ದಿನ ನಾರಾಯಣಬಲಿ ಆಚರಿಸಬೇಕು. ೧೨ನೇ ದಿನ, ೧೩ನೇ ದಿನ ದಲ್ಲಾದರೂ ಆರಾಧನೆ ಮಾಡಬೇಕು.

3 ಪಾರ್ವಣವನ್ನು ೧೧ನೇ ದಿನ ಮತ್ತು ಪ್ರತಿವರ್ಷದ ಮೃತತಿಥಿ ಯಲ್ಲೇ ಮಾಡಬೇಕು. **ಈ ನಿಯಮ ಯತಿಯ ಪುತ್ರಾದಿಗಳಿಗೆ ಮಾತ್ರ.** ಶಿಷ್ಯರಿಗೆ ಈ ನಿಯಮವಿಲ್ಲ. ಆರಾಧನೆ ಮಾಡುವುದಷ್ಟೆ.

4 ಪುತ್ರರಿಲ್ಲದ ಯತಿಗೆ ಶಿಷ್ಯನಾದರೂ ಪ್ರತಿವರ್ಷ ಪಾರ್ವಣ ಮಾಡಬೇಕು, (ಗೃಹಸ್ಥನಾಗಿದ್ದು ಪುತ್ರರಿಲ್ಲದೆ ಸನ್ಯಾಸಿಯಾಗಿ ಸಿದ್ಧಿ ಹೊಂದಿದ ಯತಿಗೆ ಹೇಳಿದ ನಿಯಮವಿದು.) ಅದಕ್ಕಾಗಿ ನಾಮಗೋತ್ರಗಳ ಉಲ್ಲೇ ಖನಾಧಿಕಾರ ಸಿದ್ಧಿಗಾಗಿ ಏಕಾದಶಾಹದಲ್ಲಿ ಶಿಷ್ಯನೂ ಪಾರ್ವಣಶ್ರಾದ್ಧವನ್ನು ಮಾಡಬೇಕು.

## ಗೌಣಕಾಲ

ನಾರಾಯಣಬಲಿ, ಆರಾಧನೆ ಇವುಗಳನ್ನು ದ್ವಾದಶಾಹಾದಿಗಳಲ್ಲಿ ಮಾಡಲು ಅವಕಾಶವಾಗವಿದ್ದಲ್ಲಿ ಶುಕ್ಲಪಕ್ಷದ ದ್ವಾದಶೀದಿನ ಅಥವಾ ಶ್ರವಣ ನಕ್ಷತ್ರವಿರುವ ದಿನ, ಪಂಚಮಿ, ಹುಣ್ಣಿಮೆ, ಅಮಾವಾಸ್ಯೆಗಳು ಗೌಣಕಾಲ ವೆಂದು ಹೇಳಿದೆಯಾದಕಾರಣ ಈ ದಿನಗಳಲ್ಲೂ ಮಾಡಬಹುದು. ಇದರಲ್ಲೂ ಪೂರ್ವ-ಪೂರ್ವ ಶ್ರೇಷ್ಠ,

## ಯತಿಸಂಸ್ಕಾರಾಧಿಕಾರ ನಿರ್ಣಯ

1 ದೇಶಾಂತರದಲ್ಲಿ ಪುತ್ರನಿದ್ದು, ತಂದೆಯಾದ ಯತಿಯು ಸಿದ್ಧಿ ಹೊಂದಿದ ಸಮಾಚಾರವನ್ನು ತಿಳಿದು, ಕ್ಷೌರಮಾಡಿಸಿಕೊಂಡು ಸ್ನಾನಮಾಡಿ, ಕ್ಷೀರತರ್ಪಣ, ಪೂಜೆ ಮೊದಲಾದುವನ್ನು ಹತ್ತುದಿನಗಳೂ ಮಾಡಿ, ೧೧ನೇ

ದಿನ ಪಾರ್ವಣ, ೧೨ನೇ ದಿನ ನಾರಾಯಣಬಲಿ, ಆರಾಧನೆಯನ್ನೂ ಮಾಡ ಬೇಕು,

2 ಹತ್ತಿರದಲ್ಲಿ ಜ್ಯೇಷ್ಠಪುತ್ರನಿದ್ದು ಎಲ್ಲವನ್ನೂ ಮಾಡಿದ್ದರೆ ಕನಿಷ್ಠ ಪುತ್ರನು ಮಾಡಬೇಕಾಗಿಲ್ಲ. ಆದರಲ್ಲೂ ದೇಶಾಂತರದಲ್ಲಿರುವವನು ಮೃತ ತಿಥಿಯನ್ನೇ ಹಿಡಿದು ಮಾಡಬೇಕು, ಆದರೆ ತಿಳಿದ ದಿನವನ್ನು ಹಿಡಿಯ ಬಾರದು.

3 ಮೃತತಿಥಿಯು ತಿಳಿಯದಿದ್ದರೆ ಸಮಾಚಾರ ತಿಳಿದ ದಿನವನ್ನೆ ಹಿಡಿದು ಮಾಡಬೇಕು. ಯತಿಸಂಸ್ಕಾರವನ್ನು ಮಾಡಿದವರಿಗೆ ಅಶ್ವಮೇಧ ಮಾಡಿದ ಫಲವು ಬರುವುದು. ಶಾಶ್ವತ ಬ್ರಹ್ಮಲೋಕವೇ ಲಭಿಸುವುದು,

4 ಅಸಂಸ್ಕೃತಂ ವಿಶೀರ್ಯೇತ ಯತೇರ್ಯತ್ರ ಕಳೇಬರಂ ।
ಧರ್ಮಲೋಪೋ ಭವೇತ್ ತತ್ರ ದುರ್ಭಿಕ್ಷಂ ಮರಣಂ ತಥಾ ॥

ಎಂದು ಹೇಳಿದಂತೆ ಯತಿಯ ಕಳೇಬರಕ್ಕೆ ಸಂಸ್ಕಾರ ಮಾಡದೇ ಹಾಗೆಯೇ ನಶಿಸುವಂತೆ ಬಿಟ್ಟರೆ ಧರ್ಮಲೋಪ, ದುರ್ಭಿಕ್ಷ, ಮರಣ ಇಂತಹ ಅರಿಷ್ಟ ಗಳಾಗುವುವು. ಆದರಿಂದ ಯತಿಯ ಕಳೇಬರಕ್ಕೆ ಸಂಸ್ಕಾರ ಮಾಡಬೇಕು. ಆದರಿಂದ ಶ್ರೇಯಸ್ಸಾಗುವುದು,

5 ತನ್ನ ಗುರುವು ದಿವಂಗತನಾದರೆ ಸನ್ಯಾಸಿಯಾದ ಶಿಷ್ಯನು ಆ ದಿನ ಉಪವಾಸ ಮಾಡಬೇಕು, ಸ್ನಾನ ಮಾಡಬಾರದು. ಸನ್ಯಾಸಿಯು ತನ್ನ ಪುತ್ರಾದಿಗಳ ಮರಣವನ್ನು ಕೇಳಿದರೂ ಸ್ನಾನ ಮಾಡಬಾರದು. ತಂದೆ ತಾಯಿಗಳ ಮರಣವು ಕಿವಿಗೆ ಬಿದ್ದರೆ ಸಚೇಲಸ್ನಾನಮಾಡಿ ಶುದ್ಧನಾಗಬೇಕು.

ದಿವಂಗತೇ ಗುರೌಶಿಷ್ಯಃ ಉಪವಾಸಂ ತದಾಚರೇತ್ ।
ನ ಸ್ನಾನಮಾಚರೇದ್ಭಿಕ್ಷುಃ ಪುತ್ರಾದಿ ನಿಧನೇ ಶ್ರುತೇ ॥
ಪಿತೃಮಾತೃಕ್ಷಯಂ ಶ್ರುತ್ವಾ ಸ್ನಾನಾಚ್ಛುದ್ಧ್ಯತಿ ಸಾಂಬರಾತ್ ॥

ಇದೇ ವಚನ ಆಧಾರವು.

## ಗೃಹಸ್ಥನಾಗಿದ್ದು ಸನ್ಯಾಸಿಯಾದವನ ಪತ್ನಿಯು ಹೇಗಿರಬೇಕು ?

ಈ ವಿಷಯದಲ್ಲಿ ಕೆಲವರಿಗೆ ಸಂಶಯ ಪರಿಚ್ಛೇದವಾಗಬೇಕಾಗಿದೆ. ಗೃಹಸ್ಥನು ಸನ್ಯಾಸವನ್ನು ಸ್ವೀಕರಿಸುವಾಗ ಪುತ್ರ-ಮಿತ್ರ-ಕಳತ್ರಾದಿ ಜನರಲ್ಲಿ ಮಮತೆಯನ್ನು ತ್ಯಜಿಸಿಯೇ ಇರುವನು, ಆದರೆ ಈತನ ಧರ್ಮಪತ್ನಿಯು ಪತಿಪುತ್ರಾದಿಗಳಲ್ಲಿ ಮಮತೆಯನ್ನು ತ್ಯಜಿಸಿರುವುದಿಲ್ಲವಾದುದರಿಂದ ಈಕೆಗೆ ತನ್ನ ಪತಿಯಲ್ಲಿ ಪತಿಭಾವವು ಇದ್ದೇ ಇರುವುದು. ಅದರಿಂದ ಪತಿಯು ಜೀವಂತನಾಗಿರುವವರೆಗೂ ಪತ್ನಿಯು ಸುವಾಸಿನಿಯಂತೆ ಮಾಂಗಲ್ಯವನ್ನು ಧರಿಸಿಕೊಂಡು ಪತಿವ್ರತೆಯಾಗಿಯೇ ಬಾಳಬೇಕು. ಸನ್ಯಾಸಿಯಾದ ಪತಿಯು ಸಿದ್ಧಿಹೊಂದಿದ ಮೇಲೆ ವಿಧವೆಯರಿಗೆ ಹೇಳಿದ ಧರ್ಮವನ್ನು ಆಚರಿಸುತ್ತಾ ಜೀವನವನ್ನು ಕಳೆಯಬೇಕು. ಪತಿಯು ಸನ್ಯಾಸಿಯಾದ ಮೇಲೆ ಮಾಂಗಲ್ಯವನ್ನು ತೆಗೆದುಹಾಕಲು ಯಾವ ಶಾಸ್ತ್ರವೂ ಕಾಣುವುದಿಲ್ಲ. ತೆಗೆದುಹಾಕಿದಲ್ಲಿ ತಪ್ಪಾಗುವುದು, ಆಚಾರದಲ್ಲೂ ಮಾಂಗಲ್ಯವನ್ನು ತೆಗೆಯಬೇಕೆಂಬುದು ಕಂಡಿಲ್ಲವೆಂದು ತಿಳಿಯುವುದು,

---

# ಪರಿಶಿಷ್ಠ

ಉಪಾಕರ್ಮದ ವಿಷಯದಲ್ಲಿ ಮತ್ತೊಂದು ವಿಷಯವನ್ನು ಗಮನಿಸಬೇಕಾಗಿದೆ.

ಶ್ರಾವಣೀ ಪೌರ್ಣಮಾಸ್ಯಾಸೀತ್ ಸಂಗವಾತ್ ಪರತೋ ಯದಿ ।
ತಥೈವೌದಯಿಕಂ ಗ್ರಾಹ್ಯಂ ನಾನ್ಯತ್ ವೃದ್ಧಿಮಭೀಪ್ಸುಭಿಃ ।
ಅನ್ವಾಧಾನದಿನೇ ಕುರ್ಯಾತ್ ಉಪಾಕರ್ಮಾದಿಕಂ ಸದಾ ।
ಏತದ್ಯಾಜುಷಿಕಂ ವಿದ್ಧಿ ವಸಿಷ್ಠವಚನಂ ಯಥಾ ॥

ಶ್ರಾವಣ ಪೂರ್ಣಿಮೆಯು ಸಂಗಮಕಾಲಕ್ಕಿಂತ ಮುಂದೆಯೂ ಇರುವುದಾದರೆ ಆ ಪೂರ್ಣಿಮೆಯೇ ಔದಯಿಕಿ ಎಂದು ಹೇಳುವುದು. ಸೂರ್ಯೋದಯಕ್ಕೆ ಮಾತ್ರ ಪೂರ್ಣಿಮೆಯಿದ್ದರೆ ಸಾಲದು. ಇದನ್ನು ಔದಯಿಕಿಯೆಂದು ಹೇಳಿಲ್ಲ. "ಸಂಗವಾತ್ ಪರತಃ ಸಾಚೇತ್ ಪೂರ್ಣಮಾ ಔದಾಯಿಕೀ ಸ್ಮೃತಾ" ಎಂದು ಬೃಹಸ್ಪತಿ ವಚನವಿದೆ.

ಇಷ್ಟು ಮಾತ್ರವಲ್ಲ—

ಹಸ್ತಶ್ರವಣಪರ್ವಾಣಿ ಗ್ರಾಹ್ಯಾಣ್ಯೌದಯಿಕಾನಿತು ।
ಹಸ್ತರ್ಕ್ಷಂ ಸಂಗವಸ್ಪೃಷ್ಟಂ ತ್ರಿಮುಹೂರ್ತಂತು ವೈಷ್ಣವಂ ॥

ಎಂದು ಬೃಹಸ್ಪತಿವಚನದಂತೆ ಆಯಾಯಾ ಶಾಖೆಯವರು ಋಗ್ವೇದಿಗಳು ತ್ರಿಮುಹೂರ್ತವಿರುವ ಶ್ರವಣನಕ್ಷತ್ರವಿರುವ ದಿನವನ್ನು, ಯಜುರ್ವೇದಿಗಳು ಸಂಗವಾತ್ ಪರದಲ್ಲಿರುವ ಪೂರ್ಣಿಮೆಯನ್ನೂ, ಸಾಮವೇದಿಗಳು ಸಂಗವಸ್ಪರ್ಶಿಯಾದ ಹಸ್ತನಕ್ಷತ್ರವಿರುವ ದಿನವನ್ನು ಹಿಡಿದು ಉಪಾಕರ್ಮ ಮಾಡಬೇಕು.

ಉತ್ಸರ್ಜನ ಮಾಡದಿದ್ದರೆ, **ಕಾಮೋಕಾರ್ಷೀನ್ ಮನ್ಯುರ ಕಾರ್ಷೀತ್** ಎಂಬ ಮಂತ್ರವನ್ನು ಪ್ರಾತಃಕಾಲವೇ ಜಪಿಸಬೇಕು. ಆನಂತರ ಉಪಾಕರ್ಮ ಮಾಡಬೇಕು. " **ಕಾಮಮನ್ಯುಭ್ಯಾಂ ವಾ ಜುಹುಯಾತ್ ಕಾಮೋಕಾರ್ಷೀನ್ಮನ್ಯುರಕಾರ್ಷೀದಿತಿ ಜಪೇದ್ವಾ** " ಎಂದು ಉತ್ಸರ್ಜನವನ್ನು ಮಾಡದೆ ಬಿಟ್ಟರೆ ಪ್ರಾಯಶ್ಚಿತ್ತವಿದೆ. ಈ ಮಂತ್ರಗಳಿಂದ ಹೋಮವನ್ನು ಮಾಡಬೇಕು. ಅಥವಾ ಜಪ ಮಾಡಬೇಕು. ಉತ್ಸರ್ಜನವನ್ನು ಮನೆಯಲ್ಲಿ ಮಾಡಬಾರದು. ನದೀತೀರದಲ್ಲಿ, ಅಥವಾ ಗ್ರಾಮದ ಹೊರಗೆ ಮಾಡಬೇಕೆಂದು ಹೇಳಿದೆ. ಇದು ಆಗದಿದ್ದರೆ, ಮನೆಯಲ್ಲಿ ಉಪಾಕರ್ಮ ಮಾಡುವವರು ಉತ್ಸರ್ಜನ ಮಾಡದೆ ಇದ್ದರೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು.

## ಗೃಹಾರಂಭದಲ್ಲಿ ಶಿಲಾವಿನ್ಯಾಸ ಮಂತ್ರಗಳು

ನಂದೇ ನಂದಯ ವಾಸಿಷ್ಠೇ ಪಶುಭಿಶ್ಚಾಪ್ಯುಹಿ ಪ್ರಜಾಃ ।
ಭದ್ರೇ ಕಾಶ್ಯಪ ದಾಯಾದೇ ಪ್ರಜಾನಾಂ ಭದ್ರಮಾವಹ ॥

ಜಯೇ ಭಾರ್ಗವದಾಯಾದೇ ಪ್ರಜಾನಾಂ ಜಯ ಮಾವಹ ।
ಪೂರ್ಣೇ ಭಾರ್ಗವ ದಾಯಾದೇ ಪೂರ್ಣಕಾಮಾಂ ಪ್ರಜಾಂಕುರು ॥

ಸರ್ವಬೀಜ ಸಮಾಯುಕ್ತೇ ಸರ್ವಗಂಧೌಷಧೀಯುತೇ ।
ರುಚಿರೇ ನಂದನೇ ನಂದೇ ವಾಸಿಷ್ಠೇ ರಮ್ಯತಾಂ ಗೃಹೇ ॥

ಪ್ರಜಾಪತಿಸುತೇ ದೇವಿ ಗೃಹೇ ಕಾಶ್ಯಪಿ ರಮ್ಯತಾಂ ।
ಪೂಜಿತೇ ಪರಮಾಚಾರ್ಯೈಃ ಗಂಧಮಾಲ್ಯೈರಲಂಕೃತೇ ॥

ಭವಭೂತಿಕರೇ ದೇವಿ ಗೃಹೇ ಭಾರ್ಗವಿ ರಮ್ಯತಾಂ ।
ಅವ್ಯಂಗೇಚಾಕ್ಷತೇ ಪೂರ್ಣೇ ಮುನೇರಂಗಿರಸಃ ಸುತೇ ॥

ಇಷ್ಟಕಾಂ ಸಂಪ್ರಯಚ್ಛತ್ವಂ ಪ್ರತಿಷ್ಠಾಂ ಮೇಗೃಹೇಕುರು ।
ಗ್ರಾಮಸ್ವಾಮಿ ಪುರಸ್ವಾಮಿ ಗೃಹಸ್ವಾಮಿ ಪರಿಗೃಹೇ ।
ಮನುಷ್ಯಪಶುಹಸ್ತ್ಯಶ್ವ ಧನವೃದ್ಧಿಕರೀಭವ ॥

## ಶಿಲಾನ್ಯಾಸ ವಿಧಿ

ಸ್ತಂಭಗಳನ್ನು ಇರಿಸದಿರುವಾಗ ಶಂಕುಸ್ಥಾಪನೆ ಮಾಡಬೇಕು. ವಾಸ್ತು ಪುರುಷನ ಕುಕ್ಷಿಸ್ಥಾನದಲ್ಲಿ (ಮಧ್ಯದಲ್ಲಿ) ಶಂಕುವನ್ನು ಹೂಳಬೇಕು. ಇದು ಪುತ್ರಪೌತ್ರವೃದ್ಧಿಗೆ ಕಾರಣ.

## ಶಂಕುವಿನ ಪ್ರಮಾಣ

ಹನ್ನೆರಡು ಅಂಗುಲದ ಒಂದು ಗೂಟ. ಅದಕ್ಕೆ ಮೇಲಿನ ಭಾಗ ನಾಲ್ಕಂಗುಲ ಅಷ್ಟಕೋಣವಾಗಿಯೂ, ಮಧ್ಯಭಾಗ ನಾಲ್ಕಂಗುಲ ಚತುಷ್ಕೋಣವಾಗಿಯೂ, ತಳಭಾಗವು ಕೋಣವಿಲ್ಲದೆ ದುಂಡಾಗಿಯೂ, ಋಜುವಾಗಿಯೂ, ರಂಧ್ರವಿಲ್ಲದೆಯೂ ನೆಟ್ಟಗಿರಬೇಕು. ಈ ಲಕ್ಷಣವಿರುವ ಶಂಕುವನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ, ಚಿನ್ನ, ಹವಳ, ಮುತ್ತು ಮೊಲಾದುವುಗಳನ್ನು ಹಾಕಿದ್ದ ಹಳ್ಳದಲ್ಲಿ (ಗುಂಡಿಯಲ್ಲಿ) ನೆಡಬೇಕು. ಮಂಗಳವಾದ್ಯ ಘೋಷದೊಂದಿಗೆ ಶುಭದಿನದಲ್ಲಿ ನೆಡಬೇಕು. ವಾಸ್ತು ಪುರುಷನ ಕುಕ್ಷಿ (ಹೊಟ್ಟೆ) ಯ ಎಡಭಾಗದ ಸ್ಥಾನದಲ್ಲಿ ನೆಡಬೇಕು.

ಹೀಗೆಂದು ಕಾಲಾಮೃತದಲ್ಲ ಹೇಳಿದೆ. ಅದರಂತೆ ಶಂಕುಸ್ಥಾಪನೆ ಮಾಡಬೇಕು, ವಾಪೀ, ಕೂಪ, ತಟಾಕಗಳ ನಿರ್ಮಾಣ ಮಾಡುವಾಗ ಭಿತ್ತಿಯ ತಳಭಾಗದಲ್ಲೂ, ದೇವಾಲಯಗಳಲ್ಲಿ ಭಿತ್ತಿಯ ಹೊರಾಂಗಣದ ಸಮೀಪದಲ್ಲೂ, ಮನುಷ್ಯರ ಗೃಹಗಳಲ್ಲಿ ನಡುವೆ, ಹಾಗೂ ಪಶುಶಾಲೆಗಳಲ್ಲಿ ನಡುವೆ ಶಂಕುಸ್ಥಾಪನೆ ಮಾಡಬೇಕು.

ಮಂದಾರ, ವೇಣು (ಬಿದಿರು) ಕಗ್ಗಲಿ, ಕೋವಿದಾರ, ಈಚಲು, ಗಿರಿಮಲ್ಲಿಗೆ ಇವುಗಳಿಂದ ತೆಗೆದ ಶಂಕುಗಳು ಶ್ರೇಷ್ಠ. ಅಶ್ವತ್ಥ, ತಾಳೆ ಕಪಿತ್ಥ, ಮುಳ್ಳುಮರಗಳು ತ್ಯಾಜ್ಯ, ಶ್ರೇಷ್ಠವಲ್ಲ.

## ಶಿಲಾನ್ಯಾಸ, ಸ್ತಂಭಸ್ಥಾಪನ

ವಾಸ್ತುಪುರುಷನ ಕುಕ್ಷಿಸ್ಥಾನದಲ್ಲಿ ಸ್ತಂಭ ಮತ್ತು ಶಿಲಾನ್ಯಾಸ ಮಾಡಬೇಕೆಂದು ಕೆಲವರ ಮತ. ಕೆಲವರು ಈಶಾನ್ಯದಿಕ್ಕಿನಲ್ಲಿ ಶಿಲಾನ್ಯಾಸ, ಆದ್ಯಸ್ತಂಭ ಸ್ಥಾಪನೆಮಾಡುವರು. ನವರತ್ನಗಳು, ಬೆಳ್ಳಿ, ಚಿನ್ನ, ಸಕಲ ಧಾನ್ಯಬೀಜಗಳು, ಗಂಧ, ದರ್ಭೆ, ಹೂ, ಹಣ್ಣು ಇವುಗಳನ್ನು ಶಿಲಾನ್ಯಾಸ ಕಾಲದಲ್ಲಿ ಹಾಕಬೇಕು.

ಮನೆಯ ಮೂಲೆ ದಿಕ್ಕುಗಳಲ್ಲಿ ಕಲಶಗಳನ್ನು ಸ್ಥಾಪಿಸಿ, ಪೂಜಿಸಿ, ಪುಣ್ಯಾಹವಾಚನ ಘೋಷದಿಂದ, ಈಶಾನ್ಯದಿಕ್ಕಿನಿಂದ ಆರಂಭಿಸಿ ಪ್ರದಕ್ಷಿಣೆಯಾಗಿ ಶಿಲಾನ್ಯಾಸ, ಸ್ತಂಭಸ್ಥಾಪನೆ ಮಾಡಬೇಕು. ಮೇಲಕ್ಕೇರಿಸಿದ ಸ್ತಂಭವನ್ನು ವಸ್ತ್ರದಿಂದ ಮುಚ್ಚಿರಬೇಕು.

## ಗ್ರಹಣ ಶಾಂತಿವಿಧಿ

ಸೂರ್ಯಸಂಕ್ರಾಂತಿ, ಸೂರ್ಯ ಚಂದ್ರ ಗ್ರಹಣಗಳು, ಜನ್ಮನಕ್ಷತ್ರ, ಜನ್ಮದಶಮಿ, ಏಕೋನವಿಂಶತಿ (೧೯)ನೇ ತಾರೆಗಳಲ್ಲಿ, (ತ್ರಿಜನ್ಮತಾರೆಗಳಲ್ಲಿ) ಆದರೆ, ಆತನಿಗೆ ರೋಗ ಅಥವಾ ಮರಣ ಸಂಭವವಿದೆಯಾದ ಕಾರಣ ಶಾಂತಿಯು ಅವಶ್ಯಕ. ದಾನ, ಹೋಮ, ದೇವಾರ್ಚನ, ಜಪ, ಅಭಿಷೇಕ ಇವುಗಳು ದೋಷಪರಿಹಾರಕ್ಕಾಗಿ ಕರ್ತವ್ಯವಾಗಿವೆ.

ಗ್ರಹಣವಾಗುವ ಮೊದಲು ನಾಲ್ಕು ಬ್ರಾಹ್ಮಣರನ್ನು ಕರೆದು ಪೂಜಿಸಿ ನಾಲ್ಕುಕಲಶಗಳಲ್ಲಿ ನೀರನ್ನು ತುಂಬಿ, ಪಂಚಪಲ್ಲವ, ಪಂಚಗವ್ಯ, ಪಂಚರತ್ನ, ಪಂಚತ್ವಕ್ಕುಗಳು, ಪಲ್ಲವಗಳನ್ನು ವಿಷ್ಣುಕ್ರಾಂತಿ, ಸಹದೇವಿ ಶತಾವರಿ, ಬಲಾ ಗೋರೇಚನ, ದೇವದಾರು, ರಕ್ತಚಂದನ ಮೊದಲಾದವುಗಳನ್ನು ಹಾಕಿ ಅನಂತರ ಮುಂದೆ ಹೇಳಿದಂತೆ ಇಂದ್ರಾದಿ ಲೋಕಪಾಲಕರನ್ನು ಆವಾಹನೆ ಮಾಡಿ ಬ್ರಹ್ಮವಿಷ್ಣು ಸೂರ್ಯ, ರುದ್ರರನ್ನು ಆವಾಹನೆಮಾಡಿ ವರುಣ ದೇವತೆಯನ್ನು ವರುಣಮಂತ್ರಗಳಿಂದಲೂ ಆವಾಹನೆಮಾಡಬೇಕು.

## ಆವಾಹನೆಯ ಮಂತ್ರಗಳು

1 ಯೋಽಸೌ ವಜ್ರಧರೋದೇವಃ ಆದಿತ್ಯಾನಾಂ ಪ್ರಭುರ್ಮತಃ ।
ಸಹಸ್ರ ನಯನಶ್ಚಂದ್ರಗ್ರಹಪೀಡಾಂವ್ಯಪೋಹತು ॥

2 ಮುಖಂ ಯಃ ಸರ್ವದೇವಾನಾಂ ಸಪ್ತಾರ್ಚಿರಮಿತದ್ಯುತಿಃ ।
ಚಂದ್ರೋಪರಾಗ ಸಂಭೂತಾಮಗ್ನಿಃ ಪೀಡಾಂ ವ್ಯಪೋಹತು ॥

3 ಯಃ ಕರ್ಮಸಾಕ್ಷೀ ಲೋಕಾನಾಂ ಧರ್ಮೋಮಹಿಷವಾಹನಃ ।
ಮಮ ಚಂದ್ರೋಪರಾಗೋತ್ಥಾಂ ಗ್ರಹಪೀಡಾಂವ್ಯಪೋಹತು ॥

4 ರಕ್ಷೋಗಣಾಧಿಪಃ ಸ್ವಾಮೀ ನೀಲಾಂಜನ ಸಮಪ್ರಭಃ ।
ಖಡ್ಗಹಸ್ತೋಽತಿಭೀಮಶ್ಚ ಗ್ರಹಪೀಡಾಂವ್ಯಪೋಹತು ॥

5 ನಾಗಪಾಶಧರೋದೇವಃ ಸದಾ ಮಕರವಾಹನಃ ।
ಚಂದ್ರೋಪರಾಗ ಕಲುಷಂ ವರುಣೋಮೇವ್ಯಪೋಹತು ॥

6 ಪ್ರಾಣರೂಪೋಹಿಲೋಕಾನಾಂ ಸದಾಕೃಷ್ಣಮೃಗಪ್ರಿಯಃ ।
ವಾಯುಶ್ಚಂದ್ರೋಪರಾಗೊತ್ಥಾಂ ಗ್ರಹಪೀಡಾಂವ್ಯಪೋಹತು॥

7 ಯೋಽಸಾವಧಿಪತಿಃ ಖಡ್ಗಶೂಲ ಚಕ್ರಗದಾಧರಃ ।
ಚಂದ್ರೋಪರಾಗದುರಿತಂ ಧನದೋಮೇವ್ಯಪೋಹತು ॥

8 ಯೋಽಸಾವಿಂದುಧರೋದೇವಃ ಪಿನಾಕೀ ವೃಷವಾಹನಃ ।
ಚಂದ್ರೋಪರಾಗಪಾಪಾನಿ ನಿವಾರಯತು ಶಂಕರಃ ॥

9 ತ್ರೈಲೋಕ್ಯೇ ಯಾನಿಭೂತಾನಿ ಸ್ಥಾವರಾಣಿ ಚರಾಣಿಚ ।
ಬ್ರಹ್ಮವಿಷ್ಣ್ವರ್ಕರುದ್ರಾಶ್ಚ ದಹಂತುಮಮಪಾತಕಂ ॥

ಏವ ಮಾವಾಹಯೇದ್ದೇವಾನ್ ಮಂತ್ರೈರೇಭಿಶ್ಚವಾರುಣೈಃ । ಏತಾನೇವತಥಾಮಂತ್ರಾನ್ ಸ್ವರ್ಣಪಟ್ಟೇ ವಿಲೇಖಯೇತ್ ॥ ತಾಮ್ರಪಟ್ಟೇಽಥವಾಲಿಖ್ಯ ನವವಸ್ತ್ರೇತಥೈವಚ । ಮಸ್ತಕೇ ಯಜಮಾನಸ್ಯ ನಿದಧ್ಯುಸ್ತೇ ದ್ವಿಜೋತ್ತಮಾಃ ॥ ಕಲಶಾನ್ ದ್ರವ್ಯಸಂಯುಕ್ತಾನ್ ನಾನಾತೀರ್ಥ

ಸಮನ್ವಿತಾನ್ । ಗೃಹೀತ್ವಾಸ್ಥಾಪಯೇತ್‌ಗೂಢಂ ಭದ್ರಪೀಠೋಪರಿಸ್ಥಿತಂ । ಪೂರ್ವೋಕ್ತೈರೇವ ಮಂತ್ರೈಶ್ಚ ಯಜಮಾನಂ ದ್ವಿಜೋತ್ತಮಾಃ ॥ ಅಭಿಷೇಕಂ ತತಃ ಕುರ್ಯಾತ್ ಮಂತ್ರೈರ್ವಾರುಣ ಸೂಕ್ತಜೈಃ । ತತಃ ಶುಕ್ಲಾಂಬರಧರಃ ಶುಕ್ಲಮಾಲ್ಯಾನುಲೇಪನಃ । ಆಚಾರ್ಯಂ ಪೂಜಯೇತ್ ಪಶ್ಚಾತ್ ಸ್ವರ್ಣಪಟ್ಟಂ ನಿವೇದಯೇತ್ ಎಂದು ಹೇಳಿದೆ.

ಈ ಮೇಲ್ಕಂಡ ಒಂಬತ್ತು ಮಂತ್ರಗಳಿಂದ ಆವಾಹನೆ ಮಾಡುವಂತೆ ಅದೇ ಮಂತ್ರಗಳನ್ನು ಚಿನ್ನದ ಅಥವಾ ತಾಮ್ರದ ಪಟ್ಟಿಯಲ್ಲೋ, ಹೊಸ ಬಟ್ಟೆಯ ಮೇಲೋ ಬರೆದು ಯಜಮಾನನ ಹಣೆಗೆ ಇಟ್ಟು ಕಟ್ಟಬೇಕು. ನಾನಾ ತೀರ್ಥಗಳಿಂದ ತುಂಬಿದ ಕಲಶಗಳನ್ನು ಹಿಡಿದು ಯಜಮಾನನಿಗೆ ಅಭಿಷೇಕ ಮಾಡಬೇಕು. ವರುಣ ಮಂತ್ರಗಳಿಂದ ಸ್ನಾನ ಮಾಡಿಸಬೇಕು, ನಂತರ ನವಶ್ವೇತವಸ್ತ್ರವನ್ನು ಧರಿಸಿ, ಬಿಳಿ ಹೂಮಾಲಿಕೆ, ಗಂಧಗಳನ್ನು ಇರಿಸಿಕೊಂಡು ಆಚಾರ್ಯನನ್ನು ಪೂಜಿಸಿ ಚಿನ್ನದ ಪಟ್ಟಿಯನ್ನು ದಾನ ಮಾಡಬೇಕು.

## ಗ್ರಹಣಶಾಂತಿ ಮತ್ತೊಂದು ಬಗೆ

ಸೂರ್ಯಗ್ರಹೇ ಸೂರ್ಯರೂಪಂ ಸುವರ್ಣೇನ ವಿಶೇಷತಃ ।
ಚಂದ್ರಂ ಚಂದ್ರಗ್ರಹೇ ಧೀಮಾನ್ ರಜತೇನ ಪ್ರಕಲ್ಪಯೇತ್ ।
ರಾಹುರೂಪಂ ಪ್ರಕುರ್ವೀತ ನಾಗೇನೈವ ವಿಚಕ್ಷಣಃ ॥

ಇಲ್ಲಿ ನಾಗೇನ = ಸೀಸೇನ ಎಂದು ಶಾಂತಿಮಯೂಖದಲ್ಲಿ ಬರೆದಿದೆ. ಆದ್ದರಿಂದ ಸೀಸದಿಂದ ರಾಹುರೂಪವನ್ನು ಮಾಡಿಸಿ, ಪೂಜಿಸಬೇಕು. ಸೂರ್ಯಗ್ರಹಣದಲ್ಲಿ ಸೂರ್ಯನ ಪ್ರತಿಮೆಯನ್ನು ಚಿನ್ನದಿಂದಲೂ, ಚಂದ್ರ ಗ್ರಹಣದಲ್ಲಿ ಬೆಳ್ಳಿಯಿಂದ ಚಂದ್ರಪ್ರತಿಮೆಯನ್ನು ಮಾಡಿಸಿ ಪೂಜಿಸಿ, ಕಂಚು, ಅಥವಾ ತಾಮ್ರದ ಪಾತ್ರೆಯಲ್ಲಿ ತುಪ್ಪವನ್ನು ಹಾಕಿ ಇರಿಸಿ, ತಿಲ, ವಸ್ತ್ರ, ದಕ್ಷಿಣೆಗಳನ್ನು ಪಾತ್ರೆಸಹಿತ ದಾನಮಾಡಬೇಕೆಂದು ತಿಳಿಯುವುದು.

138 ನೇ ಪೇಜಿನಲ್ಲಿ ಚಿನ್ನದ ನಾಗಬಿಂಬವನ್ನು ತಯಾರಿಸಿ. ಸೂರ್ಯ ಬಿಂಬವನ್ನು ಚಿನ್ನದಲ್ಲೂ, ಚಂದ್ರಬಿಂಬವನ್ನು ಬೆಳ್ಳಿಯಲ್ಲೂ ತಯಾರಿಸಿ, ಪೂಜಿಸಿ. ಜನ್ಮನಕ್ಷತ್ರ. ಜನ್ಮರಾಶಿಗ್ರಹಣವಾದಲ್ಲಿ ಆಯಾಯ ನಕ್ಷತ್ರ, ರಾಶಿಯವರು ದಾನಮಾಡಬೇಕೆಂದು ತಿಳಿಸಿದೆ. ಹಾಗೂ ಮಾಡಬಹುದು. ಈ ರೀತಿಯಾಗಿ ಗ್ರಹಣಶಾಂತಿಯನ್ನು ಎರಡುಬಗೆಯಾಗಿ ಹೇಳಿರುವುದರಿಂದ ಯಾವುದನ್ನಾದರೂ ಅವಶ್ಯ ಮಾಡಿಕೊಳ್ಳಬೇಕು.

## ತರ್ಪಣಕ್ರಮಕ್ಕೆ ಹೇಳಿದ ಆಧಾರ

ತಾತಾಂಬಾತ್ರಿತಯಂ ಸಪತ್ನಜನನೀ ಮಾತಾಮಹಾದಿತ್ರಯಂ ।
ಸಸ್ತ್ರೀ ಸ್ತ್ರೀತನಯಾದಿ ತಾತಜನನೀ ಸ್ವಭ್ರಾತರಃ ಸಸ್ತ್ರಿಯಃ ॥
ತಾತಾಂಬಾತ್ಮಭಗಿನ್ಯಪತ್ಯಧವಯುಕ್ ಜಾಯಾಪಿತಾ ಸದ್ಗುರುಃ ।
ಶಿಷ್ಯಾಪ್ತಾಃ ಪಿತರೋ ಮಹಾಲಯವಿಧೌ ತೀರ್ಥೇ ತಥಾತರ್ಪಣೇ ॥

ಇದರ ಅರ್ಥ–ಪಿತೃವರ್ಗ, ಮಾತೃವರ್ಗ, ಸಪತ್ನಮಾತೃ, ಮಾತಾಮಹವರ್ಗ ಸಪತ್ನೀಕ. ತನ್ನ ಹೆಂಡತಿ, ತನ್ನ ಪುತ್ರ, ಪಿತೃವ್ಯ, ಮಾತುಲ, ಸಹೋದರರು ಸಪತ್ನೀಕ, ಪಿತೃಭಗಿನಿ, ಮಾತೃಭಗಿನೀ – ಆತ್ಮಭಗಿನಿ ಸಭರ್ತೃಕ, ಸಸುತ, ಶ್ವಶುರ ಸಪತ್ನೀಕ, ಗುರು, ಶಿಷ್ಯ, ಆಪ್ತ – ಈ ಬಗೆಯಾಗಿ ಸರ್ವಪಿತೃಗಳನ್ನು ಕುರಿತು ಕ್ರಮವಾಗಿ ತರ್ಪಣ ಮಾಡಬೇಕು, ಮಹಾಲಯದಲ್ಲೂ, ತೀರ್ಥಕ್ಷೇತ್ರವಿಧಿಯಲ್ಲೂ, ತೀರ್ಥಕ್ಷೇತ್ರಗಳಲ್ಲಿ ಮಾಡುವ ತರ್ಪಣದಲ್ಲೂ, ಬ್ರಹ್ಮಯಜ್ಞಾಂಗ ತರ್ಪಣದಲ್ಲೂ ಇದೇ ಕ್ರಮವು. ಇದರಂತೆ ಹಿಂದೆ ತಿಳಿಸಿದ್ದೇವೆ.

## ದೇವಪೂಜಾವಿಧಿ

1 ಸಂಪನ್ನರಾದ ಗೃಹಸ್ಥರು ಹನ್ನೆರಡು ಅಂಗುಲ ಪ್ರಮಾಣದ ದೇವರ ಮೂರ್ತಿಗಳನ್ನು ಅರ್ಚಿಸಬೇಕು. ಸಿಂಹಾಸನದಲ್ಲಿ ಕೂರಿಸಿ ಪೂಜಿಸ

ಬೇಕು. ಅದಕ್ಕೂ ಅಧಿಕ ಪ್ರಮಾಣವಿರುವ ಮೂರ್ತಿಗಳನ್ನು ಪ್ರತಿಷ್ಠೆ ಮಾಡಿಯೇ ಪೂಜಿಸಬೇಕು. ಸ್ಥಾಪನೆ ಮಾಡದೆ ಮೂರ್ತಿಗಳನ್ನು ಪೂಜಿಸಬಾರದು. ಇಂತಹ ಪೂಜೆ ಅನಿಷ್ಟಕಾರಿಯಾಗುವುದು. ಶುಭಕಾಲದಲ್ಲಿ ಸ್ಥಾಪಿಸಿದರೆ ಶುಭವಾಗುತ್ತದೆ. ಅಶುಭಕಾಲದಲ್ಲಿ ಸ್ಥಾಪಿಸಿದ್ದು ಅಶುಭಕಾರಿಯಾಗುವುದು.

ಗುರುವಚನ—

ಅಸ್ಥಾಪಿತಸ್ಯ ದೇವಸ್ಯ ಪೂಜೈವಾನಿಷ್ಟದಾ ಭವೇತ್ ।
ಸ್ಥಾಪನಂ ಚ ಶುಭೇ ಕಾಲೇ ಕೃತಂ ಶೋಭನದಂ ಭವೇತ್ ॥

2 ದೇವತಾಪ್ರತಿಷ್ಠೆಗೆ ಉತ್ತರಾಯಣವೇ ಶ್ರೇಷ್ಠ, ಮಾಘಾದಿ ಪಂಚ ಮಾಸಗಳು ಪ್ರಶಸ್ತ. ಉತ್ತರಾಯಣದಲ್ಲೂ ಕುಂಭಮಾಸದಲ್ಲೂ ರವಿ ಇದ್ದರೆ ಅನಿಷ್ಟಕಾರಿ. ಗುರುದೃಷ್ಟಿಯಿದ್ದರೆ ಮಾತ್ರ ರವಿಯು ಶುಭಕಾರಿ. "ವಿಷ್ಣೋಶ್ಚ ಶ್ರಾವಣಂ ಮಾಸಂ ವಿಶೇಷೇಣ ಶುಭಂ ವಿದುಃ" ಎಂದು ವಿಶೇಷ ಶಾಸ್ತ್ರ. ಇದರಂತೆ ದಕ್ಷಿಣಾಯನವಾದರೂ **ವಿಷ್ಣು ಪ್ರತಿಷ್ಠೆಗೆ ಶ್ರಾವಣಮಾಸ ಶ್ರೇಷ್ಠ.**

3 ಗಣಪತಿ ಪ್ರತಿಷ್ಠೆಗೆ ಚಿತ್ರಾ. ಜ್ಯೇಷ್ಠಾನಕ್ಷತ್ರಗಳೂ, ಚೌತಿತಿಥಿ, ಭಾನುವಾರವೂ. ಚತುರ್ದಶಿಯೂ ಶ್ರೇಷ್ಠ.

4 ದುರ್ಗಾಪ್ರತಿಷ್ಠೆಗೆ ಶನಿವಾರ, ನವಮಿ, ಕೃತ್ತಿಕಾ. ಚಿತ್ರಾನಕ್ಷತ್ರಗಳು ಶ್ರೇಷ್ಠ,

5 ಈಶ್ವರನ ಪ್ರತಿಷ್ಠೆಗೆ ಅಷ್ಟಮಿ, ಚತುರ್ದಶಿ, ಭಾನುವಾರ– ಇವುಗಳು ಪ್ರಶಸ್ತವಾಗಿವೆ,

## ಶೌನಕೋಕ್ತ ಉಗ್ರರಥ ಶಾಂತಿ

ಜನ್ಮಾಬ್ದೇ ಜನ್ಮಮಾಸೇಚ ಸ್ವಜನ್ಮದಿವಸೇ ತಥಾ ।
ಜನ್ಮರ್ಕ್ಷೆಚೈವ ಕರ್ತವ್ಯಾ ಶಾಂತಿರುಗ್ರರಥಾಹ್ವಯಾ ॥
ಜನ್ಮಷಷ್ಟಿತಮೇ ವರ್ಷೇ ಮೃತ್ಯುರುಗ್ರರಥೋನೃಣಾಂ ।
ಪುತ್ರನಾಶೋ ದಾರನಾಶಃ ಧನನಾಶಸ್ತಥೈವಚ ।
ತದ್ದೋಷ ಶಮನಾರ್ಥಾಯ ಶಾಂತಿಂ ಕುರ್ಯಾದ್ವಿಚಕ್ಷಣಃ ॥

ಹೀಗೆ ಶೌನಕರು ಹೇಳಿದಂತೆ ಜನ್ಮದಿನದಿಂದ ಆರಂಭಿಸಿ ಆರವತ್ತನೇ ವರ್ಷವು ಬಂದಾಗ, ಜನ್ಮವರ್ಷ, ಜನ್ಮಮಾಸ, ಜನ್ಮನಕ್ಷತ್ರ, ಜನ್ಮದಿನದಲ್ಲಿ ಸಕಲಾರಿಷ್ಟನಾಶಕ್ಕಾಗಿ ಉಗ್ರರಥಶಾಂತಿಯನ್ನು ಮಾಡಿಕೊಳ್ಳಬೇಕು. ದೇವಾಲಯ, ನದೀತೀರ, ಅಥವಾ ಸ್ವಗೃಹದಲ್ಲಿ ಈ ಶಾಂತಿ ಮಾಡಿಕೊಳ್ಳಬೇಕು.

ಉಗ್ರನೆಂಬುವ ಮೃತ್ಯುಂಜಯ ಪ್ರಧಾನದೇವತೆ, ಪ್ರಜಾಪತಿ ಯಮ ಅಧಿದೇವತೆ, ಪ್ರತ್ಯಧಿದೇವತೆ, ನವಗ್ರಹಗಳು, ದಿಕ್ಪಾಲಕರು, ನದೀದೇವತೆ ಸಪ್ತಚಿರಂಜೀವಿಗಳು, ದುರ್ಗಾ, ಗಣಪತಿ, ವರುಣ, ವಿಷ್ಣು– ಈ ದೇವತೆಗಳನ್ನು ಕಲಶಗಳಲ್ಲಿ ಆವಾಹನೆ ಮಾಡಿ ಪೂಜಿಸಿ, ಅನಂತರ ಆಯಾಯ ಮಂತ್ರಗಳಿಂದ ನವಗ್ರಹಪುರಸ್ಸರ ಶಾಂತಿಹೋಮವನ್ನು ಆಚರಿಸಬೇಕು.

ಚರು, ಅಜ್ಯ, ಪಾಯಸ. ಅರ್ಕಸಮಿತ್ತು, ತಿಲ — ಇವುಗಳನ್ನು ಪ್ರಧಾನ ಮತ್ತು ಉಪದೇವತೆಗಳಿಗೆ ಹೋಮದ್ರವ್ಯವನ್ನಾಗಿ ಇರಿಸಿಕೊಳ್ಳಬೇಕು. ಪ್ರಧಾನದೇವತೆಗೆ ೧೦೮ ಸಲ, ಉಳಿದ ದೇವತೆಗಳಿಗೆ ೧೦ ಅಥವಾ ೫ ಆವರ್ತಿ ಹೋಮ ಮಾಡಬೇಕು. ಕ್ರತುಸಾದ್ಗುಣ್ಯದೇವತೆಗೂ ಸವಿತ್ರ್ ಚರು ಆಜ್ಯಗಳಿಂದ ಯಥಾವಿಧಿ ಸ್ವಗೃಹ್ಯಸೂತ್ರದಂತೆ ಹೋಮ ಮಾಡಿ, ಯಜಮಾನನನ್ನು ಕುಟುಂಬವರ್ಗದೊಂದಿಗೆ ಕೂರಿಸಿ ಕಲಶೋದಕಗಳಿಂದ ಅಭಿಷೇಕ ಮಾಡಬೇಕು.

ಅಭಿಷೇಕದ ಮಂತ್ರಗಳು—ನವಗ್ರಹ ಮಂತ್ರಗಳು, ಆಯುಃಸೂಕ್ತ, ಮೃತ್ಯುಸೂಕ್ತ. ಶ್ರೀಸೂಕ್ತ, ಪುರುಷಸೂಕ್ತ, ಅಕ್ಷೀಭ್ಯಾಂತೆ ಎಂಬ ಸೂಕ್ತ ಇದರ ಮಂತ್ರಗಳು.

ಅಭಿಷೇಕವಾದ ನಂತರ ತಾನು ಉಟ್ಟ ವಸ್ತ್ರಗಳನ್ನು ಆಚಾರ್ಯನಿಗೆ ಕೊಡಬೇಕು. ಆಚಾರ್ಯಪೂಜೆ, ವಿತ್ತಾನುಸಾರ ಕಲಶ ಪ್ರತಿಮಾ ವಸ್ತ್ರ ದಕ್ಷಿಣಾದಾನಗಳನ್ನು ಮಾಡಬೇಕು. ಶಕ್ತರಾದವರು ಗೋದಾನ ಮಾಡಬೇಕು. ಋತ್ವಿಕ್ ದಕ್ಷಿಣೆ, ಅನಾಥ ದೀನದರಿದ್ರರಿಗೆ ಅನ್ನದಾನಾದಿಗಳಿಂದ ಸಂತೋಷಪಡಿಸಬೇಕು. ಕಂಚಿನ ಪಾತ್ರೆಯಲ್ಲಿ ತುಪ್ಪವನ್ನು ಹಾಕಿ ನೋಡಿ, ಆಜ್ಯಾವೇಕ್ಷಣಪಾತ್ರ, ಹತ್ತಿ ವಸ್ತ್ರ, ಆಯಸಗಳನ್ನು ಅಪಮೃತ್ಯು ಪರಿಹಾರಾರ್ಥವಾಗಿ ದಾನಮಾಡಿ, ದಶದಾನಗಳನ್ನೂ ನವಗ್ರಹಧಾನ್ಯದಾನಗಳನ್ನೂ ಮಾಡಬೇಕು. ಅನಂತರ ಬ್ರಾಹ್ಮಣಸುವಾಸಿನಿಯರ ಸಂತರ್ಪಣೆ, ಯಥೋಚಿತವಾಗಿ ಮಾಡಬೇಕು, ಆಶೀರ್ವಾದ ಸ್ವೀಕರಿಸುವುದು, ಹೀಗೆ ಮಾಡುವಲ್ಲಿ ಯಜಮಾನನಿಗೂ ಅವನ ಕುಟುಂಬವರ್ಗದವರಿಗೂ ಸರ್ವಾರಿಷ್ಟ ಪರಿಹಾರವಾಗಿ ಸರ್ವಶ್ರೇಯಸ್ಸೂ ಉಂಟಾಗುವುದು.

ಉಗ್ರಮೃತ್ಯುಂಜಯ ದೇವತೆಗೆ ' ಸ್ತುಹಿ ಶ್ರುತಂಗರ್ತಸದಂ ಎಂಬುವ ಮಂತ್ರ. ಇದಕ್ಕೆ ಸ್ತುಹಿಶ್ರುತಮಿತಿ ಪೈಯ್ಯಘ್ರ ಋಷಿಃ, ರುದ್ರೋ ದೇವತಾ, ತ್ರಿಷ್ಟುಪ್ ಛಂದಸ್ಸುಗಳು.

## ಭೀಮರಥ ಶಾಂತಿಕ್ರಮ

ಜನನದಿನದಿಂದ ಎಪ್ಪತ್ತನೇ ವರ್ಷ ಬಂದೊಡನೆ ತನಗಾಗಿಯೂ ಪುತ್ರ ಪೌತ್ರಾದಿಗಳಿಗೂ, ಪಶುವರ್ಗಕ್ಕೂ, ಧನಧಾನ್ಯಾದಿಗಳಿಗೂ ಭೀಮರಥವೆಂಬ ಮೃತ್ಯುವಿನಿಂದ ಹಾನಿಯು ಸಂಭಾವಿತವಾದ್ದರಿಂದ ಸಕಲಾರಿಷ್ಟ ಶಮನಾರ್ಥವಾಗಿ ಮೊದಲೇ ಭೀಮರಥಶಾಂತಿಯನ್ನು ಮಾಡಿಕೊಳ್ಳಬೇಕು. ಜನ್ಮಮಾಸ ಜನ್ಮದಿನ, ಜನ್ಮನಕ್ಷತ್ರವಿರುವಾಗಲಿ ಷಷ್ಟಿಪೂರ್ತಿಶಾಂತಿಯಂತೆ ಇದನ್ನು ಆಚರಿಸಬೇಕು.

ಪುಣ್ಯಾಹಃ ನಾಂದಿ, ಆಚಾರ್ಯಾದಿವರಣೆ, ಅನಂತರ ಗೃಹದ ಈಶಾನ್ಯದಿಕ್ಕಿನಲ್ಲಿ ಕಲಶಪ್ರತಿಷ್ಠಾಪನೆ ಮಾಡಬೇಕು. (5, $2\frac{1}{2}$, $1\frac{1}{4}$ ಪ್ರಮಾಣದಲ್ಲಿ ಬತ್ತ ತದುಪರಿ ತಂಡುಲ, ತದುಪರಿ ತಿಲವನ್ನು ರಾಶಿಯಾಗಿ ಹಾಕಿ, ಅಷ್ಟದಳ ಪದ್ಮವನ್ನು ಬರೆದು ಆ ರಾಶಿಯ ಮೇಲೆ ತಂತುವೇಷ್ಟಿತ ವಾದ ಕಲಶಗಳನ್ನಿರಿಸಿ, ಹ್ರೀಂಕಾರವನ್ನು ವಿನ್ಯಾಸಮಾಡಿ ಧೀಮಮೃತ್ಯುಂ ಜಯ ದೇವತೆಯನ್ನು ಪೂಜಿಸಬೇಕು. ಬ್ರಹ್ಮ, ವಿಷ್ಣು, ನವಗ್ರಹ, ಲೋಕ ಪಾಲ, ಕ್ರತುಸಾದ್ಗುಣ್ಯದೇವತೆ, ದುರ್ಗಾ ಗಣಪತಿ ಇತ್ಯಾದಿದೇವತೆಗಳನ್ನು ಆವಾಹನೆಮಾಡಿ ಪೂಜಿಸಬೇಕು.

ಪಲಪ್ರಮಾಣದ ಸುವರ್ಣಪ್ರತಿಮೆ ಮೃತ್ಯುಂಜಯಕ್ಕೆ, ತದರ್ಧ ಪ್ರಮಾಣದಲ್ಲಿ ಬ್ರಹ್ಮ ವಿಷ್ಣು ಪ್ರತಿಮೆಗಳು, ಬ್ರಹ್ಮ ವಿಷ್ಣು ಪ್ರತಿಮೆ ಗಳಿಗೂ ನವಗ್ರಹಪ್ರತಿಮೆಗಳು ೯, ಲೋಕಪಾಲಕರಿಗೂ ಬೇರೆ ದುರ್ಗಾ ಪ್ರತಿಮೆಯೂ ಸುವರ್ಣದಲ್ಲಿರಬೇಕು.

ವೇದಪಾರಾಯಣ, ರುದ್ರ ನಮಕಚಮಕಗಳು, ಶ್ರೀಸೂಕ್ತ, ಭೂ ಸೂಕ್ತಗಳನ್ನು ಜಪಿಸಬೇಕು. ಸ್ತುಹಿಶ್ರುತಂ ಎಂಬ ಮಂತ್ರದಿಂದ ಧೀಮ ಮೃತ್ಯುಂಜಯನಿಗೆ, ಬ್ರಹ್ಮಜಜ್ಞಾನಂ ಬ್ರಹ್ಮನಿಗೆ, ತದ್ವಿಷ್ಣೋಃ ಎಂಬ ಮಂತ್ರದಿಂದ ವಿಷ್ಣುವಿಗೆ, ನವಗ್ರಹಾದಿಗಳಿಗೆ ಆಯಾಯ ಮಂತ್ರಗಳಿಂದ ಪೂಜೆ, ಹೋಮಗಳು.

ನವಗ್ರಹಗಳಿಗೆ ಅರ್ಕಾದಿ ಸಮಿಚ್ಚರು ಆಜ್ಯಗಳಿಂದಲೂ, ಸಮಿಚ್ಚರು, ಆಜ್ಯ ಮತ್ತು ತಿಲಗಳಿಂದ ಪ್ರಧಾನಹೋಮ ೧೦೮ (೧೦೦೮), ತ್ರ್ಯಂಬಕ ಮಂತ್ರದಿಂದ ಮೃತ್ಯುಂಜಯ ಹೋಮ, ಅನಂತರ ದುರ್ಗಾ, ಲೋಕಪಾಲ, ಕ್ರತುಸಾದ್ಗುಣ್ಯದೇವತಾ ಹೋಮ ಮಾಡಿ, ಸ್ವಿಷ್ಟಕೃದಾದಿ ಹೋಮಶೇಷ ವನ್ನು ಮುಗಿಸಿ, ಯಜಮಾನನಿಗೆ ಅಭಿಷೇಕ ಮಾಡಬೇಕು.

ಅನಂತರ ಹೊಸವಸ್ತ್ರಾಲಂಕಾರಗಳನ್ನು ಯಜಮಾನನು ಧರಿಸಿ; ಆಜ್ಯಾ ವೇಕ್ಷಣಮಾಡಿ, ಅಪಮೃತ್ಯು ಪರಿಹಾರಾರ್ಥ ಇತರೆ ದಾನಗಳನ್ನು ಮಾಡಿ,

ದಶದಾನಗಳು, ಪ್ರತಿಮಾ ಕಲಶ ವಸ್ತ್ರದಾನಗಳನ್ನು ಮಾಡಿ, ಆಚಾರ್ಯ ಪೂಜೆ, ಋತ್ವಿಗ್ ದಕ್ಷಿಣಾದಾನ ಮಾಡಿ ಆಶೀರ್ವಾದ ಪಡೆದು, ಬ್ರಾಹ್ಮಣ ಭೋಜನ ಮಾಡಿಸಿ, ಪುನಃ ಆಶೀರ್ವಾದ ಪಡೆದು ಈ ಕರ್ಮವನ್ನು ಮಂಗಳ ಮಾಡಬೇಕು.

## ಶೌನಕೋಕ್ತ ಶತಾಭಿಷೇಕವಿಧಿ
## (ಸಹಸ್ರಚಂದ್ರದರ್ಶನ ಶಾಂತಿ)

ಅತೀತ್ಯೇಕಮಾಸೇಸ್ಯಾತ್ ಅಧಿಮಾಸ್ಯೈಃ ಸಮನ್ವಿತೇ ।
ಸಹಸ್ರಸೂರ್ಯದರ್ಶಸ್ಯಾತ್ ಊರ್ಧ್ವಂಸ್ಯಾತ್ ಪುಣ್ಯಕೃದ್ದ್ವಿಜಃ ॥
ಅಥೋತ್ತರಾಯಣೇ ಪುಣ್ಯೇ ಪೂರ್ವಪಕ್ಷೇ ಶುಭೇಽನೇ ।
ದೇವಾಲಯೇ ನದೀತೀರೇ ಸ್ವಾಂಗಣೇವಾ ಶುಭಸ್ಥಲೇ ॥
ಬ್ರಾಹ್ಮಣಾನ್ ಸಮನುಜ್ಞಾಪ್ಯ ಪ್ರಾಯಶ್ಚಿತ್ತಂ ಸಮಾಚರೇತ್ ।
ಸ್ವಾಬ್ದೈಃ ಸಮಾನಸಂಖ್ಯಾಕ ಕೃಚ್ಛ್ರಾಚರಣಮಾಚರೇತ್ ॥
ಕೂಷ್ಮಾಂಡಂ ಜುಹುಯಾತ್ ಪಶ್ಚಾದ್ ಗಣಂಜ ಸವನತ್ರಯೇ ।
ವೃದ್ಧಿಶ್ರಾದ್ಧಂತು ಪೂರ್ವಂಸ್ಯಾತ್ ಕೌತುಕಂ ಚಾಂಕುರಾರ್ಪಣಂ ॥

ಇತ್ಯಾದಿ ವಚನಗಳಂತೆ ೮೧ ವರ್ಷ ೧ ತಿಂಗಳು (ಅಧಿಕಮಾಸವೂ ಸೇರಿ) ಮನುಷ್ಯನು ಜೀವಂತನಾಗಿದ್ದರೆ ಆಲ್ಲಿಗೆ ಸಹಸ್ರಚಂದ್ರದರ್ಶನವಾಗುತ್ತದೆ. ಉತ್ತರಾಯಣದಲ್ಲಿ ಶುಕ್ಲಪಕ್ಷ ಶುಭದಿನದಲ್ಲಿ ಸಹಸ್ರಚಂದ್ರದರ್ಶನ ಶಾಂತಿ ಮಾಡಿಕೊಳ್ಳಬೇಕು.

ಬ್ರಾಹ್ಮಣಪರಿಶತ್ತಿನ ಅನುಜ್ಞೆ ಪಡೆದು ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ವರ್ಷಗಳ ಸಂಖ್ಯೆಗೆ ಸಮಾನವಾಗಿ ಕೃಚ್ಛ್ರ ಪ್ರತ್ಯಾಮ್ನಾಯ ದಕ್ಷಿಣಾದಾನ ಮಾಡಬೇಕು.

ಕೂಷ್ಮಾಂಡಹೋಮ ಅನಂತರ ಗಣಹೋಮಗಳನ್ನು ಆಚರಿಸಬೇಕು. ಪುಣ್ಯಾಹ, ನಾಂದಿ, ಕೌತುಕಬಂಧನ, ಅಂಕುರಾರ್ಪಣ ಇತ್ಯಾದಿಗಳನ್ನು ಮಾಡಬೇಕು, ಅನಂತರ ಶಾಂತಿಹೋಮ.

ನವಗ್ರಹ ಪುರಸ್ಸರ ಶಾಂತಿಹೋಮ. ಪ್ರಧಾನದೇವತೆ ವಿಷ್ಣು. ಅಧಿ ಪ್ರತ್ಯಧಿದೇವತೆ ಬ್ರಹ್ಮ. ಮೃತ್ಯುಂಜಯ, ದಿಕ್ಪಾಲಕರು, ನವಗ್ರಹಾದಿ ಆವಾಹನೆ, ಷೋಡಶೋಪಚಾರ ಪೂಜೆ, ಅನಂತರ ಹೋಮ –

| | | | | |
|---|---|---|---|---|
| 1 | ವಿಷ್ಣುವಿಗೆ ಅಶ್ವತ್ಥಸಮಿತ್-ಚರು-ಆಜ್ಯ-ಪಾಯಸ ದ್ರವ್ಯ ೧೦೮ ಸಂಖ್ಯೆ | | | |
| 2 | ಬ್ರಹ್ಮ ಪಾಲಾಶಸಮಿತ್-ಚರು-ಆಜ್ಯ-ದಧ್ಯನ್ನ ದ್ರವ್ಯ ೨೮ ಸಂಖ್ಯೆ | | | |
| 3 | ಮೃತ್ಯುಂಜಯ ತಿಲದ್ರವ್ಯ (೧೦೮) ೨೮ | | | |
| 4 | ಇಂದ್ರಂ ಲೋಕಪಾಲ | ಪಾಲಾಶ-ಚರು-ಆಜ್ಯ-ಘೃತಾನ್ನ ದ್ರವ್ಯ | | ೧೦ |
| 5 | ಅಗ್ನಿಂ | ” ... ... | ... ಕೃಸರಾನ್ನ | ” |
| 6 | ಯಮಂ | ” ... .... | .... ಗುಡ | ” |
| 7 | ನಿಋೃತಿಂ | ಶಮಿ .. .... | ... ಸಕ್ತು | ” |
| 8 | ವರುಣಂ | ವಟ ... | ... ಮಧು | ” |
| 9 | ವಾಯುಂ | ಔದುಂಬರ | ಕ್ಷೀರ | ” |
| 10 | ಕುಬೇರಂ | ಪ್ಲಕ್ಷ ... .... | ಗೋಧೂಮ | ” |
| 11 | ಈಶಾನಂ | ಬಿಲ್ವ | ಶರ್ಕರ | ” |
| 12 | ಪುರುಷಂ ದಧಿ-ಲಾಜ-ಸಕ್ತುದ್ರವ್ಯ ಘೃತಸೂಕ್ತೇನ ಏಕೈಕ ಸಂಖ್ಯಯಾ | | | |
| 13 | ವಿಶ್ವಾನ್‌ದೇವಾನ್ | ” | ಆಯುಸ್ಸೂಕ್ತೇನ | ” |
| 14 | ಶ್ರಿಯಂ | “ | ಶ್ರೀಸೂಕ್ತೇನ ಉಕ್ತದ್ರವ್ಯೈಃ | |
| 15 | ಭೂಮಿಂ | ” | ಭೂಸೂಕ್ತೇನ | ” |
| 16 | ಕ್ರತುಸಾದ್ಗುಣ್ಯದೇವತಾಃ ಸಮಿಚ್ಚರು-ಆಜ್ಯದ್ರವ್ಯ ಏಕೈಕ ಸಂಖ್ಯಯಾ | | | |

ಶೇಷೇಣ ಸ್ವಿಷ್ಟಕೃತಂ .. ಸದ್ಯೋಯಕ್ಷ್ಯೇ ಇತ್ಯನ್ವಾಧಾನಂ. ಪರಿಸ್ತರಣಾದಿ .... .... .... ಆಜ್ಯಭಾಗಾಂತಂ ಕೃತ್ವಾ ಪ್ರಧಾನ ಹೋಮಂ ಕುರ್ಯಾತ್ । ತತಃ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ, ಪುನಃ

ಪೂಜಾಂ ಕೃತ್ವಾ ವಿಸರ್ಜಯೇತ್ । ಮಮ ಅಲಕ್ಷ್ಮೀ ಪರಿಹಾರಾರ್ಥಂ ಆಜ್ಯಾವೇಕ್ಷಣ, ನಿರೀಕ್ಷಣಾಜ್ಯದಾನಂ ಕರಿಷ್ಯೇ ಎಂದು ಸಂಕಲ್ಪ ಮಾಡಿ ರೂಪಂ ರೂಪಂ ಎಂಬ ಮಂತ್ರದಿಂದ ಆಜ್ಯದಲ್ಲಿ ತನ್ನ ಮುಖವನು ನೋಡಿಕೊಂಡು ದಾನ ಮಾಡಬೇಕು.

ಯಾಽಲಕ್ಷ್ಮೀಃ ಯಚ್ಚ ಮೇ ದೌಸ್ಥ್ಯಂ ಸರ್ವಾಂಗೇಷು ವ್ಯವಸ್ಥಿತಂ ।
ತತ್ಸರ್ವಂ ಶಮಯಾದ್ಯ ತ್ವಂ ಶ್ರಿಯಂ ಪುಷ್ಟಿಂಚ ವರ್ಧಯ ॥

ಈ ಮಂತ್ರದಿಂದ ಆಜ್ಯವನ್ನು ಪ್ರಾರ್ಥನೆ ಮಾಡಿ —

ಕಾಮಧೇನೋಃ ಸಮುದ್ಭೂತಂ ವಿಪ್ಣ ಪ್ರೀತಿಕರಂ ಶುಭಂ ।
ದೇವಾನಾಮಾಜ್ಯ ಮಾಹಾರಮತಃ ಶಾಂತಿಂ ಪ್ರಯಚ್ಛ ಮೇ ॥

ಎಂದು ಆಜ್ಯದಾನಮಾಡಬೇಕು.

ಅನಂತರ ಆಯಸ–ಕಾರ್ಪಾಸ - ಲವಣ - ತಿಲ - ಕಂಬಳ - ಕೂಷ್ಮಾಂಡ ದಾನಗಳು. ಅನಂತರ ಯಜಮಾನನಿಗೆ ಶತಚ್ಛಿದ ಪದ್ಮಾಕಾರದ ಪಾತ್ರೆಯಲ್ಲಿ ಕಲಶೋದಕವನ್ನು ಅಭಿಷೇಕ ಮಾಡಬೇಕು.

ಅಭಿಷೇಕ ಸೂಕ್ತಗಳು —

ಆಪೋಹಿಷ್ಠಾ — ೩ ಋಕ್ಕುಗಳು. ಹಿರಣ್ಯವರ್ಣಾಃ ಶುಚಯಃ ಪಾವಕಾಃ. ಪವಮಾನಃ ಸುವರ್ಜನಃ, ಸಮುದ್ರ ಜ್ಯೇಷ್ಠಾಃ. ಆಪ ಇದ್ವಾ. ನವಗ್ರಹಮಂತ್ರ. ಇದಂ ವಿಷ್ಣುಃ. ಬ್ರಹ್ಮಜಜ್ಞಾನಂ. ತ್ರ್ಯಂಬಕಂ. ಲೋಕಪಾಲ ಮಂತ್ರಗಳು. ಪರಂ ಮೃತ್ಯೋ. ದೇವಸ್ಯತ್ವಾ. ಮುಂಚಾಮಿತ್ವಾ. ಶ್ರೀಸೂಕ್ತಂ. ತಚ್ಛಂಯೋಃ. ಸುರಾಸ್ತ್ವಾ ಮಭಿಷಿಂಚಂತು — ಇತ್ಯಾದಿ ಮಂತ್ರಗಳಿಂದಲೂ ಅಭಿಷೇಕ ಮಾಡಬೇಕು.

ಅನಂತರ ಯಜಮಾನನು ಹೊಸವಸ್ತ್ರವನ್ನು ಧರಿಸಿ, ಸೂರ್ಯದೇವತೆಯನ್ನು ಉಪಸ್ಥಾನ ಮಾಡಬೇಕು. ಅದರ ಮಂತ್ರಗಳು—

ಓಂ ಉದುತ್ಯಂ ಜಾತವೇದಸಂ - - ಚಿತ್ರಂ ದೇವಾನಾಂ - - ನಮೋ ಮಿತ್ರಸ್ಯ - - ಸೂರ್ಯೋನೋ - - ವಿಭ್ರಾಜ್ ಬ್ರಹತ್ - - ಇತ್ಯಾದಿ.

ಯಮಾಯ ಧರ್ಮರಾಜಾಯ ಮೃತ್ಯವೇಚಾಂತಕಾಯಚ !
ವೈವಸ್ವತಾಯ ಕಾಲಾಯ ಸರ್ವಭೂತ ಕ್ಷಯಾಯಚ ।
ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ ।
ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ತೇ ನಮಃ ॥

ಎಂದು ಯಮಾದಿಗಳ ಉಪಸ್ಥಾನ. ವರುಣಂ ಪ್ರೋವಿಶಾದನಂ - ತ್ವಂ ಸೋಮಪ್ರಚಿಕಿತೇ ಎಂಬ ಆಯುಷ್ಯಸೂಕ್ತ, ಶ್ರೀಸೂಕ್ತ, ಭೂಸೂಕ್ತಗಳಿಂದ (ಭೂಸ್ಪರ್ಶಮಾಡಿ) ಜಪಿಸಬೇಕು, ಮಹಾಶಾಂತಿಜಪ, ಪುಣ್ಯಾಹವಾಚನ ಋತ್ವಿಗ್‌ದಕ್ಷಿಣಾದಾನ, ಕಲಶ ಪ್ರತಿಮಾದಾನ, ದಶದಾನಗಳು, ಫಲಪ್ರ ಜೆ, ಆರತಿ, ಬ್ರಾಹ್ಮಣಭೋಜನ, ಆಶೀರ್ವಾದ – ಹೀಗೆ ಸಂಕ್ಷೇಪವಿಧಿಯು,

## ಕಪಿಗೋತ್ರಪ್ರವರವಿಚಾರ

1 ಸ್ವತಂತ್ರಕಪಿಗಣಕ್ಕೆ ಸೇರಿದವರಿಗೆ ಆಂಗಿರಸ - ಆಮಾಹೀಯ - ಔರಕ್ಷಯ್ಯ ಎಂದು ತ್ರ್ಯಾರ್ಷೇಯ ಪ್ರವರ. ಇವರಿಗೆ ಭಾರದ್ವಾಜ ಗೋತ್ರ ದವರೊಂದಿಗೆ ಸ್ವಸಂಬಂಧವಿದೆ, ವಿವಾಹವಾಗಬಹುದು.

2 **ಅಸ್ವತಂತ್ರಕಪಿಗೋತ್ರದವರಿಗೆ** ಆಂಗಿರಸ – ಬಾರ್ಹಸ್ಪತ್ಯ – ಭಾರದ್ವಾಜ ಎಂದು ತ್ರ್ಯಾರ್ಷೇಯ ಪ್ರವರ. ಅಥವಾ ಆಂಗಿರಸ–ಬಾರ್ಹಸ್ಪತ್ಯ–ಕಾಪೇಯ ಎಂದು ತ್ರ್ಯಾರ್ಷೇಯಪ್ರವರ. ಅವರಿಗೆ ಗೋತ್ರ ಪ್ರವರ್ತಕನಾದ ಭಾರದ್ವಾಜನನ್ನು ಎರಡು ಪಕ್ಷದಲ್ಲೂ ವರಣೆಗೆ ಸೇರಿಸಿ ಕೊಂಡಿರುವುದರಿಂದ ಅಸ್ವತಂತ್ರಕಪಿಗೋತ್ರದವರಿಗೆ ಭಾರದ್ವಾಜಗೋತ್ರದವ ರೊಂದಿಗೆ ವಿವಾಹವು ಕೂಡದು,

3 **ಬೋಧಾಯನಸೂತ್ರದಲ್ಲಿ** ಶುದ್ಧ ಆಂಗಿರಸ-ಆಮಾಹೀಯ-ಔರಕ್ಷಯ್ಯ ಎಂದು ತ್ರ್ಯಾರ್ಷೇಯ ಪ್ರವರವೆಂದು ಹೇಳಿದೆ, ಆದರಿಂದ ಭಾರದ್ವಾಜಗೋತ್ರದವರೊಂದಿಗೆ ಸ್ವತಂತ್ರಕಪಿಗಣದವರಿಗೆ ಸಮಾನವಾದ ಗೋತ್ರವಾಗಿಲ್ಲವಾದ್ದರಿಂದಲೂ, ಸಮಾನ ಪ್ರವರವಾಗಿಲ್ಲವಾದ್ದರಿಂದ ವಿವಾಹವು ಆಗಬಹುದು ಎಂದು ನಿರ್ಣಯ ಮಾಡಿದೆ. (ಗೋತ್ರಪ್ರವರ ನಿರ್ಣಯ-ಅಭಿನವ ಮಾಧವೀಯ—ಪುಟ 334).

ನೈತತ್ ಸ್ವತಂತ್ರಾಸ್ವತಂತ್ರೌ ದ್ವೌ ಕಪೀಕಥಿತೌ ಯತಃ ॥೪೧॥
ಸ್ವತಂತ್ರಸ್ಯಕಪೇಸ್ತತ್ರ ಭಾರದ್ವಾಜೈಃ ಸಹಾನ್ವಯಃ ।
ವಿಶೇಷಾತು ವಿಶೇಷೋsಯಂ ಆಮಹೀಯಾಭಿಧಾನಕೈಃ ।
ಔರಕ್ಷಯ್ಯೈಶ್ಚ ಕಪಿಭಿಃ ಸ್ತ್ರಿಭಿರಿಷ್ಯತೇ ॥೪೨॥

ಕಪೀಪ್ರಸಿದ್ಧಾವುದಿತಾ ವಿಹದ್ವೌ ಸ್ವತಂತ್ರ ಏಕಸ್ತ್ವಪರೋs-
ಸ್ವತಂತ್ರಃ ।
ತಸ್ಯ ಸ್ವತಂತ್ರಸ್ಯ ಕಪೇರ್ವಿವಾಹಂ ಮಿಥೋ ಭಾರದ್ವಾಜ
ಕುಲಸ್ಯ ಚಾಹುಃ ॥

—ಪ್ರಯೋಗದೀಪಿಕಾ.

## ಪಿಂಡಸಂಖ್ಯಾ ನಿರ್ಣಯ

1 ಪಿಂಡಸಂಖ್ಯೆಯೆಷ್ಟೆಂದು ಪ್ರಶ್ನಿಸಿದರೆ, ತಮ್ಮತಮ್ಮ ಗೃಹ್ಯಸೂತ್ರಗಳಲ್ಲಿ ಹೇಳಿದಂತೆ ಸಂಖ್ಯೆಯನ್ನು ಗ್ರಹಿಸಬೇಕು. ಆಪಸ್ತಂಬ ಸೂತ್ರಾನುಸಾರಿಗಳಿಗೆ ಮಾಸಿಕಶ್ರಾದ್ಧಕಲ್ಪವನ್ನು ಅನುಸರಿಸಿ ಷಟ್ ಪಿಂಡಗಳನ್ನು (೬) ಪಿಂಡಗಳನ್ನು ಹಾಕಬೇಕು,

2 ಪಿಂಡಪಿತೃಯಜ್ಞಕಲ್ಪವನ್ನು ಅನುಸರಿಸುವವರು ಆಶ್ವಲಾಯನ ಕಾತ್ಯಾಯನ ಸೂತ್ರದವರು ತ್ರಿಪಿಂಡವನ್ನು ಹಾಕಬೇಕು. ಹೀಗೆಂದು ವೈದ್ಯನಾಥೀಯದಲ್ಲಿ ನಿರ್ಣಯ ಮಾಡಿದೆ.

3 ಅಷ್ಟಕಾಶ್ರಾದ್ಧಗಳಲ್ಲೂ, ವೃದ್ಧಿಶ್ರಾದ್ಧ, ಗಯಾಶ್ರಾದ್ಧ ಮೃತಾಹ ಶ್ರಾದ್ಧ ಇವುಗಳಲ್ಲಿ ಮಾತ್ರ ಮಾತೃಶ್ರಾದ್ಧವನ್ನು ಪ್ರತ್ಯೇಕ ಮಾಡಬೇಕು. ಏಕ್ಕ ಶ್ರಾದ್ಧಗಳಲ್ಲಿ ಪತಿಯೊಂದಿಗೆ ಸೇರಿಸಿ ಮಾತೃಶ್ರಾದ್ಧ ಮಾಡಬೇಕು,

ಅಷ್ಟಕಾಸುಚ ವೃದ್ಧೌಚ ಗಯಾಯಾಂಚ ಮೃತೇಹನಿ ।
ಮಾತುಃಶ್ರಾದ್ಧಂ ಪೃಥಕ್ಕುರ್ಯಾತ್ ಅನ್ಯತ್ರ ಪತಿನಾ ಸಹ ॥

(ಆಪಸ್ತಂಬ ಗೃಹ್ಯವ್ಯಾಖ್ಯಾನ— ಪಟಲ ೮).

4 ಒಬ್ಬ ಬ್ರಾಹ್ಮಣನೆ ಲಭಿಸಿದರೆ ಪಿತೃಸ್ಥಾನ ಮುಖ್ಯವಾದ್ದರಿಂದ ಪಿತೃಸ್ಥಾನಕ್ಕೆ ಕೂರಿಸಬೇಕು. ಆದರೆ ವಿಶ್ವೇದೇವರಿಗಾಗಿ ಪಾತ್ರೆಯಲ್ಲಿ ಅನ್ನ ವನ್ನೂ, ಎಲ್ಲಾ ಪಾಕವನ್ನೂ ತೆಗೆದು ಇರಿಸಿ, ವಿಶ್ವೇದೇವಸ್ಥಾನದಲ್ಲಿ ಕೂರ್ಚ ವನ್ನು ಹಾಕಿದ್ದ ಸ್ಥಾನದಲ್ಲಿ ಅರ್ಪಿಸಿ ನಂತರ ಅಗ್ನಿಯಲ್ಲಿ ಹಾಕಬೇಕು. ಅಥವಾ ಒಬ್ಬ ಬ್ರಹ್ಮಚಾರಿಗೆ ಅರ್ಪಿಸಬೇಕು.

(ಆಪಸ್ತಂಬ ಗೃಹ್ಯ. ಟೀಕಾ ೮ನೇ ಪಟಲ.)

## ದೌಹಿತ್ರನಿಗೆ ಮಾತಾಮಹಶ್ರಾದ್ಧವು ಕರ್ತವ್ಯವೇ ?

5 ಮಾತಾಮಹನಿಗೆ ಪುತ್ರರಿಲ್ಲದೆ ಇರುವಾಗ ಪುತ್ರಿಕಾ ಪುತ್ರ, (ದೌಹಿತ್ರ)ನು ಮಾತಾಮಹನ ಧನ, ಆಸ್ತಿ ಮುಂತಾದುವನ್ನು ಸ್ವೀಕರಿಸಿದ್ದರೆ ಅವಶ್ಯವಾಗಿ ಪಿತೃಶ್ರಾದ್ಧದಂತೆ ಮಾಡಲೇಬೇಕು. ಇದು ನಿಯಮವು. ಪುತ್ರನು ಮಾತಾಮಹನೊಡನೆ ಮಾತೃಸಾಪಿಂಡ್ಯವನ್ನು ಮಾಡಿರುವನು. ಇವನಿಗೆ ಮಾತಾಮಹಶ್ರಾದ್ಧ ನಿಯತ. ಮಾಡದೆ ಬಿಟ್ಟರೆ ಪಾಪವು. ಮಾತಾಮಹನ ಧನವನ್ನು ಸ್ವೀಕರಿಸದವನು ಮಾತ್ರ ಮಾತಾಮಹನ ಶ್ರಾದ್ಧ ವನ್ನು ಮಾಡಿದರೆ ಅಭ್ಯುದಯ. ಮಾಡದೆ ಬಿಟ್ಟರೆ ಪಾಪವಿಲ್ಲ.

## ಪುನಃ ದೇವತಾಪ್ರತಿಷ್ಠೆ ಮಾಡುವ ಸಂದರ್ಭಗಳು

1 ಪ್ರತಿಷ್ಠಿತವಾದ ದೇವತೆಗೆ ಮದ್ಯಸ್ಪರ್ಶ, ಪಂಚಮಸ್ಪರ್ಶ, ತುರುಷ್ಕರ ಸ್ಪರ್ಶವಾದರೆ, ಇದೇ ರೀತಿಯಾಗಿ ಶವಸ್ಪರ್ಶ. ಪಾಪಿಗಳ ಸ್ಪರ್ಶವಾದರೂ, ಬೆಂಕಿಯಿಂದ ಸುಟ್ಟುಹೋಗಿದ್ದರೂ, ಬ್ರಾಹ್ಮಣರಕ್ತ ಬಿದ್ದು ದೂಷಿತವಾಗಿದ್ದರೂ, ಪ್ರತಿಮೆಗೆ ಪುನಃ ಸಂಸ್ಕಾರ ಮಾಡಬೇಕು.

2 ಪತಿತರೂ, ರಜಸ್ವಲೆಯರು, ಆಶೌಚಾದಿಗಳು. ಚೋರರು ಮುಟ್ಟಿದ್ದರೂ, ಪ್ರತಿಮೆಯನ್ನು ತುಂಡುಹಾಕಿದ್ದರೂ, ತಾನಾಗಿಯೇ ಸ್ಫೋಟಗೊಂಡಿದ್ದರೂ, ಸ್ಥಾನವು ತಪ್ಪಿಹೋಗಿದ್ದರೂ, ಪೂಜೆಯೇ ಇಲ್ಲವಾಗಿದ್ದರೂ, ಕುದುರೆ ಕತ್ತೆ ನಾಯಿ ಮುಂತಾದುವು ಮುಟ್ಟಿದ್ದರೂ ಪುನಃ ಪ್ರತಿಷ್ಠೆ ಮಾಡಬೇಕು.

3 ಆದರಲ್ಲೂ ಪ್ರತಿಮೆಯನ್ನು ತುಂಡುಮಾಡಿದ್ದರೂ, ಭಂಗಗೊಳಿಸಿದ್ದರೂ ವಿಧಿವತ್ತಾಗಿ ಆ ಪ್ರತಿಮೆಯನ್ನು ತೆಗೆದು ಬೇರೆ ಪ್ರತಿಮೆಯನ್ನು ಸ್ಥಾಪನೆ ಮಾಡಬೇಕು. ಮೂರ್ತಿಯು ಭಗ್ನವಾದಾಗ ಅಥವಾ ಅದನ್ನು ಕಳ್ಳರು ತೆಗೆದುಕೊಂಡು ಹೋಗಿದ್ದರೆ ಆ ದಿನ ಯಜಮಾನನು ಉಪವಾಸವಿರಬೇಕು.

4 ತಾಮ್ರ, ಹಿತ್ತಾಳೆ, ಕಂಚು ಮುಂತಾದ ಲೋಹಮೂರ್ತಿಗಳನ್ನು ಚೋರ, ಪಂಚಮಾದಿಗಳು ಮುಟ್ಟಿದ್ದರೆ, ತಾಮ್ರಾದಿ ಧಾತುಶುದ್ಧಿಯನ್ನು ಮಾಡಿಸಿ ಪುನಃ ಪ್ರತಿಷ್ಠೆ ಮಾಡಬೇಕು.

## ಶುದ್ಧಿಕ್ರಮಗಳು

5 ಪೂರ್ವಪ್ರತಿಷ್ಠಿತವಾದ ದೇವತಾಮೂರ್ತಿಯ ಅರ್ಚನಾದಿಗಳು ಅಕಸ್ಮಾತ್ ಒಂದು ದಿನ, ಒಂದು ತಿಂಗಳು, ಎರಡು ತಿಂಗಳು ನಿಂತು

ಹೋದರೆ, ಶೂದ್ರ, ರಜಸ್ವಲೆಯಾದವರು ಮುಟ್ಟಿದರೂ ಜಲಾಧಿವಾಸ ಮಾಡಿ, ಕಲಶದಿಂದ ಅಭಿಷೇಕ ಮಾಡಬೇಕು. ಅನಂತರ ಪಂಚಗವ್ಯದಿಂದ ಅಭಿಷೇಕ ಮಾಡಿ, ೧೦೦೮, ೧೦೮, ೨೮ ಎಂಬುವ ಸಂಖ್ಯೆಯೊಂದರಲ್ಲಿ ಕಲಶಗಳನ್ನು ತಂದು ಅದರಲ್ಲಿ ಜಲಾಭಿಮಂತ್ರಣ ಮಾಡಿ, ಶುದ್ಧೋದಕ ದಿಂದ ಪುರುಷಸೂಕ್ತದಿಂದ ಅಭಿಷೇಕ ಮಾಡಿಸಬೇಕು. ಗಂಧಾದಿಗಳಿಂದ ಪೂಜಿಸಿ, ಗುಡೋದನವನ್ನು ನೈವೇದ್ಯ ಮಾಡಬೇಕು. ಇದೊಂದು ಶುದ್ಧಿಕ್ರಮ.

ಬುದ್ಧಿಪೂರ್ವಕವಾಗಿಯೇ ಪೂಜೆಯನ್ನು ನಿಲ್ಲಿಸಿದ್ದರೆ, ಶೂದ್ರಸ್ಪರ್ಶ-ಅಶುಚಿಜನ ಸ್ಪರ್ಶವಾಗಿದ್ದರೆ ಪುನಃ ಪ್ರತಿಷ್ಠೆ ಮಾಡಬೇಕು.

ಒಂದು ದಿನ ಪೂಜೆ ನಿಂತರೆ ಎರಡು ಪಾಲು ಅರ್ಚನೆ, ಎರಡು ದಿನ ನಿಂತರೆ ಮಹಾಪೂಜೆ, ಅದಕ್ಕೂ ಹೆಚ್ಚು ದಿನ ನಿಂತರೆ ಸಂಪ್ರೋಕ್ಷಣೆಯಾಗ ಬೇಕು. ಒಂದು ತಿಂಗಳ ಮೇಲೂ ನಿಂತರೆ ಪುನಃ ಪ್ರತಿಷ್ಠೆಯನ್ನೋ ಅಥವಾ ಸಂಪ್ರೋಕ್ಷಣೆಯನ್ನೋ ಮಾಡಬೇಕು. ಈ ಬಗೆಯ ಪುನಃಪ್ರತಿಷ್ಠೆಯನ್ನು ಮಲಮಾಸ, ಶುಕ್ರಾಸ್ತ, ಗುರು ಅಸ್ತಾದಿಗಳಲ್ಲೂ ಮಾಡಬಹುದು.

## ದೇವಾಲಯವನ್ನು ಒಡೆದುಹಾಕಿದ್ದರೆ

ದೇವಾಲಯದ ಕೊಳ, ಕೆರೆ ಕೂಪಗಳನ್ನು ಒಡೆದುಹಾಕಿದ್ದರೆ. ಉಪ ವನ, ಸೇತು, ಸಭಾಮಂಟಪವನ್ನು ಭಂಗಪಡಿಸಿದರೂ 'ಇದಂ ವಿಷ್ಣು ರ್ವಿಚಕ್ರಮೇ, ಮಾನಸ್ತೋಕೇ, ವಿಷ್ಣೋಃಕರ್ಮಾಣಿ-ಪಾದೋಽಸ್ಯ ವಿಶ್ವಾ-ಈ ನಾಲ್ಕು ಮಂತ್ರಗಳಿಂದ ಆಜ್ಯಾಹುತಿಗಳನ್ನು ಕೊಟ್ಟು, ಹೋಮ ಮಾಡಿ, ಬ್ರಾಹ್ಮಣಭೋಜನ ಮಾಡಿಸಬೇಕು,

## ದೇವತಾ ಸಂಪ್ರೋಕ್ಷಣ ವಿಧಾನ

ದೇವರನ್ನು ಉದ್ವಾಸನೆ ಮಾಡಿ ಐದುಸಲ ಮೃತ್ತಿಕಾಜಲದಿಂದ ತೊಳೆದು ಪಂಚಗವ್ಯಗಳಿಂದ ಸ್ನಾನಮಾಡಿಸಿ, ಕುಶೋದಕಗಳಿಂದ ಶುದ್ಧಿಗೊಳಿಸಿ, ಮೂಲಮಂತ್ರದಿಂದ ೧೦೮ ಸಲ ಪ್ರೋಕ್ಷಣೆ ಮಾಡಿ, ಶಿರಸ್ಸಿನಿಂದ ಪೀಠಪರ್ಯಂತರ ಮೂಲಮಂತ್ರದಿಂದ ಸ್ಪರ್ಶಿಸಿ, ತತ್ತ್ವನ್ಯಾಸ, ಲಿಪಿನ್ಯಾಸ (ಮಾತೃಕಾನ್ಯಾಸ), ಮಂತ್ರನ್ಯಾಸಗಳನ್ನು ಮಾಡಿ, ಪ್ರಾಣಪ್ರತಿಷ್ಠೆ ಮಾಡಿ ಮಹಾಪೂಜೆಯನ್ನು ಮಾಡಬೇಕು. ಪೂಜೆ ನಿಂತುಹೋದಾಗಲೂ ಇದೇ ರೀತಿ ಸಂಪ್ರೋಕ್ಷಣೆ ಮಾಡಬೇಕು.

---

## ವಾರ್ಷಿಕ ಶ್ರಾದ್ಧದ ಕೆಲವು ವಿಶೇಷ ನಿಯಮಗಳು

1 ರಾಜಕಾರ್ಯದಲ್ಲಿ (ಸರ್ಕಾರಿ ಕೆಲಸದಲ್ಲಿ) ನಿಯಮಿಸಲ್ಪಟ್ಟವರೂ ಮತ್ತು ಕಾರಾಗೃಹದಲ್ಲಿ ಬಂಧಿಸಲ್ಪಟ್ಟವರೂ, ಶಿಕ್ಷೆಗೆ ಗುರಿಯಾದವರೂ ಇತರೆ ಎಲ್ಲಾ ಆಪತ್ತುಗಳಲ್ಲಿ ಸಿಕ್ಕಿಕೊಂಡವರೂ ಸಹ ತಾವು ಮಾಡತಕ್ಕ ಶ್ರಾದ್ಧವನ್ನು ಬ್ರಾಹ್ಮಣರ ಮೂಲಕ ಮಾಡಿಸಬೇಕು.

ರಾಜಕಾರ್ಯೇ ನಿಯುಕ್ತಸ್ಯ ಬಂಧನಿಗ್ರಹವರ್ತಿನಃ ।
ವ್ಯಸನೇಷು ಚ ಸರ್ವೇಷು ಶ್ರಾದ್ಧಂ ವಿಪ್ರೇಣ ಕಾರಯೇತ್ ॥
(ಧರ್ಮಸಿಂಧು ೩।೨।೩)

2 ಶ್ರಾದ್ಧದಲ್ಲಿ ಜ್ಞಾತಿಗಳನ್ನೂ, ಸಗೋತ್ರರನ್ನೂ, ಒಟ್ಟಿನಲ್ಲಿ ಸಪಿಂಡರನ್ನು, ಮಾತುಲ, ಶ್ವಶುರ ಶ್ಯಾಲಕಾದಿಗಳನ್ನು, ಗುರು-ಶಿಷ್ಯಭಾವ ಇದ್ದವರನ್ನೂ, ಸಹಾಧ್ಯಾಯಿ-ಮಿತ್ರ ಮುಂತಾದವರನ್ನೂ; ಕುಷ್ಠ-ಅಪಸ್ಮಾರ-ಕ್ಷಯ ಮುಂತಾದ ರೋಗಿಗಳನ್ನೂ ಬ್ರಾಹ್ಮಣಸ್ಥಾನಕ್ಕೆ ನಿಮಂತ್ರಿಸಬಾರದು.

3 ವೇದಾಧ್ಯಯನಸಂಪನ್ನ, ವೇದಾಂಗಾಧ್ಯಾಯಿ, ಕರ್ಮಠ, ಶಿವಭಕ್ತ, ವಿಷ್ಣುಭಕ್ತ ಇವರು ಪತ್ನಿಯುತರಾಗಿದ್ದರೆ ಇವರೆಲ್ಲರೂ ಶ್ರಾದ್ಧಕ್ಕೆ ಅರ್ಹರಾದ ಬ್ರಾಹ್ಮಣರು.

4 ಯಾರೂ ಸಿಕ್ಕದೇ ಇದ್ದರೆ- ಮಾತಾಮಹ, ಮಾತುಲ, ಭಾಗಿನೇಯ (ಅಕ್ಕತಂಗಿಯರ ಮಕ್ಕಳು), ದೌಹಿತ್ರ, ಜಾಮಾತಾ, ಗುರು, ಶಿಷ್ಯ, ಶ್ವಶುರ, ಭಾವ, ಸೋದರತ್ತೆ ಮಗ, ಚಿಕ್ಕಮ್ಮ-ದೊಡ್ಡಮ್ಮನ ಮಗ, ಅತಿಥಿ, ಸಗೋತ್ರ, ಮಿತ್ರ ಇವರು ಮಧ್ಯಮರೀತಿಯಲ್ಲಿ ಶ್ರಾದ್ಧಕ್ಕೆ ಯೋಗ್ಯರಾದ ಬ್ರಾಹ್ಮಣರು.

ಗುಣವಂತರಾದ ದೌಹಿತ್ರ, ಜಾಮಾತಾ, ಅಕ್ಕ-ತಂಗಿ ಮಗ ಇವರು ಇರುವಾಗ ಇವರಿಗೆ ನಿಮಂತ್ರಣ ಮಾಡದಿದ್ದರೆ ದೋಷವೆಂದಿದೆ.

5 ಋತ್ವಿಜರು, ಸಪಿಂಡರು, ಸಂಬಂಧಿಗಳು, ಶಿಷ್ಯರು ಲಭಿಸಿದರೆ ಇವರನ್ನು ವಿಶ್ವೇದೇವ ಸ್ಥಾನದಲ್ಲಿ ಕೂರಿಸಬೇಕು. ಪಿತೃಸ್ಥಾನಕ್ಕೆ ಕೂರಿಸ ಬಾರದು.

6 ನಿಮಂತ್ರಣಕ್ಕೆ ಮೊದಲೇ ಬ್ರಾಹ್ಮಣರನ್ನು ಪರೀಕ್ಷಿಸಿಕೊಂಡು ಹೇಳಬೇಕು. ನಿಮಂತ್ರಣ ಕೊಟ್ಟಮೇಲೆ ಗುಣಾವಗುಣಗಳನ್ನು ಪರೀಕ್ಷೆ ಮಾಡಬಾರದು.

8 ಪಿತೃಕರ್ಮದಲ್ಲಿ ಸಪಿಂಡೀಕರಣಪರ್ಯಂತ ಋಜುದರ್ಭೆಗಳು ಪ್ರಶಸ್ತ, ತದನಂತರದ ಶ್ರಾದ್ಧಗಳಲ್ಲಿ ದ್ವಿಗುಣವಾದ ಭುಗ್ನದರ್ಭೆಗಳು. ಪಿಂಡಕ್ಕೆ ಹಾಕಿದ್ದು, ಪಿತೃತರ್ಪಣಕ್ಕೆ ಉಪಯೋಗಿಸಿದ್ದು, ಮಲಮೂತ್ರಾದಿ ಕಾಲಗಳಲ್ಲಿ ಧರಿಸಿದ್ದು, ಮಾರ್ಗದಲ್ಲಿ, ಚಿತಿಯಲ್ಲಿ, ಯಜ್ಞಭೂಮಿಯಲ್ಲಿ ಹಾಕಿದ್ದು, ಬ್ರಹ್ಮಯಜ್ಞಕ್ಕೆ ಉಪಯೋಗಿಸಿದ್ದು ಸಹ ದರ್ಭೆಗಳನ್ನು ವರ್ಜಿಸಬೇಕು,

## ಕರ್ತೃ-ಭೋಕ್ತೃಗಳ ನಿಯಮಗಳು

8 ಸ್ತ್ರೀಸಂಗ, ಪುನರ್ಭೋಜನ, ಅನೃತಭಾಷಣ, ಅಧ್ಯಾಪನ, ದ್ಯೂತ, ಭಾರ ಹೊರುವುದು, ಹಿಂಸೆ, ದಾನ, ಪ್ರತಿಗ್ರಹ, ಚೌರ್ಯ, ಮಾರ್ಗಪ್ರಯಾಣ, ದಿವಾಸ್ವಾಪ, ಕಲಹಗಳು ವರ್ಜ್ಯವಾಗಿವೆ.

ಶ್ರಾದ್ಧದ ದಿನ ಮತ್ತು ಹಿಂದಿನ ದಿನ ಸ್ತ್ರೀಸಂಗ ಋತುಕಾಲವಾದರೂ ಮಾಡಬಾರದು. ಕರ್ತೃ-ಭೋಕ್ತೃಗಳಿಬ್ಬರೂ ಶುಭ್ರವಸ್ತ್ರಗಳನ್ನು ಧರಿಸ ಬೇಕು. ಆರ್ದ್ರವಸ್ತ್ರ, ಕಾಷಾಯವಸ್ತ್ರ, ಕೌಪೀನ, ಕೆಂಪುಬಟ್ಟೆ, ಸುಟ್ಟ ಬಟ್ಟೆ, ಹೊಲಿದ ಬಟ್ಟೆ ಎಲ್ಲವನ್ನೂ ಬಿಡಬೇಕು. ಕಚ್ಚೆಯಿಲ್ಲದಿರಬಾರದು. ಕರ್ತೃವು ಹಣೆಯಲ್ಲಿ ಭಸ್ಮ-ತ್ರಿಪುಂಡ್ರಾದಿಗಳನ್ನು ಧರಿಸಬೇಕೆಂಬ ನಿಯಮವಿಲ್ಲ. ಭೋಕ್ತೃಗಳು ಧರಿಸಬೇಕು. ಚಂದನ-ಗಂಧಾದಿಗಳ ತಿಲಕವನ್ನು ಪಿಂಡ ದಾನಕ್ಕೆ ಮೊದಲು ಇಟ್ಟುಕೊಳ್ಳಕೂಡದು. ಭೋಕ್ತೃವು ಭೋಜನಕಾಲಕ್ಕೆ ಮುಂಚೆ ಇಟ್ಟುಕೊಳ್ಳಬಾರದು. ಕರ್ತೃವು ನಿಮಂತ್ರಣಕ್ಕೆ ಹೇಳಿದ ಬ್ರಾಹ್ಮ

ಣನನ್ನು ಬಿಡಬಾರದು. ಪ್ರಮಾದದಿಂದ ಬಿಟ್ಟರೆ ಅವನನ್ನು ಸಮಾಧಾನ ಗೊಳಿಸಬೇಕು. ಆಮಂತ್ರಣ ಕೊಟ್ಟ ಬ್ರಾಹ್ಮಣನು ಶ್ರಾದ್ಧಕ್ಕೆ ವಿಲಂಬ ಮಾಡಬಾರದು. ಮಾಡಿದರೆ ದೇವ-ಪಿತೃದ್ರೋಹಿಯಾಗಿ ನರಕವನ್ನು ಅನು ಭವಿಸುವನು. ಸ್ತ್ರೀಸಂಗ, ಪುನರ್ಭೋಜನ ಇವುಗಳನ್ನು ಶ್ರಾದ್ಧದಿನ ಮತ್ತು ಪೂರ್ವದಿನಗಳಲ್ಲಿ ಕರ್ತೃ-ಭೋಕ್ತೃಗಳಿಬ್ಬರೂ ಬಿಡಬೇಕು.

9 ಶ್ರಾದ್ಧಭೋಜನ ಮಾಡಿದ ಬ್ರಾಹ್ಮಣನು ಗಾಯತ್ರಿಯಿಂದ ಹತ್ತಾವರ್ತಿ ಜಪಿಸಿದ ನೀರನ್ನು ಕುಡಿದು ಸಾಯಂಸಂಧ್ಯಾವಂದನೆ, ಜಪ ಮಾಡಬೇಕು.

ಸೂತಕದಲ್ಲೂ, ದೇಶಾಂತರ ಪ್ರವಾಸದಲ್ಲೂ, ಅಶಕ್ತಿಯಿರುವಾಗಲೂ ಶ್ರಾದ್ಧಭೋಜನ ಮಾಡಿದರೂ ಔಪಾಸನಾದಿ ಹೋಮವನ್ನು ತಾನುಮಾಡದೆ ಮತ್ತೊಬ್ಬರಿಂದ ಮಾಡಿಸಬೇಕು.

ಕರ್ತೃ ಅಶಕ್ತನಾಗಿ ಅವನ ಪುತ್ರ ಅಥವಾ ಶಿಷ್ಯನು ಶ್ರಾದ್ಧ ಮಾಡುವಲ್ಲಿ ಯಜಮಾನ ಮತ್ತು ಪ್ರತಿನಿಧಿಗಳಿಬ್ಬರೂ ಮೇಲಿನ ನಿಯಮಗಳನ್ನು ಅನು ಸರಿಸಬೇಕು.

10 ಕಚ್ಚೆಯನ್ನು ಹಾಕದ ಸ್ತ್ರೀಯು, ಕೇಶವನ್ನು ಗಂಟುಹಾಕದೆ ಬಹಳ ಗಟ್ಟಿಯಾಗಿ ಮಾತನಾಡುವ, ಅಟ್ಟಹಾಸ ಮಾಡುವ ಸ್ತ್ರೀಯರನ್ನು ಕಂಡು ಪಿತೃಗಳು ನಿರಾಶರಾಗಿ ಹೋಗುವರು.

11 ಸವರ್ಣನಾದ ಆಪ್ತನನ್ನೇ ಬ್ರಾಹ್ಮಣರ ನಿಮಂತ್ರಣಕ್ಕೆ ಕಳು ಹಿಸಬೇಕು.

ಮೇಲ್ಕಂಡ ವಿಷಯಗಳಿಗೆ ಪ್ರಮಾಣ—

ದಶಕೃತ್ವಃ ಪಿಬೇದಾಪಃ ಗಾಯತ್ರ್ಯಾ ಶ್ರಾದ್ಧಕೃದ್ದ್ವಿಜಃ ।
ಸಾಯಂಸಂಧ್ಯಾಮುಪಾಸೀತ ಜಪೇಚ್ಚ ಜುಹುಯಾದಪಿ ।
ಸೂತಕೇಚ ಪ್ರವಾಸೇಚ ಅಶಕ್ತೌ ಶ್ರಾದ್ಧಭೋಜನೇ ।

ಔಪಾಸನಾದಿಕಂ ಹೋಮಂ ನ ಕುರ್ಯಾತ್ ಕಿಂತು ಕಾರಯೇತ್ ।
ಮುಕ್ತಕಚ್ಛಾತು ಯಾನಾರೀ ಮುಕ್ತಕೇಶೀ ತಥೈವಚ ।
ಹಸತೇ ವದತೇ ತ್ಯಕ್ತಾ ನಿರಾಶಾಃ ಪಿತರೋ ಗತಾಃ ॥
ಸವರ್ಣಂ ಪ್ರೇಷಯೇದಾಸ್ತಂ ದ್ವಿಜಾನಾಂ ತು ನಿಮಂತ್ರಣೇ ॥

**ಬ್ರಾಹ್ಮಣರು ಸರ್ವಥಾ ಸಿಕ್ಕದಿದ್ದರೆ** ದರ್ಭಮಯವಾದ ವಟು ಗಳನ್ನು ನಿರ್ಮಿಸಿ, ಪ್ರಶ್ನಪ್ರತಿವಚನಗಳೊಂದಿಗೆ ಸಮಸ್ತ ಶ್ರಾದ್ಧವನ್ನು ತಾನೆ ಮಾಡಬೇಕು. (ಇದಕ್ಕೆ ಘಟಕಶ್ರಾದ್ಧವೆಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವ್ಯವಹಾರವಿದೆ.)

ಅಥವಾ ಪೂಜಿಸಿದ ಲಿಂಗ, ಶಾಲಗ್ರಾಮವನ್ನು ವಿಶ್ವೇದೇವಸ್ಥಾನ-ಪಿತೃಸ್ಥಾನಗಳಲ್ಲಿ ಇರಿಸಿ ಶ್ರಾದ್ಧ ಮಾಡಬಹುದು.

ವಚನಗಳು —

ಪ್ರೇಷಾನುಪ್ರೇಷಸಂಯುಕ್ತಂ ಸರ್ವಶ್ರಾದ್ಧಂ ಸಮಾಚರೇತ್ ॥
ಅಥವಾಭ್ಯರ್ಚಿತಂ ಲಿಂಗಂ ಶಾಲಗ್ರಾಮಮಥಾಪಿವಾ ।
ಸಂಸ್ಥಾಪ್ಯ ದೇವಪಿತ್ರರ್ಥೆ ಕೀರೇ ಶ್ರಾದ್ಧಂ ಸಮಾಚರೇತ್ ॥

**ಗೋತ್ರವು ತಿಳಿಯದಿದ್ದರೆ ಕಾಶ್ಯಪ ಗೋತ್ರವನ್ನು ಉಚ್ಚ ರಿಸಬಹುದು.** ಗೋತ್ರಸ್ಯತ್ವಪರಿಜ್ಞಾನೇ ಕಾಶ್ಯಪಂ ಗೋತ್ರಮುಚ್ಯತೇ ।

ನಾಮವನ್ನು ಬ್ರಾಹ್ಮಣರಿಗೆ ಶರ್ಮಾಂತವಾಗಿಯೂ, ಕ್ಷತ್ರಿಯರಿಗೆ ವರ್ಮಾಂತವಾಗಿಯೂ, ವೈಶ್ಯರಿಗೆ ಗುಪ್ತಾಂತವಾಗಿಯೂ, ಶೂದ್ರರಿಗೆ ದಾಸಪದಾಂತವಾಗಿಯೂ ಉಚ್ಚರಿಸಬೇಕು.

ಸ್ತ್ರೀಯರಿಗೆ ಸಾವಿತ್ರೀದಾ ಎಂದು ದಕಾರಾಂತವಾಗಿಯೋ, ಅಥವಾ ದೇವೀ ಶಬ್ದಾಂತವಾಗಿಯೋ, ದೇವೀದಾ ಎಂದೋ ಉಚ್ಚರಿಸಬೇಕು.

## ಸಂಬಂಧ-ಗೋತ್ರ-ನಾಮೋಚ್ಚಾರಣ-ಸ್ಥಳ

14 ಸಂಕಲ್ಪ-ಕ್ಷಣದಾನ-ಪಾದ್ಯ, ಆಸನ, ಆವಾಹನ, ಅರ್ಘ್ಯದಾನ ಗಂಧಾದಿ ಪಂಚೋಪಚಾರ, ಅನ್ನದಾನ, ಪಿಂಡದಾನ, ಅಂಜನ, ಅಭ್ಯಂಜನ ಅಕ್ಷಯ್ಯ, ಸ್ವಧಾವಾಚನ—ಈ ಸ್ಥಳಗಳಲ್ಲಿ ಸಂಬಂಧ–ಗೋತ್ರ-ನಾಮ–ರೂಪಗಳನ್ನು ನಿಯಮವಾಗಿ ಉಚ್ಚರಿಸಬೇಕು.

ಮೊದಲು ಸಂಬಂಧ, ನಂತರ ನಾಮ, ನಂತರ ಗೋತ್ರ, ರೂಪ ಅಥವಾ ಸಂಬಂಧ-ಗೋತ್ರ-ನಾಮ-ರೂಪ ಹೀಗೂ ಉಚ್ಚರಿಸಬಹುದು.

ಸಕಾರೇಣಾತು ವಕ್ತವ್ಯಂ ಗೋತ್ರಂ ಸರ್ವತ್ರಧೀಮತಾಂ । ಎಂಬ ವಚನದಂತೆ ಸಕಾರವನ್ನು ಸೇರಿಸಿ ಕಾಶ್ಯಪಸ ಗೋತ್ರಸ್ಯ ಇತ್ಯಾದಿಯಾಗಿ ಗೋತ್ರವನ್ನು ಹೇಳಬೇಕು.

## ವಿಭಕ್ತಿನಿಯಮ

15 ಷಷ್ಠೀವಿಭಕ್ತ್ಯಾ ಸಕಲಃ ಕ್ಷಣಾಶ್ಚಾಕ್ಷಯ್ಯ ಕರ್ಮಚ ।
ಪಷ್ಠ್ಯಾವಾಸ್ಯಾತ್ ಚತುರ್ಥ್ಯಾವಾ ಆಸನದಾನಂ ದ್ವಿಜಾತಯೋಃ ॥
ದ್ವಿತೀಯಯ್ಯಾವಾಹನಂಸ್ಯಾತ್ ವಿಭಕ್ತಿಸ್ತು ಚತುರ್ಥಿಕಾ ।
ಅನ್ನದಾನೇ ಪಿಂಡ ಪೂಜಾ ಸ್ವಧಾ ಸ್ವಸ್ತೀತಿ ವಾಚಿನೇ ॥
ಪಿಂಡದಾನೇತು ಸಂಬುದ್ಧಿಃ ಯೇಚತ್ವೇತ್ಯಾದಿತಃ ಪುರಾ ॥
ತತಃಪರಂ ಚತುರ್ಥೀ ಚೇತ್ಯುಭಯೇಂ ಸರ್ವಸಾಮತಂ ।
ಶೇಷಾಣಿ ಸರ್ವಕರ್ಮಾಣಿ ಸಂಬುದ್ಧ್ಯಂತೇ ಯಥಾಯಥಮ್ ।
ಇದಂತೇವಾ ಇದಂಪೂರ್ವಾ ಪ್ರಯುಜ್ಯೈವ ಸಮಾಚರೇತ್ ॥

## ಸವ್ಯಾಪಸವ್ಯ ವ್ಯವಸ್ಥೆ

ಸವ್ಯೇನ ದೈವಕರ್ಮಸ್ಯಾತ್ ಅಪಸವ್ಯೇನ ಪೈತೃಕಂ ।
ವಿಪ್ರಪ್ರದಕ್ಷಿಣಾ ವಿಪ್ರಸ್ವಾಗತಂ ಚಾರ್ಘ್ಯದಾನಕಂ ।

ಸೂಕ್ತಸ್ತೋತ್ರ ಜಪೋನಸ್ಯ ಪಾತ್ರೇತು ಪರಿವೇಷಣಂ ।
ಆಹ್ವಾನ ಅನ್ನಸ್ಯಾಘ್ರಾಣಂ ತಥಾಚ ಸ್ವಸ್ತಿವಾಚನಂ ।
ತಾಂಬೂಲದಾನಪರ್ಯಾರಭ್ಯ ಆಸಮಾಪ್ತೇರಿತಿ ಪೈತ್ರಕಂ ।
ಪ್ರದಕ್ಷಿಣಾದಿ ಏತದುಕ್ತಂ ಸರ್ವೇಣೈವ ಸಮಾಚರೇತ್ ॥

ಈ ವಚನದಂತೆ ಬ್ರಾಹ್ಮಣಪ್ರದಕ್ಷಿಣೆ ಮೊದಲಾಗಿ ಗಣನೆಮಾಡಿದ ಪಿತೃಕರ್ಮವನ್ನು ಸವ್ಯದಿಂದಲೆ ಮಾಡಬೇಕು.

18 ಪಿತೃ—ವಿಶ್ವೇದೇವ (ವಿಷ್ಣು) ಅರ್ಚನೆಯ ಕ್ರಮ—ಬಲದಿಂದ ಪಾದ, ಜಾನು, ಅಂಗ, ಮೂರ್ಧಸ್ಥಾನಗಳಲ್ಲಿ, ಪಿತೃಸ್ಥಾನದಲ್ಲಿ ಎಡಭಾಗ ದಲ್ಲಿ ಶಿರಸ್ಸು, ಅಂಗ, ಜಾನು ಪಾದಗಳಲ್ಲಿ ಅರ್ಚನೆ ಮಾಡಬೇಕು.

19 ಅಕ್ಷಯ್ಯ ಆಸನ ಅರ್ಘ್ಯ ಈ ಮೂರನ್ನು ಬಿಟ್ಟು ಪಿತೃಗಳಿಗೆ ಇತರ ದಾನಗಳನ್ನು ಸ್ವಧಾಕಾರದಿಂದಲಶ್ವೆಮೋ, ದೇವರಿಗೆ ಸ್ವಾಹಾಕಾರ ದಿಂದಲೂ ದೈವತೀರ್ಥದಿಂದ ದೇವಕಾರ್ಯವನ್ನೂ, ಪಿತೃತೀರ್ಥದಿಂದ ಪಿತೃ ಕಾರ್ಯವನ್ನೂ ಮಾಡಬೇಕು

ಅಂಗುಳ್ಯಗ್ರೇ ದೈವತೀರ್ಥಂ । ಮಧ್ಯೆಂಗುಷ್ಠಾಂಗುಳ್ಯೋಃ ಪೈತ್ರಂ । ಎಂದು ಅಮರಕೋಶದಂತೆ ಬೆರಳಿನ ತುದಿಯಲ್ಲಿ ದೇವಕಾರ್ಯವನ್ನೂ (ಅರ್ಘ್ಯಾದಿಗಳನ್ನು) ಕೊಡಬೇಕು. ಅಂಗುಷ್ಠ (ಹೆಬ್ಬೆರಳು ಬೆರಳುಗಳ ನಡುವೆ ಅರ್ಘ್ಯಾದಿಗಳನ್ನು ತರ್ಪಣವನ್ನು ಕೊಡಬೇಕು.) ಮೊದಲನೆಯದು ದೈವತೀರ್ಥ, ಎರಡನೆಯದು ಪಿತೃತೀರ್ಥವೆಂದು ಹೆಸರಾಗಿದೆ.

## ಊಹವಿಚಾರ

1 ಯಾವ ಸ್ಥಳದಲ್ಲಿ ಬಹುವಚನಾಂತವಾಗಿ ಪಿತೃಶಬ್ದವಿರುವುದೋ ಅಲ್ಲಿ ಪಿತೃಶಬ್ದಕ್ಕೆ ಸರ್ವಪಿತೃಗಳು ಎಂಬರ್ಥವಿರುವುದರಿಂದ ಊಹಮಾಡು ವುದು ಬೇಡ. ಉದಾ.—ಪಿತೄನಿಮಾನ್ ಪ್ರೀಣಯಾಹಿನ ಸ್ವಧಾನಮಃ । ಮಾತೃಶ್ರಾದ್ಧದಲ್ಲಿ ಮಾತೄರಿಮಾಃ ಎಂದು ಹೇಳಬಾರದು.

2 ಅದರಲ್ಲೂ ಶುಂಧಸವ್ಮಂತ್ರಗಳಲ್ಲಿ ಶುಂಧಂತಾಂ ಪಿತರಃ ಎಂಬಲ್ಲಿ ಬಹುವಚನವು ಪ್ರಾಚ್ಯಾರ್ಥಕವಾದ್ದರಿಂದ ಶುಂಧಂತಾಂ ಮಾತರಃ ಎಂದು ಊಹವಿದೆ. ಬಹುವಚನಕ್ಕೆ ಇಲ್ಲ. ಋಚಂ ನೋಹೇತ್ ಎಂದು ನಿಷೇಧಿಸಿದ್ದರಿಂದ ಋಚ್ ಮಂತ್ರಗಳಿಗೆ ಊಹವಿಲ್ಲ.

3 ಪಿಂಡಪ್ರದಾನ ಮಾಡುವಾಗ ಯೇಚತ್ವಾಮತ್ರಾನು - ತೇಭ್ಯಶ್ಚ ಎಂಬಲ್ಲಿ ಮಾತೃಶ್ರಾದ್ಧವು ಬಂದಾಗ ಯಾಶ್ಚತ್ವಾಮತ್ರಾನು - - - ತಾಭ್ಯಶ್ಚ ಎಂದು ಹೇಳಬೇಕಾಗಿಲ್ಲ. ಪುಮಾನ್ ಸ್ತ್ರಿಯಾ ಎಂಬ ಪಾಣಿನಿ ಸೂತ್ರದಂತೆ ತೇಚ_ತಾಶ್ಚ ಎಂದು ವಿಗ್ರಹ ಮಾಡಿದರೆ ಪುಲ್ಲಿಂಗ ಶೇಷವಾಗಿ ಏಕಶೇಷ ವೃತ್ತಿಯಲ್ಲಿ ತೇ ಎಂದು ಉಳಿಯುವುದರಿಂದ ಸ್ತ್ರೀಯರೂ ಸಹ ಅನುಗಾಮಿಗಳಾಗಿರುವುದು ಸ್ಪಷ್ಟಪಡುವುದು. ಆದ್ದರಿಂದ ಯಾಶ್ಚ ತಾಭ್ಯಶ್ಚ ಎಂದು ಊಹ ಬೇಕಿಲ್ಲ ಎಂದು ಆಶ್ವಲಾಯನ ಸೂತ್ರವೃತ್ತಿಯಲ್ಲಿ ಹೇಳಿದೆ.

4 ಇದರಂತೆ ಆಯನ್ತುನಃ ಪಿತರಃ — — - ಪಿಲೋಸಿ ಸೋಮ ದೇವತ್ಯೋ - - ಪಿತ್ರನ್ - - ಉಶಂತಸ್ತ್ವಾನಿ - ಪಿತೃನ್ ಹವಿಷೆ " ಪಿಂಡಾನುಮಂತ್ರಣ.

5 ದಶದಾನ_ಉಪಸ್ಥಾನ_ಪ್ರವಾಹಣ_ಪ್ರಾಶನ ಇತ್ಯಾದಿ ಮಂತ್ರಗಳಲ್ಲಿ ಬಹುವಚನಾಂತವಾದ ಪಿತೃಪದವು ಇರುವುದರಿಂದ ಊಹವಿಲ್ಲ. ಪಿಂಡದಾನ - ಅಭ್ಯಂಜನ - ಅಂಜನ - ಅರ್ಘ್ಯದಾನ ಈ ಕಾಲದಲ್ಲಿ ಏಕನಾಮವಾದಲ್ಲಿ ಏಕವಚನಾಂತ, ಮಾತ್ರಾದಿ ದ್ವಿತ್ವವಿದ್ದರೆ ದ್ವಿವಚನಾಂತ, ಬಹುತ್ವವಿದ್ದರೆ ಬಹುವಚನಾಂತ ಪ್ರಯೋಗಿಸುವಾಗ ಊಹವಿದೆ.

6 " ಏತದ್ವಾಮಸ್ಮನ್ಮಾತರೌ — - ಯೇ ಚ ಯುವಾಮತ್ರಾನು - , ಮಾತೃಭ್ಯಾಂ ಅಯಂ ಪಿಂಡಃ ಇತ್ಯಾದಿ- ಅಭ್ಯಂಜಾಥಾಂ ಅಂಜಾಥಾಂ- ಎಂದು ದ್ವಿವಚನದಲ್ಲಿ ಏತದ್ವೋऽಸ್ಮನ್ಮಾತರಂ — — ಯುಷ್ಮಾನುತ್ರಾನು " ಎಂದು ಅಭ್ಯಂಜನೇ ಅಭ್ಯಜ್ಞ್ವಂ । ಅಂಜನೇ ಅಂಜ್ಞ್ವಂ । ಅರ್ಘ್ಯದಾನೆ " ಇದಂತೇ, ಇದವಾಂ, ಇದವಃ " ಎಂದು ವಿಭಕ್ತಿಯನ್ನು ಬದಲಾಯಿಸಿ ಊಹ ಮಾಡಬೇಕು,

## ಪಿಂಡೋಪಹತಿಯಾದರೆ ಪ್ರಾಯಶ್ಚಿತ್ತ

ನಾಯಿ, ನರಿ, ಕತ್ತೆಗಳ ಸ್ಪರ್ಶವಾದರೆ, ಅಥವಾ ಪಿಂಡವು ಪ್ರಮಾದದಿಂದ ಒಡೆದುಹೋದರೆ, ಬೆಕ್ಕು ಇಲಿಗಳು ಮುಟ್ಟಿದರೂ, ಅಸ್ಪೃಶ್ಯರಿಂದ, ಪತಿತಾದಿಗಳಿಂದಲೂ ಮುಟ್ಟಿದ್ದಾದರೆ, ಪ್ರಾಜಾಪತ್ಯ ಕೃಚ್ಛ್ರಾಚರಣೆ ಮಾಡಿ ಪುನಃ ಪಿಂಡಗಳನ್ನು ಅದೇ ಪಾಕದಿಂದಲೋ, ಬೇರೆ ಪಾಕದಿಂದಲೋ ಮಾಡಿ ಪಿಂಡಪ್ರದಾನ ಮಾಡಬೇಕು. ಪುನಃ ಶ್ರಾದ್ಧಕ್ಕೆ ಆವೃತ್ತಿಯಿಲ್ಲ ಎಂಬುದು ಸರ್ವಸಮ್ಮತ, ಕಾಕಸ್ಪರ್ಶವಾದರೆ ದೋಷವಿಲ್ಲ.

## ಶ್ರಾದ್ಧಶೇಷ ಭೋಜನಕ್ಕೆ ಅಧಿಕಾರಿಗಳು

ಶ್ರಾದ್ಧಶೇಷಾನ್ನವನ್ನು ಶಿಷ್ಯರಿಗೂ ಜ್ಞಾತಿಗಳಿಗೂ ಬಡಿಸಬಹುದು. ಅವರೂ ಊಟಮಾಡಬಹುದು. "ಇಷ್ಟೈಸಹ ಭುಜ್ಯತಾಂ" ಎಂದು ಅನುಜ್ಞೆ ಕೊಡುವುದು ರೂಢಿಯಲ್ಲಿದೆ. ಸಗೋತ್ರದವರೂ, ಜ್ಞಾತಿಗಳೂ ಶಿಷ್ಯರೂ, ಬಂಧುಗಳೂ (ಪ್ರಸಾದಕ್ಕೆ ಭಾಗಿಗಳಾದವರು) ಭುಂಜಿಸಬಹುದು.

ಬ್ರಹ್ಮಚಾರಿಗಳಿಗೂ, ಯತಿಗಳಿಗೂ, ವಿಧವೆಯರಿಗೂ ನಿಷಿದ್ಧವಾಗಿದೆ.

ಗುರುವಿನ ಅಥವಾ ಯೋಗಿಪುರುಷನ ಶ್ರಾದ್ಧಶೇಷವು ಗೃಹಸ್ಥನಿಗೆ ದೋಷವಲ್ಲ.

ಶ್ರಾದ್ಧಶೇಷವನ್ನು ಶೂದ್ರರಿಗೆ ಕೊಡಬಾರದು.

ನಶೂದ್ರಂ ಭೋಜಯೇತ್ತಸ್ಮಿನ್ ಗೃಹೇ ಯತ್ನೇನ ತದ್ದಿನೇ ।
ಶ್ರಾದ್ಧಶೇಷಂ ನ ಶೂದ್ರೇಭ್ಯಃ ಪ್ರದದ್ಯಾದಖಿಲೇಷ್ವಪಿ ॥

ಶ್ರಾದ್ಧಕರ್ತೃವು ಶ್ರಾದ್ಧಶೇಷವನ್ನು ಭುಂಜಿಸದೇ ಇದ್ದರೆ ದೋಷವು. ಏಕಾದಶಿ ಮುಂತಾದ ಉಪವಾಸ ದಿನವಾಗಿದ್ದರೆ ಕೇವಲ ಶೇಷವನ್ನು ಆಘ್ರಾಣಿಸಬೇಕು. ಶ್ರಾದ್ಧಶೇಷವನ್ನು ಹಗಲೇ ಭುಂಜಿಸಬೇಕು. ರಾತ್ರಿಯಲ್ಲಿ ಕೂಡದು.

ಮಾತಾಪಿತೃಗಳ ಸಪಿಂಡೀಕರಣವನ್ನು ಪುತ್ರನು (ಮುಖ್ಯ ಕರ್ತೃವು) ಮಾಡುವಾಗ ಏಕಾದಶಾಹ, ದ್ವಾದಶಾಹ, ತ್ರಯೋದಶಾಹ ದಿನಗಳಲ್ಲಿ ತಿಥಿ ವಾರ ನಕ್ಷತ್ರಾದಿಗಳನ್ನು ಶೋಧಿಸಬೇಕಾಗಿಲ್ಲ.

2 ಈ ಮೇಲ್ಕಂಡ ದಿನಗಳು ಮೀರಿಹೋದರೆ ಮುಂದೆ ಹೇಳಿದ ದಿನಗಳಲ್ಲಿ ತಿಥಿ ವಾರ ನಕ್ಷತ್ರಾದಿಗಳನ್ನು ಶೋಧಿಸಿ ಮಾಡಬೇಕು.

ಆಧಾರ ವಚನ ೧ನೇ ವಿಷಯಕ್ಕೆ

ಶ್ರಾದ್ಧಂ ಸಪಿಂಡನಂ ಕುರ್ಯಾತ್ ತಿಥಿವಾರಾನ್ನಚಿಂತಯೇತ್ ।
ವರ್ಷಾಂತೇ ದ್ವಾದಶಾಹೇ ವಾ ಸಪಿಂಡೀಕರಣಂ ಯದಿ ।
ಏಕಾದಶಾದಿತ್ಯದಿನೇ ವರ್ಷಾಂತೇವಾಪಿಯಶ್ಚರೇತ್ ।
ಸಲಗ್ನಗ್ರಹವಾರಾದಿ ಬಲಂ ನ ಪ್ರತಿಶೋಧಯೇತ್ ॥

ಎರಡನೇ ವಿಷಯಕ್ಕೆ –

ತ್ರಿಪಕ್ಷಾದಿಷು-ಕಾಲೇಷು ಸಪಿಂಡೀಕರಣಂ ಯದಿ ।
ತತ್ರ ಪ್ರಶಸ್ತ ನಕ್ಷತ್ರಂ ಪ್ರತಿಶೋಧ್ಯ ಸಮಾಚರೇತ್ ॥

ವ್ಯಾಸಃ—

ಪ್ರಮಾದಾದಕೃತೇ ತಸ್ಮಿನ್ ದ್ವಾದಶ್ಯೈಕಾದಶೇಽಹನಿ ।
ತ್ರಯೋವಿಂಶದಿನೇವಾಪಿ ತ್ರಿಪಕ್ಷಾದ್ಯುತ್ತರೇಷು ವಾ ।
ತತ್ರಪ್ರಶಸ್ತನಕ್ಷತ್ರಂ ಪರಿಶೋಧ್ಯ ಸಮಾಚರೇತ್ ।
ತ್ರಿಪದರ್ಕ್ಷಂ ವಿನಾಜನ್ಮ ಭಾನು-ಭೌಮ ಶನೈಶ್ಚರಾನ್ ।
ಶುಕ್ರವಾರಂ ತದಂಶಂಚ ವಿನಾನ್ಯತ್ರ ಸಮಾಚರೇತ್ ॥

ಇಪ್ಪತ್ತಮೂರನೇ ದಿನ ತ್ರಿಪಕ್ಷಾದಿಗಳಲ್ಲಿ ಮುಂದೆ ಮಾಡುವದಾದರೆ ತ್ರಿಪಾನ್ನಕ್ಷತ್ರ, ಜನ್ಮನಕ್ಷತ್ರ ಬಿಟ್ಟು ಅನೂರಾಧ, ಆದ್ರ್ರ, ಹಸ್ತ, ರೋಹಿಣಿ ನಕ್ಷತ್ರಗಳಲ್ಲಿ ಮಾಡಬೇಕು. ಭಾನುವಾರ, ಮಂಗಳವಾರ, ಶನಿವಾರ, ಶುಕ್ರ ವಾರಗಳನ್ನು ಬಿಟ್ಟು ಉಳಿದ ವಾರಗಳಲ್ಲಿ ಮಾಡಬೇಕು.

3. ಮಾತಾಪಿತೃವ್ಯತಿರಿಕ್ತರ ವಿಷಯದಲ್ಲಿ ಪುತ್ರರಲ್ಲದವರು ಸಪಿಂಡಿ ಮಾಡುವುದಾದರೆ ದ್ವಾದಶಾಹದಿನಶುಕ್ರವಾರ ಬಂದರೆ ಮಾತಾಪಿತೃಭಿನ್ನರಿಗೆ ಪುತ್ರನೆ ಮಾಡುವುದಾದರೆ ಶುಕ್ರವಾರ ಬಂದರೂ ೧೨ನೆ ದಿನ ಮಾಡಬಹುದು.

ವಚನ (ವೈದ್ಯನಾಥೀಯ) —

ದ್ವಾದಶಾಹನಿ ಸಂಪ್ರಾಪ್ತೇ ಯದಿಶುಕ್ರದಿನಂ ಭವೇತ್ ।
ಮಾತಾಪಿತೃಭ್ಯಾಮನ್ಯಸ್ಯ ನೈವಕುರ್ಯಾತ್ ಸಪಿಂಡನಂ ॥

ಮುಂದೆ ನಿಷಿದ್ಧವಾರ ಬಿಟ್ಟು ಹದಿನಾರನೇ ದಿನ, ಇಪ್ಪತ್ತಮೂರನೇ ದಿನ. ತ್ರಿಪಕ್ಷಾದಿ ದಿನಗಳಲ್ಲಿ ಮಾಡಬೇಕು.

## ಶ್ರಾದ್ಧದಿನದಲ್ಲಿ ವೈಶ್ವದೇವ ನಿರ್ಣಯವು

1 ಶ್ರೌತಾಗ್ನಿಯಿಟ್ಟವರಿಗೆ, ಋಗ್ವೇದಿಗಳಿಗೆ ಶ್ರಾದ್ಧಕ್ಕೆ ಮೊದಲೇ ಬೇರೆ ಪಾಕದಿಂದ ವೈಶ್ವದೇವವು ಕರ್ತವ್ಯವಾಗಿದೆ.

2 ಸ್ಮಾರ್ತಾಗ್ನಿಯಿಟ್ಟವರಿಗೆ ನಿರಗ್ನಿಕರಿಗೂ (ಋಗ್ವೇದಿಗಳಿಗೆ) ಶ್ರಾದ್ಧವು ಮುಗಿದ ನಂತರ ಶ್ರಾದ್ಧದ ಶೇಷಾನ್ನದಿಂದ ಅಥವಾ ಬೇರೆ ಪಾಕ ಮಾಡಿದ ಅನ್ನದಿಂದ ವೈಶ್ವದೇವವು ಕರ್ತವ್ಯ.

3 ಕಾತ್ಯಾಯನರಿಗೆ ಶ್ರೌತಾಗ್ನಿಯಿಟ್ಟವರಿಗೂ. ಸ್ಮಾರ್ತಾಗ್ನಿಯಿಟ್ಟವರಿಗೂ ಶ್ರಾದ್ಧಕ್ಕೆ ಪಾಕಮಾಡಿದ ಅನ್ನದಿಂದ ಮೊದಲೇ ವೈಶ್ವದೇವವು.

4 ನಿರಗ್ನಿಕರಿಗೆ ಕೊನೆಯಲ್ಲೇ ಶ್ರಾದ್ಧಶೇಷದಿಂದಲೂ. ಬೇರೆ ಪಾಕ ಮಾಡಿದ ಅನ್ನದಿಂದಲೂ ವೈಶ್ವದೇವವು.

5 ತೈತ್ತರೀಯ ಶಾಖೆಯವರು ಸಾಗ್ನಿಕರಾದರೆ ಎಲ್ಲ ಶ್ರಾದ್ಧಗಳಲ್ಲೂ ಮೊದಲೇ ವೈಶ್ವದೇವ ಮಾಡಬೇಕು, ಪಂಚಮಹಾಯಜ್ಞಗಳು ಕೊನೆಯಲ್ಲಿ. ಬೇರೆಯವರಿಗೆ ಮೊದಲೋ. ಅಥವಾ ಶ್ರಾದ್ಧದ ಕೊನೆಯಲ್ಲೋ ಕರ್ತವ್ಯ.

ಪರಾ—ತೈತ್ತರೀಯ ಶಾಖೆಯವರಿಗೆ ವೈಶ್ವದೇವಕ್ಕಿಂತ ಪಂಚಮಹಾ ಯಜ್ಞಗಳು ಭಿನ್ನವೆಂದು ಇಲ್ಲಿ ಗಮನಿಸಬೇಕು.

6 ವೃದ್ಧಿಶ್ರಾದ್ಧ (ನಾಂದಿಶ್ರಾದ್ಧ) ಗಳನ್ನು ಎಲ್ಲ ಶಾಖೆಯವರೂ ಅನ್ನದಿಂದ ಮಾಡುವುದಾದರೆ ಮೊದಲೇ ವೈಶ್ವದೇವ ಮಾಡಬೇಕು.

7 ಆಮ, ಹಿರಣ್ಯಾದಿಗಳಿಂದ ವೃದ್ಧಿಶ್ರಾದ್ಧವನ್ನು ಮಾಡುವು ದಾದರೆ ಎಲ್ಲರಿಗೂ ಇದಕ್ಕೆ ಮೊದಲೋ, ಕೊನೆಯಲ್ಲೋ ವೈಶ್ವದೇವವು.

8 ನಿತ್ಯಶ್ರಾದ್ಧದಲ್ಲಿ ಮೊದಲೇ ಏಕಾದಶಾಹಾದಿ ಏಕೋದ್ದಿಷ್ಟ ಶ್ರಾದ್ಧಗಳಲ್ಲಿ ಸಾಗ್ನಿಕನಿಗೂ ಶ್ರಾದ್ಧಶೇಷವನ್ನು ಬ್ರಾಹ್ಮಣನಿಗೆ ಕೊಟ್ಟು ಬೇರೆ ಪಾಕದಿಂದಲೇ ವೈಶ್ವದೇವ ಮಾಡಬೇಕು,

---

# ಧರ್ಮಶಾಸ್ತ್ರ ಕರದೀಪಿಕಾ

## ಭಾಗ ೨—ಆಶೌಚ ಪ್ರಕರಣ

---

### ಆಶೌಚವೆಂದರೇನು ?

1 ಮನುಷ್ಯರಿಗೆ ತಮ್ಮ ತಮ್ಮ ಕರ್ಮಾಧಿಕಾರವಿಲ್ಲದಿರುವುದು. ಮತ್ತು ಅಸ್ಪೃಶ್ಯತೆಯೂ ಇರುವುದು. ಇದು ಯಾವ ಪಾಪದಿಂದ ಹುಟ್ಟುವುದೋ ಅದೇ ಪಾಪವು ಆಶೌಚವೆನಿಸುವುದು. ಈ ಪಾಪವು ಜನನ–ಮರಣಾದಿಗಳಿಂದ ಹುಟ್ಟುವುದು. ಉಕ್ತ ಕಾಲಗಳಲ್ಲಿ ಸ್ನಾನ, ಉಪವೀತ ಧಾರಣೆಯಿಂದ ನಿವೃತ್ತಿಯಾಗುವುದು.

2 ಆಶೌಚವು ಜಾತಾಶೌಚ, ಮೃತಾಶೌಚವೆಂದು ಎರಡು ಬಗೆ. ಇದರಲ್ಲೂ ಅಲ್ಪ, ಅಧಿಕ, ಪೂರ್ಣ. ಅಪೂರ್ಣ ಎಂದು ನಾಲ್ಕು ಬಗೆಯಿರುವುದು. ಜಾತಾಶೌಚವು ಮೂರು ಬಗೆ. ಸ್ರಾವ, ಪಾತ, ಪ್ರಸವ ಎಂದು. ಗರ್ಭಸ್ರಾವದ ನಿಮಿತ್ತವಾದರೆ ಸ್ರಾವ, ಗರ್ಭಪಾತನಿಮಿತ್ತವಾದರೆ ಪಾತ, ಮಗುವು ಸಕಾಲಕ್ಕೆ ಹುಟ್ಟಿದರೆ ಪ್ರಸವ ಎಂದರ್ಥ. ಅಲ್ಪಕಾಲವಿರುವ ಆಶೌಚವಾದರೆ ಅಲ್ಪವೆಂದೂ, ಅಧಿಕ ಕಾಲವಿರುವ ಆಶೌಚವು ಅಧಿಕವೆಂದೂ ಹೇಳಲ್ಪಡುವುದು.

3 ದಶಾಹವಿರುವ ಆಶೌಚವು ಪೂರ್ಣಾಶೌಚವೆಂದು ಹೇಳಲ್ಪಟ್ಟಿದೆ. ಇದು ಬ್ರಾಹ್ಮಣರಿಗೆ ಹತ್ತು ದಿನಗಳು, ಕ್ಷತ್ರಿಯರಿಗೆ ಹನ್ನೆರಡು ದಿನಗಳು, ವೈಶ್ಯರಿಗೆ ಹದಿನೈದು ದಿನಗಳು, ಶೂದ್ರರಿಗೆ ಒಂದು ತಿಂಗಳು ಆಶೌಚವೆಂದು ವ್ಯವಸ್ಥಿತವಾಗಿದೆ. ಇದೆಲ್ಲ ಅವರವರಿಗೆ ಪೂರ್ಣಾಶೌಚವೆಂದು ತಿಳಿಯಬೇಕು.

4 ಈ ಕಾಲದಲ್ಲಿ ಸಂಧ್ಯಾವಂದನೆಯೊಂದನ್ನು ಬಿಟ್ಟು ಉಳಿದ ಕರ್ಮ ದಾನ, ಹೋಮಾದಿ ಕರ್ಮಗಳಲ್ಲಿ ಅಧಿಕಾರವಿರದು.

5 ಈ ಪೂರ್ಣಾಶೌಚವು ಜನನ ಮರಣಗಳಲ್ಲಿ ಜ್ಞಾತಿಗಳಿಗೂ ಇರುವುದು.

6 **ವಿಶೇಷ ವಿಷಯ** —ಅನುಲೋಮ ಸಂಕರಜಾತಿಯವರಿಗೆ ತಾಯಿಯ ಜಾತಿಯನ್ನು ಅನುಸರಿಸಿ ಬರುವುದು. ಪ್ರತಿಲೋಮ ಸಂಕರ ಜಾತಿಯವರಿಗೆ ತಂದೆಯ ಜಾತಿಯನ್ನನುಸರಿಸಿ ಬರುವುದು.

## ಸ್ರಾವ, ಪಾತ, ಪ್ರಸವ ಇವುಗಳ ಲಕ್ಷಣ

1 ಗರ್ಭಾಧಾನದಿಂದ ಆರಂಭಿಸಿ ಮೊದಲಿನ ನಾಲ್ಕು ತಿಂಗಳಲ್ಲಿ ಗರ್ಭವು ಹೊರಬಂದರೆ ಸ್ರಾವವೆಂದೂ, ಐದು-ಆರನೆಯ ಮಾಸಗಳಲ್ಲಿ ಪಾತ ವೆಂದೂ ; ಏಳು-ಎಂಟು-ಒಂಬತ್ತು ಮುಂತಾದ ಮಾಸಗಳಲ್ಲಿ ಮಗು ಹುಟ್ಟಿ ದರೆ ಪ್ರಸವವೆಂದೂ ಅರಿಯಬೇಕು.

2 ಈ ಸ್ರಾವವಾದರೆ ತಾಯಿಗೆ ಮೂರುದಿನ ಆಶೌಚವು. ನಾಲ್ಕನೆ ಮಾಸದಲ್ಲಿಯಾದರೆ ನಾಲ್ಕು ದಿನಗಳು ಆಶೌಚವು, ತಂದೆಗೆ ಸ್ನಾನ ಮಾತ್ರ. ನಾಲ್ಕನೆ ತಿಂಗಳಲ್ಲಿ ಸ್ವಲ್ಪ ಕಠಿನಸ್ರಾವವಾದರೆ ತಂದೆಗೂ ಮೂರು ದಿನ ಗಳುಂಟು. ಇದೇ ತಿಂಗಳು ಮೃದುಸ್ರಾವದಾದರೆ ಎಲ್ಲ ಜ್ಞಾತಿಗಳಿಗೂ ಸ್ನಾನ ಮಾತ್ರ. ಮೊದಲಿನ ಮೂರು ತಿಂಗಳಲ್ಲಾದರೆ ಜ್ಞಾತಿಗಳಿಗೆ ಸ್ನಾನ ಮಾತ್ರ.

3 ಪಾತವಾದರೆ ಐದನೆ ಮಾಸದಲ್ಲಿ ಐದು ದಿನ ತಾಯಿಗೆ, ಆರನೇ ಮಾಸದಲ್ಲಿ ಆದರೆ ಆರು ದಿನ ಆಶೌಚವು. ತಂದೆ, ಮಕ್ಕಳು. ಜ್ಞಾತಿಗಳಿಗೆ ಮಾತ್ರ ಮೂರು ದಿನ ಆಶೌಚವು, ಗ್ರಾಮಾಂತರದಲ್ಲಿ ಆದರೆ ಪಾತನಿಮಿತ್ತ ತಂದೆ ಮೊದಲಾದವರಿಗೆ ಸ್ನಾನ ಮಾತ್ರ.

**ವಿಶೇಷ** - ಗರ್ಭನಿರ್ಗಮದಿಂದ ಬರುವ ಆಶೌಚವು ಜಾತಾಶೌಚ, ಹೊರಬಂದುದಕ್ಕೆ ಪ್ರಾಣವಿಲ್ಲದಿರುವುದರಿಂದ ಮರಣನಿಮಿತ್ತ ಸ್ನಾನ ಮಾತ್ರ ವೇದು ಮುಂದ ಹೇಳಲ್ಪಡುತ್ತದು.

## ಜಾತಾಶೌಚಸಂಗ್ರಹ

ಪುತ್ರಪೌತ್ರಾದಿ ಏಳುತಲೆಪರ್ಯಂತರ ಪುರುಷರು ಸಪಿಂಡರು, ಸಂತಾನವು ಭಿನ್ನವಾಗಿದ್ದರೂ ಯಾವನಿಂದ ಎರಡು ಅಥವಾ ಬಹುಸಂತಾನಗಳು ಒಡೆದುಬಂದಿರುವುವೋ ಆವನೇ ಕೂಟಸ್ಥ ಪುರುಷ. ಈ ಕೂಟಸ್ಥನಿಂದ ಆರಂಭಿಸಿ ಗಣಿಸಲ್ಪಟ್ಟ ನಾನಾ ಸಂತಾನದೊಳಗಿನವರು ಏಕಗೋತ್ರದೊಳಗೆ ಸೇರಿದವರಾಗಿದ್ದು ಏಳುತಲೆ ಪರ್ಯಂತರ ಇವರು ಪರಸ್ಪರ **ಸಪಿಂಡರೆಂದೂ** ಅವರೇ **ಜ್ಞಾತಿಗಳೆಂದೂ** ಹೇಳಲ್ಪಡುವರು.

ಉದಾಹರಣೆಗೆ ಈ ಮುಂದೆ ಕಾಣುವ ಚಿತ್ರವನ್ನು ನೋಡಿರಿ. ಎಂಟನೆ ತಲೆಯಿಂದ ಹದಿನಾಲ್ಕನೆ ತಲೆಯವರೆಗೆ ಏಕಗೋತ್ರದವರಾಗಿದ್ದು **ಸಮಾನೋದಕರೆಂದೂ,** ಹದಿನೈದನೇ ತಲೆಯಿಂದ ಆಚೆಗೆ ಇಪ್ಪತ್ತೊಂದನೇ ತಲೆ ಪರ್ಯಂತ ಇರುವ ಪುರುಷರು ಸಗೋತ್ರರೆಂದೂ ಹೇಳಲ್ಪಡುವರು.

ಈ ಹದಿನೈದು ಲೆಮಾರಿನ ಪುರುಷರಿಗೂ ಹಿಂದೆ ಈ ಕುಲದಲ್ಲಿ ಹುಟ್ಟಿದವರೆಂದಾಗಲಿ, ಕುಲದ ಮೂಲಪುರುಷನ ಹೆಸರಾಗಲಿ, ಎರಡರಲ್ಲಿ ಒಂದೂ ತಿಳಿಯದೆ ಮ[illegible] ರೂ ಸಗೋತ್ರರೇ ಆ[illegible]ವರು, ವಿವಾಹಿತರಾಗದ ಸ್ತ್ರೀಯರು ಮೂಲಪು[illegible] ಷನಿಂದ ಆರಂಭಿಸಿ. ತ್ರಿಪುರುಷರ ಪರ್ಯಂತರ ಸಪಿಂಡರು (ಜ್ಞಾತಿಗಳ [illegible] ಅಲ್ಲಿಂದ ಮತ್ತೆ ತ್ರಿಪುರುಷ ಪರ್ಯಂತ ಸಮಾನೋದಕರು, ಏಳು [illegible] ಯಿಂದ ಸಗೋತ್ರರು.

1 ಈ ರೀತಿ[illegible] ದ ಮವರಲ್ಲಿ ಪ್ರಸವವಾದರೆ ಹತ್ತುರಾತ್ರಿ (ಹತ್ತು ದಿನಗಳು) ಸಪಿಂಡರಿ[illegible] ಆಶೌಚವು. ಇದು ಬ್ರಾಹ್ಮಣರಿಗೆ ಹೇಳಿದ್ದು.

2 ಕ್ಷತ್ರಿಯ[illegible] ಹನ್ನೆರಡು ದಿನ, ವೈಶ್ಯರಿಗೆ ಹದಿನೈದು ದಿನಗಳು, ಶೂದ್ರರಿಗೆ ಒಂದು

3 ಸಂಕೀರ್ಣಜಾತಿ ಅನುಲೋಮವಾಗಿದ್ದರೆ ಅವರಿಗೆ ತಾಯಿಯು ಯಾವ ಜಾತಿಯವಳೋ ಅವಳನ್ನು ಅನುಸರಿಸಿ ಜಾತಾಶೌಚವು ವರ್ಣಭೇದ ದಿಂದ ೧೦, ೧೨, ೧೫, ೨೦ ಎಂದು ಕ್ರಮವಾಗಿರುವುದು.

4 ಪ್ರತಿಲೋಮವಾಗಿದ್ದವರಿಗೆ ತಂದೆಯ ಜಾತಿಯನ್ನು ಅನುಸರಿಸಿ ಜಾತಾಶೌಚವನ್ನು ಅನುಸರಿಸಬೇಕು.

5 .ಶೂದ್ರಜಾತಿಯಿಂದ ಹುಟ್ಟಿದ ಬ್ರಾಹ್ಮಣಾದಿಗಳಿಗೆ ಅಶೌಚವಿಲ್ಲ. ಸತ್ತರೆ ಬರೀ ಸ್ನಾನ ಮಾತ್ರ.

6 ಸಮಾನೋದಕರಿಗೆ ಏಳುತ್ತಲೆಯ ನಂತರದವರಿಗೆ ಮೂರುದಿನ. ಇದು ಎಲ್ಲ ಜಾತಿಯವರಿಗೂ ಸಮಾನ.

7 ಸಗೋತ್ರದವರಿಗೆ ೧೪ ತಲೆಯ ನಂತರದವರಿಗೆ ಜಾತಾಶೌಚವಿಲ್ಲ.

8 ಪ್ರಸವಿಸಿದ ಹೆಂಗಸಿಗೆ (ಹೆತ್ತ ತಾಯಿಗೆ) ಅಸ್ಪೃಶ್ಯತೆ. ಮುಟ್ಟಿ ಕೊಳ್ಳಬಾರದು. ಇದು ಹತ್ತು ದಿನಗಳು. ಶೂದ್ರಸ್ತ್ರೀಯರಿಗೆ ಹನ್ನೆರಡು ದಿನಗಳು ಅಸ್ಪೃಶ್ಯತೆ (ಅಶೌಚವು).

9 ಹೆಣ್ಣುಮಗು ಹುಟ್ಟಿದರೆ ತಾಯಿಗೆ ಒಂದು ತಿಂಗಳು ಕರ್ಮಾಧಿ ಕಾರವಿಲ್ಲದ ಅಶುಚಿತ್ವವು. ಗಂಡು ಮಗು ಹುಟ್ಟಿದರೆ ಇಪ್ಪತ್ತು ದಿನಗಳು ಈ ಅಶುಚಿತ್ವವು.

10 ತಂದೆಯ ಮನೆಯಲ್ಲಿ ಮಗಳು ಹೆತ್ತರೆ, ಮಾತಾ-ಪಿತೃ-ಭ್ರಾತೃ ಗಳಿಗೆ ಮೂರು ದಿನಗಳು. ಜ್ಞಾತಿಗಳಿಗೆ ಒಂದು ದಿನ..

11 ಬೇರೆ ಮನೆಯಲ್ಲಿ ಮಗು ಹುಟ್ಟಿದರೆ ಯಾವ ಅಶೌಚವೂ ಇರುವುದಿಲ್ಲ. ಅದರಲ್ಲೂ ಬೇರೆ ಮನೆಯಲ್ಲಿ ಪ್ರಸವಿಸುವುದಕ್ಕೆ ಹಣವನ್ನು ಕೊಟ್ಟರೆ ಮೂರು ದಿನಗಳು ಉಂಟೆಂದು ಕೆಲವರು ಹೇಳುವರು. ಕನ್ಯೆಯ ಜನನವಾದರೆ ಪಕ್ಷಿಣಿ ಅಶೌಚವೂ ಇಲ್ಲವೆಂಬುದು ಕೆಲವರ ಮತ,

# ಜಾತಾಶೌಚಪ್ರಕರಣ

1 ದೂರದಲ್ಲಿ ಪುತ್ರಜನನವಾಗಲಿ, ಜ್ಞಾತಿಗಳ ಜನನವಾಗಲಿ ಆಗಿ ಹತ್ತು ದಿನಗಳ ಮಧ್ಯೆ ಕೇಳಿಬಂದರೆ ಉಳಿವ ದಿನಗಳು ಮಾತ್ರ ಅಶೌಚವಿದ್ದು ನಂತರ ಶುದ್ಧಿಯೆಂದು ತಿಳಿಯಬೇಕು.

2 ಹತ್ತು ದಿನಗಳು ಕಳೆದ ನಂತರ ಕೇಳಿಬಂದರೆ ತಂದೆಗೆ ಸಚೇಲ ಸ್ನಾನ ಮಾತ್ರ. ಸಹೋದರರಿಗೂ ಜ್ಞಾತಿಗಳಿಗೂ ಏನೂ ಇರುವುದಿಲ್ಲ.

3 ಸಹೋದರರಿಗೆ ಮೂರು ದಿನಗಳ ಮಧ್ಯೆ ಜನನ ಕೇಳಿಬಂದಲ್ಲಿ ತ್ರಿರಾತ್ರಶೇಷವಾದ ದಿನಗಳಿದ್ದು ಶುಚಿಯಾಗುವುದು. ಮೂರು ದಿನಗಳ ನಂತರ ಕೇಳಿದಲ್ಲಿ ಏನೂ ಇಲ್ಲ.

4 ಹುಟ್ಟಿದ ಮಗುವಿಗೆ ಹೊಕ್ಕಳು ಬಳ್ಳಿಯನ್ನು ಕತ್ತರಿಸುವ ಮುಂಚೆಯೇ ಮಗುವು ಮೃತಪಟ್ಟರೆ ತಾಯಿಗೆ ಹತ್ತು ದಿನಗಳೂ ಜಾತಾ ಶೌಚ ಮತ್ತು ಅಸ್ಪೃಶ್ಯತೆಯುಂಟು. ಹೆಣ್ಣುಮಗು ಜನನವಾದರೆ ಒಂದು ತಿಂಗಳು ಪರ್ಯಂತ ಜಾತಕರ್ಮ ನಾಮಕರಣ ಬಿಟ್ಟು ಬೇರೆ ಕರ್ಮಗಳಲ್ಲಿ ಅಧಿಕಾರವಿರುವುದಿಲ್ಲ. ಗಂಡುಮಗು ಹುಟ್ಟಿದರೆ ಇಪ್ಪತ್ತು ದಿನಗಳು ಅಧಿಕಾರವಿರುವುದಿಲ್ಲ.

5 ತಂದೆ ಮುಂತಾದವರಿಗೆ ಮೂರು ದಿನ ಜಾತಾಶೌಚವುಂಟು. ಅಥವಾ ಹತ್ತುದಿನ. ಮಗುವಿನ ಮರಣನಿಮಿತ್ತ ಆಶೌಚವು ಸ್ನಾನಮಾತ್ರ ದಿಂದಲೇ ನಿವೃತ್ತವಾಗುತ್ತದೆ.

6 ಹೊಕ್ಕಳಬಳ್ಳಿ ಕತ್ತರಿಸಿದ ನಂತರ ಮಗು ಮೃತಪಟ್ಟರೆ, ಮಾತಾ ಪಿತೃಗಳಿಗೂ ಮಗುವಿನ ಸಹೋದರರಿಗೂ ಜನನದಶಾಹಶೇಷವಿರುವವರೆಗೂ ಮರಣಾಶೌಚವು.

7 ಜನನದಿನವೇ ಮಗು ಹೋದರೆ ಹತ್ತುದಿನ, ಎರಡನೇ ದಿನ ವಾದರೆ ಒಂಬತ್ತು ದಿನ. ಹೀಗೆಯೇ ಮೂರನೇ ದಿನ ಮುಂತಾದದ್ದಿದ್ದರೆ

ದಿನಸಂಖ್ಯೆಯಂತೆ ಮಾತಾಪಿತೃ ಸಹೋದರರಿಗೆ ಮೃತಾಶೌಚವಿರುವುದು. ಜ್ಞಾತಿಗಳಿಗೆ ಹತ್ತು ದಿನವೂ ಜಾತಾಶೌಚವಿರುವುದು. ಮೃತಾಶೌಚವು ಸ್ನಾನಮಾತ್ರದಿಂದಲೇ ನಿವೃತ್ತಿಯಾಗುವುದು.

8 ಮೃತವಾದ ಮಗು ಹುಟ್ಟಿದರೆ ತಾಯಿಗೆ ಹತ್ತು ದಿನವೂ ಮೃತಾಶೌಚವು ತಂದೆ-ಜ್ಞಾತಿ ಮೊದಲಾದವರಿಗೆ ಎಲ್ಲರಿಗೂ ಜಾತಾಶೌಚವೇ ಸರಿ. ಮೃತಾಶೌಚವು ಸ್ನಾನಮಾತ್ರದಿಂದ ನಿವೃತ್ತಿಯಾಗುವುದು.

9 ಜಾತಾಶೌಚದಲ್ಲಿ ಬಾಣಂತಿಯನ್ನು ಬಿಟ್ಟು ಉಳಿದವರಿಗೆ ಅಸ್ಪೃಶ್ಯತ್ವವಿಲ್ಲ, ಈದಿಗೆ ಜನನವಾದೊಡನೆ ಸ್ನಾನ ಮಾಡುವ ಮುಂಚೆ ಅಸ್ಪೃಶ್ಯತೆಯಿದೆ.

10 ಬಾಣಂತಿಯನ್ನು ಹತ್ತು ದಿನಗಳಲ್ಲಿ ಮುಟ್ಟಿಕೊಂಡರೆ, ಪತಿಯಾಗಲಿ, ಪುತ್ರನಾಗಲಿ ಯಾರೇ ಮುಟ್ಟಿಕೊಂಡರೂ ಸಚೇಲಸ್ನಾನ, ಅಗ್ನಿಸ್ಪರ್ಶ, ಘೃತಸೇವನೆಗಳಿಂದ ಶುದ್ಧಿ ಮಾಡಿಕೊಳ್ಳಬೇಕು.

11 ಬಾಣಂತಿಯನ್ನು ಮುಟ್ಟಿಕೊಂಡ ಸ್ತ್ರೀಪುರುಷರನ್ನು ಮೇಲ್ಕಂಡ ಸ್ನಾನಕ್ಕೆ ಮುಂಚೆ ಮುಟ್ಟಿದ್ದರೆ ಅಂತಹವರಿಗೆ ಸ್ನಾನ ಮಾತ್ರ.

12 ಬಾಣಂತಿಯೊಂದಿಗೆ ಜೊತೆಯಲ್ಲಿ ಮಲಗುವುದು, ಕುಳಿತುಕೊಳ್ಳುವುದು ಇತ್ಯಾದಿ ವ್ಯವಹಾರಗಳನ್ನು ಮಾಡಿದರೆ ಆ ದಿನ ಪೂರ್ತಿ ಆಶೌಚವಿರಬೇಕು. ಯಾವ ದಿನ ಈ ವ್ಯವಹಾರವನ್ನು ಮಾಡುವರೋ ಆ ದಿನ ಪೂರ್ತಿ ಆಶೌಚವು.

13 ಹುಟ್ಟಿದ ಮಗುವಿಗೆ ಆಗಲೇ ಜಾತಕರ್ಮ ಮಾಡಿದರೆ, ತಂದೆ ಮೊದಲಾದವರಿಗೆ ಎಲ್ಲರಿಗೂ ಈ ಜಾತಕರ್ಮ ಮುಗಿಯುವ ಪರ್ಯಂತರ ಈ ಸೂತಕವಿಲ್ಲ.

ಷರಾ—ಈಗಿನ ಕಾಲದಲ್ಲಿ ಆಸ್ಪತ್ರೆಯಲ್ಲಿ ಹೆಚ್ಚು ಜನ ಪ್ರಸವಕ್ಕಾಗಿ ಸೇರುವುದರಿಂದ ಅವರನ್ನು ನೋಡಲು ಹೋದವರು ಇತರ ರೋಗಿಗಳಂತೆ

ಭಾವಿಸಿ ರೂಮಿನ ಒಳಗೆ ಹೋಗುವರು. ಇದು ಅನಿವಾರ್ಯವಾದಲ್ಲಿ ಬಂದವರು ತಲೆಗೆ ಸ್ನಾನ ಮಾಡಲೇಬೇಕು. ಬ್ರಾಹ್ಮಣರು ಜನಿವಾರವನ್ನು ಹಾಕಿಕೊಳ್ಳಬೇಕು. ಮತ್ತು ಜಾತಕರ್ಮವನ್ನು ಈಗಿನವರು ಯಾರೂ ಮಾಡುವುದಿಲ್ಲ. ಹನ್ನೊಂದನೇ ದಿನವೇ ಮಾಡುವರಷ್ಟೆ. ಒಂದು ವೇಳೆ ಮಾಡಿದರೆ ಮೇಲಿನ 13ರ ನಿಯಮವೆಂದು ಅರಿಯಬೇಕು.

14 ಮಗುವು ಹುಟ್ಟಿದ್ದಕ್ಕೆ ಧನಧಾನ್ಯಗಳ ದಾನಮಾಡುವಾಗಲೂ ಸೂತಕವಿರುವುದಿಲ್ಲ. ಬೇರೆ ಕರ್ಮಗಳಲ್ಲಿ ಮಾತ್ರ ಸೂತಕವಿದ್ದೇ ಇದೆ.

15 ಅಪಕ್ವಾನ್ನವನ್ನೂ ಉಳಿದಿದ್ದದ್ದೂ ದಾನಮಾಡಬೇಕು. ಬ್ರಾಹ್ಮಣರು ಪ್ರತಿಗ್ರಹ ಮಾಡಿದರೂ ದೋಷವಿಲ್ಲ. ಪಕ್ವಾನ್ನವನ್ನು ಊಟಮಾಡಿದರೆ ಸೂತಕವಿರುವವರಿಗೆ ಎಷ್ಟು ದಿನಗಳು ಸೂತಕವಿರುವುದೋ ಅಷ್ಟು ದಿನಗಳಪರ್ಯಂತರ ಭೋಜನ ಮಾಡಿದವರಿಗೆ ಆಶೌಚವಿದೆ,

16 ಅಜ್ಞಾನದಿಂದ ಊಟಮಾಡಿದವನಿಗೆ ಶೌಚಕ್ಕೆ ಹೋಗಿಬರುವವರೆಗೂ ಸೂತಕವಿದೆ. ಲಘುಭೋಜನ ಮಾಡಿದರೆ ಮೂರುದಿನ, ಗುರು ಭೋಜನ ಮಾಡಿದವರಿಗೆ ಏಳುದಿನ ಸೂತಕ. ಕೊನೆಯಲ್ಲಿ ಸಚೇಲಸ್ನಾನ ಮಾಡಬೇಕು.

17 ಮೃತಾಶೌಚವಿರುವವನು ಜಾತಾಶೌಚಿಯನ್ನು ಮುಟ್ಟಿದರೆ ಬುದ್ಧಿಪೂರ್ವಕ ಮುಟ್ಟಿದರೆ ಸಾಂತಪನ ಕೃಚ್ಛ್ರಾಚರಣೆ, ಪ್ರಾಯಶ್ಚಿತ್ತವು. ಬುದ್ಧಿಪೂರ್ವಕವಲ್ಲದೆ ಮುಟ್ಟಿದ್ದರೆ ಒಂದು ದಿನ ಉಪವಾಸ ಮಾಡಬೇಕು. ಇತ್ಯಾದಿ ಪ್ರಾಯಶ್ಚಿತ್ತಗಳು ವಿವಿಧವಾಗಿ ಹೇಳಲ್ಪಟ್ಟಿವೆ. ಇಲ್ಲಿ ನಾವು ಬರೆದಿಲ್ಲ.

## ದ್ರಾವಿಡರ ಆಚಾರವು ಹೀಗಿದೆ

1 ಹೆಣ್ಣುಮಗು ಹುಟ್ಟಿದರೆ ಮಾತಾಪಿತೃಗಳಿಗೂ. ಸಹೋದರರಿಗೂ, ಚಿಕ್ಕಪ್ಪ-ದೊಡ್ಡಪ್ಪ, ಅವರ ಮಕ್ಕಳಿಗೂ, ಪಿತಾಮಹ ಮತ್ತು

ಅವನ ಅಣ್ಣತಮ್ಮಂದಿರು ಎಲ್ಲರಿಗೂ ಆಶೌಚವಿದೆ. ಬೇರೆ ಯಾರಿಗೂ ಇಲ್ಲ. ಚಿಕ್ಕಪ್ಪ ದೊಡ್ಡಪ್ಪ ಇವರು ಭಿನ್ನೋದರರಾದರೆ ಅವರೊಬ್ಬರಿಗೆ ಮಾತ್ರ ಆಶೌಚವು, ಆವರ ಪುತ್ರರಿಗೆ ಇಲ್ಲ.

2 ಪ್ರಸವಾಶೌಚವಿರುವವರಿಗೆ ನಾಲ್ಕುದಿನ ಪರ್ಯಂತರ ಅಸ್ಪೃಶ್ಯತ್ವ ವಿದೆಯೆಂದು ಶತಕಗ್ರಂಥಕಾರನ ಮತ, ಇಲ್ಲವೆಂಬುದು ಸ್ಮೃತಿಮುಕ್ತಾಫಲ ದಲ್ಲಿ ನಿರ್ಣಯಿಸಿದೆ.

3 ಹೆತ್ತತಾಯಿಗೆ ಹೆಣ್ಣುಮಗುವಾಗಿದ್ದರೆ ನಲವತ್ತು ದಿನಗಳೂ ಆಶೌಚವು. ಗಂಡುಮಗುವಾಗಿದ್ದರೆ ಒಂದು ತಿಂಗಳು ಆಶೌಚವು, ಇಷ್ಟು ದಿನಗಳೂ ಅಸ್ಪೃಶ್ಯತ್ವವೆಂಬುದು ಶತಕಕಾರನ ಮತ.

4 ಆದರೆ ವೈದ್ಯನಾಥೀಯ ಸ್ಮೃತಿಮುಕ್ತಾಫಲಕಾರರ ಮತದಲ್ಲಿ ಹೆತ್ತತಾಯಿಗೆ ಹತ್ತು ದಿನಗಳು ಮಾತ್ರ ಅಸ್ಪೃಶ್ಯತ್ವ, ಅನಂತರ ಅಸ್ಪೃಶ್ಯತ್ವ ವಿಲ್ಲ. ಕರ್ಮಾನಧಿಕಾರರೂಪವಾದ ಆಶೌಚವಿದೆ.

5 ತಂದೆಯ ಮನೆಯಲ್ಲಿ ಮಗಳು ಹೆತ್ತರೆ ಅವಳ ತಂದೆತಾಯಿಗಳಿಗೆ ಮೂರುದಿನ ಆಶೌಚವು. ಸಹೋದರನಿಗೆ ಒಂದು ದಿನ. ಜ್ಞಾತಿಗಳಿಗೆ ಏನೂ ಇಲ್ಲ.

6 ದಶಾಹಮಧ್ಯದಲ್ಲಿ ಶಿಶು ಮೃತವಾದರೆ ತಾಯಿತಂದೆಗಳಿಗೆ ಹತ್ತು ದಿನ ಮೃತಾಶೌಚವು. ಸಹೋದರನಿಗೆ ಜಾತಾಶೌಚವು.

7 ಹತ್ತನೇ ದಿನ ಶಿಶು ಮೃತಪಟ್ಟರೆ ಮಾತಾಪಿತೃಗಳಿಗೆ ಹತ್ತುದಿನ ಗಳ ನಂತರ ಎರಡುದಿನ ಆಶೌಚವು. ಹತ್ತನೇ ದಿನವೇ ಎಂಟನೇ ಯಾಮದಲ್ಲಿ ಅಂದರೆ ಬೆಳಗಿನ ಝಾಮು 4 ಘಂಟೆ ನಂತರ ಶಿಶು ಮೃತಪಟ್ಟರೆ ಮೂರು ದಿನಗಳು ಆಶೌಚ.

## ದಶಾಹದೊಳಗೆ ಶಿಶು ಮೃತಪಟ್ಟರೆ ಅಶೌಚ ವಿಧಾನ

1 ಐದನೆ ತಿಂಗಳು, ಆರನೇ ತಿಂಗಳಲ್ಲಿ ಗರ್ಭಪಾತವಾದರೆ ಎಲ್ಲರಿಗೂ ಕೂಡ್ಲೆ ಸ್ನಾನ ಮಾತ್ರ. ಏಳನೇ ತಿಂಗಳಿಂದ ಆಚೆಗೆ ಸತ್ತು ಹುಟ್ಟಿದರೆ, ಮತ್ತು ಪ್ರಸವವಾದ ಮೇಲೆ ಹೊಕ್ಕಳಬಳ್ಳಿ ಕೊಯ್ಯುವ ಮುಂಚೆಯೇ ಶಿಶು ಮೃತಪಟ್ಟರೆ ಸರ್ವರಿಗೂ ಸ್ನಾನ ಮಾತ್ರ.

2 ಸತ್ತು ಮಗು ಹುಟ್ಟಿದರೆ ತಾಯಿಗೆ ಹತ್ತುದಿನಗಳು ಮೃತಾಶೌಚ.

3 ಹೊಕ್ಕಳುಬಳ್ಳಿ ಕತ್ತರಿಸಿದ ನಂತರ ಮಗು ಮೃತಪಟ್ಟರೆ ಮಾತಾ ಪಿತೃಗಳಿಗೂ, ಸಹೋದರರಿಗೂ ಜನ್ಮದಶಾಹ ಮುಗಿಯುವವರೆಗೂ ಮೃತಾಶೌಚವು.

4 ಹುಟ್ಟಿದ ದಿನವೇ ಶಿಶು ಮೃತಪಟ್ಟರೆ ಹತ್ತುದಿನ. ಎರಡನೆ ದಿನ ಮುಂತಾದ ದಿನಗಳಲ್ಲಿ ಮೃತಪಟ್ಟರೆ ಒಂಬತ್ತು, ಎಂಟು, ಏಳು, ಇತ್ಯಾದಿ ದಿವಸಗಳು ಮೃತಾಶೌಚವು. ಜ್ಞಾತಿಗಳಿಗೆ ಸ್ನಾನ ಮಾತ್ರ. ಇವರಿಗೆ ಜಾತಾ ಶೌಚವನ್ನು ಮುಂಚೆಯೇ ತಿಳಿಸಿದೆ.

5 ಹೊಕ್ಕಳುಬಳ್ಳಿ ಕತ್ತರಿಸಿದ ನಂತರ ಮೃತಪಟ್ಟರೆ, ಪಿತೃ ಮೊದಲಾದವರಿಗೆ ಮರಣನಿಮಿತ್ತವಾದ ಆಶೌಚವು ಜಾತಾಶೌಚದ ದಿನಗಳಲ್ಲೇ ನಿವೃತ್ತಿಯಾಗುವುದು.

## ಈ ವಿಷಯದಲ್ಲಿ ಆಂಧ್ರಾಚಾರ

ಆಂಧ್ರರು ವ್ಯಾಘ್ರವಚನದಂತೆ ದಶಾಹಗಳ ನಡುವೆ ಶಿಶು ಮೃತಪಟ್ಟರೆ ತಾಯಿ ತಂದೆ, ಸಹೋದರರು ಮೂರು ಜನರೂ ಹತ್ತು ದಿನಗಳು ಕಳೆಯುವವರೆಗೂ ಆಶೌಚವಿರುತ್ತಾರೆ. ಹತ್ತು ದಿನಗಳು ಕಳೆದನಂತರ ಮೂರುದಿನವಿರುತ್ತಾರೆ.

ಜಾತೇಮೃತೇ ಸಪಿಂಡಾನಾಂ ಸದ್ಯಃಶುದ್ಧಿರ್ವಿಧೀಯತೇ ।
ದಶಾಹೇಽನ್ಯೈವದಂಪತ್ಯೋಃ ಸೋದರಾಣಾಂ ತಥೈವ ಚ ॥

ವ್ಯಾಘ್ರವಚನ.

# ದ್ರಾವಿಡರ ಪದ್ಧತಿ

ದಶಾಹ ಕಳೆದಮೇಲೆ ಸಹೋದರರು ಮೃತಾಶೌಚವನ್ನು ಆಚರಿಸುವರು. ದಶಾಹಗಳ ಮಧ್ಯೆ ಜಾತಾಶೌಚವನ್ನು ಆಚರಿಸುಸುವರು.

ಅವರಲ್ಲೂ ಕುಲಾಚಾರವನ್ನು ಅನುಸರಿಸಿ ಬೃಹಸ್ಪತಿ ವಚನದಂತೆ ಭಿನ್ನೋದರ ಸಹೋದರರು ಹಲ್ಲು ಹುಟ್ಟಿದ ನಂತರವೇ ಶಿಶು ಮೃತವಾದರೆ ಮೃತಾಶೌಚ ಆಚರಿಸುವರು.

ಜಾತಮಾತ್ರೇ ಮೃತೇಚಾಪಿ ದಶಾಹಾತ್ ಪಿತರೌ ಶುಚೀ ।
ಕೃತೇನಾಮ್ನಿಸನಾಭೀನಾಂ ದಶರಾತ್ರಮಘಂ ಭವೇತ್ ॥
ಭಿನ್ನೋದರಾಣಾಂ ಭ್ರಾತೃಣಾಂ ಜಾತದಂತೇ ಮೃತೇತ್ವಘಂ ।
ದಶಾಹಂ ಕೃತಚೌಳೇತು ದತ್ತಾದೀನಾಂ ವಿಧೀಯತೇ ॥

ಬೃಹಸ್ಪತಿವಚನ.

ಪರಾ—ಅದರಿಂದ ದೇಶಾಚಾರ ಕುಲಾಚಾರ ಧರ್ಮವನ್ನು ಅನುಸರಿಸಿ ಆಶೌಚವನ್ನು ಆಚರಿಸುವುದೇ ಯುಕ್ತವೆಂದು ತೋರುತ್ತದೆ.

ಹತ್ತನೆದಿನ ಬಾಲಮರಣವಾದರೆ ಆ ಒಂದು ದಿನ ಮಾತ್ರ ಆಶೌಚ. ಆ ದಿನ ಶೇಷವಾಗಿದ್ದರೆ (ಆದಿನ ಮುಗಿಯುತ್ತಿರುವಾಗ) ಬಾಲಮರಣವಾದರೆ ಎರಡುದಿನ ಆಶೌಚವೆಂದು ಚಂದ್ರಿಕಾವಚನವು.

ಜ್ಞಾತಿಗಳ ವಿಷಯದಲ್ಲಿ ಹತ್ತು ದಿನದೊಳಗೆ ಮಗುವು ಮೃತಪಟ್ಟರೆ ಶಾವಾಶೌಚವನ್ನು ಆಚರಿಸಬೇಕಾಗಿಲ್ಲ. ಆದರೆ ಜಾತಾಶೌಚವನ್ನು ಆಚರಿಸಬೇಕು. ಮೃತಾಶೌಚವು ಸ್ನಾನಮಾತ್ರದಿಂದ ನಿವೃತ್ತಿಯಾಗುವುದು.

ಗರ್ಭೇಯದಿ ವಿಪತ್ತಿಃಸ್ಯಾತ್ ದಶಾಹಂ ಸೂತಕಂ ಭವೇತ್ ।
ಮೃತಕೇ ಸ್ನಾನತಃಶುದ್ಧಿಃ ಸಪಿಂಡಾನಾಂ ವಿನಿಶ್ಚಯಃ ॥
ನಾಭಿಕೃಂತನತಃ ಪಶ್ಚಾದ್ ದಶಾಹಂ ಸೂತಕಂ ಭವೇತ್ ॥

—ಅಭಿನವ ಷಡಶೀತಿ.

ಗರ್ಭದಲ್ಲೇ ಶಿಶುವು ಮೃತಪಟ್ಟರೆ ಹತ್ತು ದಿನಗಳು ಜ್ಞಾತಿಗಳಿಗೆ ಜಾತಾಶೌಚವು. ಮರಣನಿಮಿತ್ತವಾಗಿ ಸ್ನಾನಮಾಡಿದಲ್ಲಿ ಮೃತಾಶೌಚವು ಶುದ್ಧಿಯಾಗು ವುದು, ಹೊಕ್ಕಳುಬಳ್ಳಿಯನ್ನು ಕತ್ತರಿಸಿದ ನಂತರ ಎಲ್ಲರಿಗೂ ಹತ್ತುದಿನ ಜಾತಾಶೌಚವು.

**ಹತ್ತುದಿನಗಳು ಕಳೆದನಂತರ ಜಾತಾಶೌಚವು ಹೇಗೆ? ಮತ್ತು ಅನುಪನೀತನಿಗೆ ಹೇಗೆ?**

1 ಜನನ ದಶಾಹ ಕಳೆದನಂತರ ಶಿಶು ಮೃತಪಟ್ಟರೆ ಉಪನಯನ ವಾಗುವವರೆಗೂ (ಆ ವಯಸ್ಸು ಬರುವವರೆಗೂ) ಖನನ, ದಹನ, ತ್ಯಾಗ, ಈ ಮೂರುಬಗೆಯ ಸಂಸ್ಕಾರವನ್ನು ಮೃತಶಿಶುವಿಗೆ ಮಾಡಿದರೆ, ಮಾತಾ ಪಿತೃಗಳಿಗೂ, ಶಿಶುವಿನ ಸಹೋದರರಿಗೂ ಮೂರು ದಿನ ಆಶೌಚವು.

2 ಶಿಶುವಿಗೆ ಹಲ್ಲುಹುಟ್ಟುವ ಮುಂಚೆ ಅದು ಮೃತಪಟ್ಟರೆ, ಖನನ ಮಾಡಿದರೆ ಜ್ಞಾತಿಗಳಿಗೆ ಸ್ನಾನ ಮಾತ್ರ,

3 ಹಲ್ಲುಹುಟ್ಟಿದನಂತರ ಚೌಲಕ್ಕೆ ಮುಂಚೆ ಶಿಶು ಹೋದರೆ ಒಂದು ದಿನ. ಚೌಲವಾದ ನಂತರ ಉಪನಯನಕ್ಕೆ ಮುಂಚೆಯಾದರೆ ಮೂರು ದಿನ,

4 ದಹನ ಮಾಡಿದಲ್ಲಿ ಹಲ್ಲುಹುಟ್ಟುವ ಮುಂಚೆಯಾದರೆ ಒಂದು ದಿನ. ಹಲ್ಲುಹುಟ್ಟಿದ ಮೇಲೆಯಾದರೆ ಮೂರುದಿನ.

ಷರಾ ದಂತ ಹುಟ್ಟುವುದೆಂದರೆ ಅದು ಹುಟ್ಟುವ ಕಾಲವೆಂದೇ ಅಭಿಪ್ರಾಯ, ದಂತಗಳು ಹುಟ್ಟದಿದ್ದರೂ ಅದರ ಕಾಲ ಬಂದರೆ ಸಾಕು. ತತ್ಕಾಲಕ್ಕೆ ಹೇಳಿದ ಆಶೌಚವಿದ್ದೇ ಇರುವುದು.

5 ಉಪನಯನವಾಗುವ ಮುಂಚೆ ಬಾಲಮರಣವಾದರೆ, ತಂದೆ ತಾಯಿ, ಸಹೋದರ, ಜ್ಞಾತಿಗಳು ಇವರಿಗೆ ಅತಿಕ್ರಾಂತ ಆಶೌಚವು ಇರುವುದಿಲ್ಲ.

## ಶಿಶುವಿನ ತ್ಯಾಗ, ಖನನ, ದಹನಗಳ ಅರ್ಥ ಮತ್ತು ಕಾಲ

ತ್ಯಾಗವೆಂದರೆ – ಅರಣ್ಯದಲ್ಲಿ ಹಳ್ಳ ಬಿದ್ದಿರುವ ಭೂಮಿಯಲ್ಲಿ ಮೃತ ಶಿಶುವನ್ನು ಕಾಷ್ಟದಂತೆ ಇಟ್ಟು ಮಣ್ಣು ಕಲ್ಲುಗಳಿಂದ ಮುಚ್ಚುವುದು.

ಖನನವೆಂದರೆ – ಭೂಮಿಯಲ್ಲಿ ಹಳ್ಳತೋಡಿ ಅದರೊಳಗೆ ಇಟ್ಟು ಮುಚ್ಚುವುದು.

6 ಈ ಬಗೆಯ ತ್ಯಾಗಸಂಸ್ಕಾರವನ್ನು ಹಲ್ಲುಹುಟ್ಟಿದ ಮಗುವಿಗೆ ಮಾಡತಕ್ಕದ್ದು, ಜಾತದಂತಾಮೃತಂಕೃತ್ವಾ ಎಂದು ವಿಧಿಯಿದೆ.

7 ದಹನಸಂಸ್ಕಾರ ಮಾತ್ರಾ ನಾಮಕರಣದಿಂದ ಆರಂಭಿಸಿ ಚೌಲ ಪರ್ಯಂತ ವಿಕಲ್ಪ ಆದರೆ ಮಾಡಿದರೂ, ಬಿಟ್ಟರೂ ಸರಿ. ಕಡ್ಡಾಯವಿಲ್ಲ.

ದಹನವಿಷಯದಲ್ಲಿ ಒಂದು ನಿರ್ಣಯವು. ಮೂರನೆ ವರ್ಷದ ಮಗು ಮೃತಪಟ್ಟರೆ ದಹನವನ್ನೇ ಮಾಡಬೇಕು. ಖನನ ಮಾಡಬಾರದು. 3ನೇ ವರ್ಷವು ಬರುವ ಮುಂಚೆ ದಹನ ಮಾಡಬಾರದೆಂದು ಮನುಸ್ಮೃತೀಕಾರರು ಹೇಳಿರುವರು. 3ನೇ ವರ್ಷವೇ ಚೌಲದ ಕಾಲವಾದ್ದರಿಂದ ಅದರ ಕಾಲ ಚೌಲಕರ್ಮ ಈ ಎರಡೂ ಸಹ ದಹನಮಾಡಬೇಕೆಂಬುದಕ್ಕೆ ನಿಮಿತ್ತವಾಗಿದೆ. ಆಗ ಮೂರು ದಿನಗಳು ಆಶೌಚವು. ಇದು ಎಲ್ಲ ವರ್ಣದವರಿಗೂ ಸಮಾನ.

8 ಚೌಲವಾದ ನಂತರ ಮೃತಬಾಲಕನಿಗೆ ದಹನವನ್ನೇ ಮಾಡಬೇಕು.

9 ಮೂರು ವರ್ಷಕ್ಕೆ ಮುಂಚೆ ಮೃತಬಾಲಕನಿಗೆ ದಹನಸಂಸ್ಕಾರ, ಅಸ್ಥಿಸಂಚಯನ ತಿಲೋದಕ ದಾನಗಳು ನಿಷಿದ್ಧವಾಗಿವೆ.

ನಾಸ್ಯಕಾರ್ಯೋಽಗ್ನಿಸಂಸ್ಕಾರೋ ನಾಪಿಕಾರ್ಯೋದಕಕ್ರಿಯಾ ಎಂದು ಮನುಧರ್ಮಶಾಸ್ತ್ರದಲ್ಲಿ ನಿಷೇಧವಿದೆ. (ಮೂರು ವರ್ಷಕ್ಕೆ ಮುಂಚೆ ಎಂದು ತಿಳಿಯಬೇಕು.)

10 ಹೆಣ್ಣುಮಗುವಾಗಿದ್ದು ಮೃತಪಟ್ಟರೆ ಹಲ್ಲು ಹುಟ್ಟದಿರುವಾಗ ಒಂದೇ ದಿನ ಆಶೌಚ,

## ಕನ್ಯಾಮರಣಾಶೌಚ

1 ವಿವಾಹವಾಗದ ಕನ್ಯೆಯು ಹಲ್ಲುಹುಟ್ಟುವ ಮುಂಚೆಯೋ ಮೃತವಾದರೆ ಮಾತಾಪಿತೃಗಳಿಗೆ, ಸಹೋದರರಿಗೂ ಆಶೌಚವು ಏಕದಿನವೆಂದು ಕೆಲವರು ಮೂರು ದಿನವೆಂದೂ ಹೇಳುತ್ತಾರೆ.

2 ಹಲ್ಲುಹುಟ್ಟಿದನಂತರ ವಿವಾಹವಾಗುವವರೆಗೂ (ಆ ವಯಸ್ಸು ಬರುವವರೆಗೂ ಮಾತಾಪಿತೃಗಳು ಮತ್ತು ಸಹೋದರರಿಗೆ ಮೂರು ದಿನ ಆಶೌಚವು.

3 ಜ್ಞಾತಿಗಳಿಗೆ (ಚೌಲಕ್ಕೆ ಮೊದಲು ಅಥವಾ ಮೂರನೇವರ್ಷಕ್ಕೆ ಮೊದಲು ಕೂಡಲೇ ಶುದ್ಧಿಮಾಡಿಕೊಳ್ಳುವುದು. ಚೌಲವಾದ ನಂತರ, ಮೂರನೇ ವರ್ಷದ ನಂತರ ವಾಗ್ದಾನ ಮಾಡುವ ಪರ್ಯಂತರ ಜ್ಞಾತಿಗಳಿಗೆ ಏಳುದಿನ ಆಶೌಚವು.

4 ವಾಗ್ದಾನಾನಂತರ ವಿವಾಹಪರ್ಯಂತರ ಪಿತೃಕುಲ, ಭರ್ತೃಕುಲ ಈ ಎರಡು ಕುಲಗಳಿಗೂ ಮೂರುದಿನ ಆಶೌಚವು.

5 ವಿವಾಹವಾಗುವ ಮುಂಚೆಯೋ ಬಾಲಿಕೆಯು ರಜಸ್ವಲೆಯಾದರೆ ಈಕೆಯು ಮೃತಪಟ್ಟರೆ ಮಾತಾಪಿತೃ, ಭ್ರಾತೃ ಜ್ಞಾತಿಗಳು ಈ ಎಲ್ಲರಿಗೂ ಹತ್ತುದಿನ ಆಶೌಚವು.

ಕನ್ಯಾವಿಷಯದಲ್ಲಿ ಉದಕದಾನವು ನಿಯತವಲ್ಲ.

6 ಮೂರನೇ ವರ್ಷದಿಂದ ಆರಂಭಿಸಿ ವಾಗ್ದಾನ ಮಾಡುವ ಪರ್ಯಂತರ ಅಷ್ಟರೊಳಗೆ ಕನ್ಯೆಯು ಮೃತಪಟ್ಟರೆ ಜ್ಞಾತಿಗಳಿಗೆ ಕೂಡಲೇ ಶುದ್ಧಿಯು. ವಾಗ್ದಾನ ಮಾಡಿದ್ದರೆ ಮೂರು ದಿನ.

ಷರಾ - ಕನ್ಯೆಗೆ ವಾಗ್ದಾನಮಾಡಿ ಎಷ್ಟೋ ವರ್ಷಗಳು ಕಳೆದ ನಂತರ ವಿವಾಹ ಮಾಡುವ ಪದ್ಧತಿಯು ಹಿಂದೆ ಇತ್ತೆಂದು ಗೊತ್ತಾಗಿದೆ. ಈಗಿನ ಕಾಲದಲ್ಲಿ ಪ್ರೌಢವಿವಾಹವು ಜಾರಿಯಲ್ಲಿರುವುದರಿಂದ ವಾಗ್ದಾನಶಾಸ್ತ್ರವು ವಿವಾಹದ ದಿನವೇ ಅಥವಾ ಅದರ ಹಿಂದಿನ ದಿನವೇ ಆಗುವುದು, ಆಗಲೂ

ವಾಗ್ದಾನವಾಗಿ ವಿವಾಹವಾಗದೆ ದೈವಾತ್ ಮೃತಪಟ್ಟರೆ ಈ ಪೌಢೆಯೂ ಮೃತಪಟ್ಟ ನಿಮಿತ್ತ ಹತ್ತುದಿನ ಆಶೌಚವು ಇಪ್ಪದು. ರಜಸ್ವಲೆಯಾಗಿರುವುದೇ ಮುಖ್ಯ ನಿಮಿತ್ತ. ಇದಕ್ಕೆ ಪ್ರಮಾಣ—

ಪಿತೃವೇಶ್ಮನಿಯಾನಾರೀ ರಜಃಪಶ್ಯತ್ಯಸಂಸ್ಕೃತಾ ।
ತಸ್ಯಾಂಮೃತಾಯಾಂನಾಶೌಚಂ ಕದಾಚಿದಪಿ ನಶ್ಯತಿ ॥

ತಂದೆಯ ಮನೆಯಲ್ಲಿ ಯಾವ ಹೆಂಗಸು ವಿವಾಹಸಂಸ್ಕಾರವಿಲ್ಲದೆ ರಜಸ್ವಲೆಯಾಗಿ ಮೃತಪಟ್ಟರೆ ಆ ನಿಮಿತ್ತವಾದ ಆಶೌಚ ಎಂದಿಗೂ ಹೋಗುವುದಿಲ್ಲ. ಕದಾಚಿದಪಿ ನಶ್ಯತಿ ಎಂಬುದಕ್ಕೆ ಹತ್ತು ದಿನಗಳಿಗೆ ಮುಂಚೆ ಆಶೌಚ ತೀರುವುದಿಲ್ಲವೆಂದರ್ಥ.

ಸಮಾನೋದಕರಲ್ಲಿ ಉಪನಯನವಾಗದವನು ಮೃತಪಟ್ಟರೆ ಅವರಿಗೆ ಸ್ನಾನ ಮಾತ್ರ. ಅತಿಕ್ರಾಂತಾಶೌಚವು ಮಾತಾಪಿತೃಾದಿಗಳಿಗೂ ಇಲ್ಲ,

ದ್ರಾವಿಡರಿಗೆ ಮಾತ್ರ ಹುಟ್ಟಿ ಹತ್ತುದಿನಗಳ ನಂತರ ಶಿಶು ಮೃತಪಟ್ಟರೆ ಮಾತಾಪಿತೃಗಳಿಗೂ, ಸಹೋದರರಿಗೂ ದಶರಾತ್ರ ಆಶೌಚವು. ಭಿನ್ನೋದರರಿಗೆ (ಸಹೋದರರಿಗೆ) ಹಲ್ಲು ಹುಟ್ಟಿದ ನಂತರ ದಶರಾತ್ರವೆಂದು ಹೇಳುತ್ತಾರೆ. ಬೇರೆಲ್ಲವೂ ಸಮಾನ,

## ಉಪನೀತ, ಮತ್ತು ವಿವಾಹವಾದ ಸ್ತ್ರೀಮರಣವಾದರ ಆಶೌಚ

ಸ್ತ್ರೀಣಾಮುಪನಯಸ್ಥಾನೆ ವಿವಾಹಃ ಪರಿಕೀರ್ತಿತಃ ಎಂದು ವಚನವು. ಉಪನಯನವಾದ ಕುಮಾರನೂ, ವಿವಾಹಿತ ಸ್ತ್ರೀಯೂ ಮೃತಪಟ್ಟರೆ ಹತ್ತು ದಿನ ಎಲ್ಲಾ ಜ್ಞಾತಿಗಳಿಗೂ (ಸಪಿಂಡರಿಗೂ) ಮೃತಾಶೌಚವಿದೆ.

ಸಮಾನೋದರರಿಗೆ ಮೂರು ದಿನ, ಸಗೋತ್ರದವರಿಗೆ ಸ್ನಾನಮಾತ್ರ. ಹಾಗೂ ಉಪನಯನವಾಗದಿದ್ದರೆ ಆತ ಮೃತಪಟ್ಟರೆ ಕೇವಲ ಸ್ನಾನಮಾತ್ರ. ಬಾಲ–ದೇಶಾಂತರಿತ–ಪ್ರವ್ರಜಿತ ಸಪಿಂಡಾನಾಂ ಸದ್ಯಃಶೌಚಮ್ ಎಂದು ಗೌತಮವಚನವಿದೆ, ಇಲ್ಲಿ ಅಸಪಿಂಡ ಎಂದರೆ ಸಮಾನೋದಕ.

ಹರಾ ಮೂಲಪುರುಷನಿಂದ ಏಳುತಲೆಮಾರಿನವರೆಗೆ ಸಪಿಂಡರೆಂದೂ ಎಂಟನೆ ತಲೆಯಿಂದ ಹದಿನಾಲ್ಕನೆ ತಲೆಮಾರಿನವರೆಗೆ ಸಮಾನೋದಕರೆಂದೂ ಹದಿನೈದರಿಂದ ಇಪ್ಪತ್ತೊಂದರವರೆಗೆ ಸಗೋತ್ರರೆಂದೂ ಇಲ್ಲಿ ಅರ್ಥ ಮಾಡಿಕೊಳ್ಳಬೇಕು.

## ಸಪಿಂಡರಲ್ಲದ ಬಂಧುಗಳು ಮೃತಪಟ್ಟರೆ ಆಶೌಚವಿಧಿ

ಸಪಿಂಡರಲ್ಲದವರು ಸೋದರಮಾವ ಮೊದಲಾದವರು.

## ಉಪನೀತಾದಿ ಮೃತಾಶೌಚವಿಧಾನ

1 ಉಪನಯನವಾದವನು ಮೃತಪಟ್ಟರೆ ಜ್ಞಾತಿಗಳಿಗೆ (ದಶರಾತ್ರ ಜ್ಞಾತಿಗಳಿಗೆ) ಹತ್ತುದಿನವೂ ಪೂರ್ಣಾಶೌಚವು.

2 ಸಮಾನೋದಕರಿಗೆ (ಏಳು ತಲೆ ಮೇಲ್ಪಟ್ಟವರಿಗೆ) ಮೂರುದಿನ.

3 ಸಗೋತ್ರದವರಿಗೆ (ಹದಿನೈದು ತಲೆ ಮೇಲ್ಪಟ್ಟವರಿಗೆ) ಕೇವಲ ಸ್ನಾನ ಮಾತ್ರ.

4 ವಟುವಿನ ಜನ್ಮ, ಹೆಸರು ಇವುಗಳನ್ನು ತಿಳಿದ ಸಗೋತ್ರರಿಗೂ ಸ್ನಾನ ಮಾತ್ರ.

5 ಉಪನಯನವಾಗದೆ ಇದ್ದ ಸಮಾನೋದಕನು ಮೃತಪಟ್ಟರೆ ಸ್ನಾನ ಮಾತ್ರ,

6 ಅವಿವಾಹಿತಳಾದ ಕನ್ಯೆಯು ಮೃತಪಟ್ಟರೆ ಸ್ನಾನಮಾತ್ರ.

7 ಅವಿವಾಹಿತ ಸಮಾನೋದಕ ಕನ್ಯೆಯು ಮೃತಪಟ್ಟರೆ ಸ್ನಾನ ಮಾತ್ರ.

8 ವಿವಾಹಿತಳಾದ ಸ್ತ್ರೀಯು ಮೃತಪಟ್ಟರೆ ಪತಿಯ ಸಪಿಂಡ-ಸಮಾನೋದಕ-ಸಗೋತ್ರ ಈ ಮೂರು ಜನರಿಗೂ ಮೇಲ್ಕಂಡಂತೆ ಅಶೌಚ ಹತ್ತುದಿನಗಳು. ಆದರೆ ತಂದೆಯ ಜ್ಞಾತಿಗಳಿಗ ಆಶೌಚವಿಲ್ಲ,

9 ಮಾತಾಮಹಿ (ಅಜ್ಜಿ ತಾಯಿಯ ತಾಯಿ), ಮಾತಾಮಹ (ತಾಯಿಯ ತಂದೆ), ಮಾತೃಷ್ವಸೃ (ತಾಯಿಯ ಸಹೋದರಿಯರು) ಮಾತುಲ (ಸೋದರಮಾವ), ಮಾತುಲಾನೀ (ಸೋದರಮಾವನ ಹೆಂಡತಿ ಅತ್ತೆ), ದೌಹಿತ್ರ (ಮಗಳ ಮಗ), ಭಾಗಿನೇಯ (ಅಕ್ಕತಂಗಿಯರ ಮಕ್ಕಳು) ಹತ್ತಿರದಲ್ಲಿ ಮೃತಪಟ್ಟರೆ ಮೂರು ದಿನ ಆಶೌಚ, ದೂರದಲ್ಲಾದರೆ ಪಕ್ಷಿಣಿ.

10 ಶ್ವಶುರ (ಹೆಣ್ಣುಕೊಟ್ಟ ಮಾವ), ಶ್ವಶ್ರೂ (ಅತ್ತೆ) ಇವರು ಹೋದರೆ ಹತ್ತಿರದಲ್ಲಿ, ಹೆಂಡತಿ ಬದುಕಿರುವ ಅಳಿಯನಿಗೆ ಮೂರು ದಿನ. ದೂರವಾದರೆ ಪಕ್ಷಿಣಿ. ಹೆಂಡತಿ ಸತ್ತ ಜಾಮಾತನಿಗೆ ಒಂದುದಿನ ಆಶೌಚ,

11 ಹೆಂಡತಿಯ ಸಂತತಿಯೂ ಇದ್ದರೆ ಮೂರು ದಿನ.

12 ಆಚಾರ್ಯ, ಆಚಾರ್ಯನ ಪುತ್ರ, ಪತ್ನಿ ಇವರು ಹೋದಲ್ಲಿ ಹತ್ತಿರವಾದರೆ ಮೂರುದಿನ, ದೂರವಾದರೆ ಪಕ್ಷಿಣಿ.

13 ಹೀಗೆಯೇ ಶಿಷ್ಯನು ಮೃತಪಟ್ಟರೆ ಇದೇರೀತಿ ಆಚಾರ್ಯ ಮೊದಲಾದವರಿಗೆ ಮೂರು ದಿನ.

ಷರಾ—ಆಚಾರ್ಯ ಎಂದರೆ ಶಿಷ್ಯನಿಗೆ ಉಪನಯನ ಮಾಡಿ ವೇದ ವನ್ನು, ಕಲ್ಪ, ಸೂತ್ರ, ಉಪನಿಷತ್ತುಗಳನ್ನು ಹೇಳಿಕೊಟ್ಟವನಿಗೆ ಆಚಾರ್ಯ ಎಂದು ಹೆಸರು. ಒಂದೇ ಶಾಖೆಯನ್ನು ಅಧ್ಯಯನ ಮಾಡಿದವನು ಶ್ರೋತ್ರಿಯ ಎಂದೂ, ಈತನು ಮೈತ್ರಿಯಿಂದ ಅಥವಾ ಸ್ವಗೃಹದಲ್ಲಿ ವಾಸ ಮಾಡಿದ್ದರಿಂದಲೂ, ಹಣಕಾಸುಗಳನ್ನು ಕೊಡುವುದೇ ಮೊದಲಾದವುಗಳಿಂದ ಉಪಕೃತನಾಗಿದ್ದರೆ ಉಪಸಂಪನ್ನ ಎಂದೂ ಹೇಳುವರು. ಈ ಬಗೆಯ ಶ್ರೋತ್ರಿಯನು ಹೋದರೂ ಮೂರುದಿನ ಆಶೌಚವು,

14 ದೌಹಿತ್ರ ಮತ್ತು ಶಿಷ್ಯ ಇವರಿಗೆ ತ್ರಿರಾತ್ರವಿಧಾನವು ತಮ್ಮ ತಾತ ಮತ್ತು ಆಚಾರ್ಯರು ಮೃತಪಟ್ಟು ಇನ್ನೊಬ್ಬರಿಂದ ದಹನಾದಿ ಸಂಸ್ಕಾರವಾಗಿದ್ದರೆ ಮಾತ್ರ. ದೌಹಿತ್ರ ಅಥವಾ ಶಿಷ್ಯನೇ ಸಂಸ್ಕಾರಮಾಡಿದರೆ ಆಗ ಹತ್ತುದಿನ ಆಶೌಚವಿದೆ.

## ಆಚಾರ್ಯ-ಗುರು-ಶಿಷ್ಯಾದಿಗಳ ಲಕ್ಷಣ

**ಆಚಾರ್ಯ** — ಉಪನಯನ ಮಾಡಿ ವೇದಾಧ್ಯಯನ ಮಾಡಿಸಿದವನೂ. ಜಪಿಸುವ ಮಂತ್ರೋಪದೇಶ ಮಾಡಿದವನೂ ಆಚಾರ್ಯ.

**ಶ್ರೋತ್ರಿಯ** — ಏಕಶಾಖೆಯನ್ನು ಅಧ್ಯಯನ ಮಾಡಿದವನು.

ಆಚಾರ್ಯನಿಗೆ ಸಂಬಂಧಿಯಾಗಿ ಕಲಿತವನು, ಭಿನ್ನಕಾಲದಲ್ಲಿ ಅಧ್ಯಯನ ಮಾಡಿದವನೂ ಸಮಾನ ಗುರುವುಳ್ಳವ ಅಂದರೆ ಇಬ್ಬರಿಗೂ ಒಬ್ಬನೇ ಗುರುವಾಗಿದ್ದರೆ **ಸತೀರ್ಥ್ಯ.** ಒಬ್ಬ ಆಚಾರ್ಯನಿಂದ ಉಪನೀತನಾಗಿದ್ದವನು **ಸಬ್ರಹ್ಮಚಾರಿ.** ಅಥವಾ ಇನ್ನೊಬ್ಬನ ಜೊತೆಯ ವೇದಭಾಗವನ್ನು ಅಧ್ಯಯನ ಮಾಡಿದವನು.

**ಗುರು**—ನಿಷೇಕಾದಿ ಸಂಸ್ಕಾರಗಳನ್ನು ಮಾಡಿಸಿದ ಪುರೋಹಿತ ಗುರು. ಅನ್ನವನ್ನು ಕೊಟ್ಟವನೂ ಗುರು. ಅಲ್ಪವಾಗಲಿ, ಬಹಳವಾಗಲಿ ಉಪಕಾರ ಮಾಡಿದವನೂ ಗುರು. ವೇದಶಾಸ್ತ್ರಾಧ್ಯಯನ ಮಾಡಿದ್ದಕ್ಕೆ ಉಪಕಾರ ಮಾಡವನೂ ಗುರು. ಕೇವಲ ಷಡಂಗಾಧ್ಯಯನ ಮಾಡಿದವನು ಶಿಷ್ಯ,

ಉಪಾಧ್ಯಾಯ ವೇದದ ಒಂದು ಭಾಗವನ್ನೋ, ವೇದಾಂಗಗಳನ್ನೋ ಅಧ್ಯಾಪನ ಮಾಡಿದವನು. ಜೀವನ ವೃತ್ತಿಗಾಗಿ ಕಲಿಸುವವನೂ ಉಪಾಧ್ಯಾಯ. ಹೀಗೆ ಮನುವಚನವಿದೆ.

ಷರಾ - ಮೇಲ್ಕಂಡ ಗುರು, ಶ್ರೋತ್ರಿಯ, ಉಪಾಧ್ಯಾಯಾದಿಗಳು ಮೃತಪಟ್ಟರೆ ತ್ರಿರಾತ್ರ, ಪಕ್ಷಿಣಿ. ಏಕರಾತ್ರ ಇತ್ಯಾದಿ ಮತಭೇದಗಳಿವೆ. ಇವೆಲ್ಲವೂ ಯುಗಾಂತರಕ್ಕೆ ಸಂಬಂಧಪಟ್ಟಿವೆಯೆಂದು ಅಭಿನವ ಷಡಶೀತಿಕಾರ ಹೇಳಿರುವನು. (81ನೇ ಪುಟ). ಆಚರಣೆಯಲ್ಲಿ ಕೇವಲ ಸ್ನಾನಮಾತ್ರ ಇದೆ. ಅದರಿಂದ ನಾವು ವಿಶೇಷವಾಗಿ ಬರೆದಿಲ್ಲ.

15 ವಿವಾಹವಾದ ನಂತರ ತಂದೆಯ ಮನೆಯಲ್ಲಿ ಪುತ್ರಿಯು ಮೃತಪಟ್ಟರೆ ಮಾತಾಪಿತೃಗಳಿಗೂ, ಸಹೋದರರಿಗೂ, ಮದುವೆಯಾಗದ ಸಹೋದರರಿಗೂ ಮೂರು ದಿನ ಆಶೌಚವಿದೆ.

16 ದ್ರಾವಿಡರಿಗೆ — ಮಾತಾಪಿತೃಗಳಿಗೆ ಮೂರುದಿನ, ಸಹೋದರರಿಗೆ, ಅವಿವಾಹಿತ ಸಹೋದರಿಯರಿಗೆ ಏಕದಿನ ಅಶೌಚ, ವಿಭಕ್ತರಿಗೆ ಏನೂ ಇಲ್ಲ,

17 ಮಾತಾಪಿತೃಗಳೂ ಸಹೋದರರೂ ವಿಭಕ್ತರಾಗಿದ್ದು ಬೇರೆ ಮನೆಯಲ್ಲಿ ವಾಸವಾಗಿದ್ದರೆ ಪುತ್ರಿಯು ಪಿತೃಗೃಹದಲ್ಲಿ ಮೃತಪಟ್ಟರೆ, ತಂದೆ ತಾಯಿಗಳಿಗೆ ಮಾತ್ರ ಮೂರು ದಿನ. ಸಹೋದರರ ಗೃಹದಲ್ಲಿ ಆದರೆ ಸಹೋದರರಿಗೆ ಮಾತ್ರ. ಜ್ಞಾತಿಗಳ ಮನೆಯಲ್ಲಿ ಸತ್ತರೆ ಏಕದಿನ ಮಾತ್ರ. ಬೇರೆ ಸ್ಥಳಗಳಲ್ಲಿ ಸತ್ತರೆ ತಂದೆತಾಯಿಗಳಿಗೂ ಸಹೋದರರಿಗೂ ಪಕ್ಷಿಣಿ, ಜ್ಞಾತಿಗಳಿಗೆ ಏನೂ ಇಲ್ಲ.

18 ಒಂದೇ ಗ್ರಾಮದಲ್ಲಿ ಪುತ್ರಿಯು ಮೃತಪಟ್ಟರೆ ತನ್ನ ಗೃಹದಲ್ಲಿ ಸತ್ತರೆ ಹೇಗೋ ಹಾಗೆ ಮೂರುದಿನ ಆಶೌಚವು, ಗ್ರಾಮಾಂತರದಲ್ಲಿ ಆದರೆ ಪಕ್ಷಿಣಿ ಎಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ.

ಪರಾ – ಶಿಷ್ಟಾಚಾರವಿದ್ದಂತೆ ಆಚರಿಸಬೇಕು.

19 ಸ್ವಗೃಹ ಅಥವಾ ಪರಗೃಹದಲ್ಲಿ ಮಾತಾಪಿತೃಗಳು ಮೃತಪಟ್ಟರೆ ಪುತ್ರಿಗೆ ಮೂರುದಿನದ ಆಶೌಚವು.

20 ಅಕ್ಕತಂಗಿಯರ ಮನೆಯಲ್ಲಿ ಸಹೋದರ ಸತ್ತರೆ ಸಹೋದರಿಯರಿಗೆ ಮೂರು ದಿನ ಆಶೌಚವು. ಪರರ ಮನೆಯಲ್ಲಿ ಹೋದರೆ ಪಕ್ಷಿಣಿ, ಬೇರೆ ಗ್ರಾಮದಲ್ಲಾದರೆ ಒಂದು ದಿನ ಮಾತ್ರ.

21 ಅಕ್ಕತಂಗಿಯರ ಗಂಡಂದಿರಿಗೆ ಅಂದರೆ ಭಾವನಿಗೆ ತನ್ನ ಗೃಹದಲ್ಲಾಗಲಿ ಪರಗೃಹದಲ್ಲಾಗಲಿ ಭಾವಮೈದುನನು ಹೋದರೆ ಒಂದೇ ದಿನ ಆಶೌಚ.

22 ಮೈದುನನ ಮಗ ಹೋದರೂ ಒಂದೇ ದಿನ, ಆತ ಶ್ರೋತ್ರಿಯನಾಗಿದ್ದು ಸ್ವಗೃಹದಲ್ಲಿ ಮೃತಪಟ್ಟರೆ ಮೂರುದಿನ ಆಶೌಚವು. ಗ್ರಾಮಾಂತರದಲ್ಲಾದರೆ ಸ್ನಾನ ಮಾತ್ರ.

23 ಉಪನಯನವಾಗದ ಸಹೋದರನು ಮೃತಪಟ್ಟರೆ ಹತ್ತಿರದಲ್ಲಿ ಸಹೋದರಿಯರಿಗೆ ಸ್ನಾನ ಮಾತ್ರ. ಹೀಗೆಯೇ ಸಹೋದರನ ಪುತ್ರನು ಸಹೋದರರೂ ಸ್ನಾನ ಮಾತ್ರ.

24 ಸಹೋದರನ ಗೃಹದಲ್ಲಿ ಸಹೋದರಿಯು ಹೋದರೆ ಸಹೋದರನಿಗೆ ಮೂರುದಿನ. ಅನ್ಯರ ಗೃಹದಲ್ಲಿ ಸತ್ತರೆ ಪಕ್ಷಿಣಿ, ಗ್ರಾಮಾಂತರ ದಲ್ಲಾದರೆ ಒಂದುದಿನ.

25 ಭಿನ್ನಗೋತ್ರದಲ್ಲಿ ದಾನಮಾಡಿದ್ದ ದತ್ತುಪುತ್ರನು ಹೋದರೆ ಓಂದಿನ ತಂದೆಗೂ ಪಾಲಕ ತಂದೆಗೂ ಅವರ ಮಕ್ಕಳಿಗೂ ಮೂರು ದಿನ. ದೂರದಲ್ಲಾದರೆ ಒಂದು ದಿನ. ಎರಡು ಕುಲದ ಜ್ಞಾತಿಗಳಿಗೆ ಹತ್ತಿರ ದಲ್ಲಾದರ ಒಂದು ದಿನ, ದೂರದಲ್ಲಾದರೆ ಸ್ನಾನ ಮಾತ್ರ.

26 ಉಪನಯನವಾಗದ ದತ್ತಪುತ್ರನು ಹೋದರೆ ಹತ್ತಿರದಲ್ಲಾದರೂ ಸ್ನಾನ ಮಾತ್ರ. ಜನಕ-ಪಾಲಕ ಪಿತೃಗಳಿಗೆ ಮತ್ತು ಇವರ ಮಕ್ಕಳಿಗೆ ಮೂರು ದಿನ.

27 ದತ್ತನಿಗೆ ಪುತ್ರನು ಜನಿಸಿದರೆ ಅಥವಾ ಮೃತನಾದರೆ ಉಪನಯನಕ್ಕೆ ಮೊದಲೂ ಜನಕತಂದೆಯ ವರ್ಗದವರಿಗೆ ಸ್ನಾನ ಮಾತ್ರ.

28 ದತ್ತನಿಗೆ ಪುತ್ರರು ಹುಟ್ಟಿದರೆ ಅಥವಾ ಸತ್ತರೆ ಉಪನಯನ ವಾದ ಮೇಲೂ ಜನಕವರ್ಗಕ್ಕೆ ಸ್ನಾನಮಾತ್ರ.

29 ದತ್ತನಿಗೆ ಜನಕಪಿತನು ಮೃತನಾದರೆ ಮೂರುದಿನ ಆಶೌಚವು. ಪ್ರತಿಗ್ರಹ ಮಾಡಿದ ಸಾಕುತಂದೆಯು ಹೋದರೆ ಹತ್ತುದಿನವಿರಬೇಕು.

30 ದತ್ತಪುತ್ರನು ಹೋದರೆ ಸ್ವೀಕಾರ ಮಾಡಿದ ತಂದೆಗೆ ಹತ್ತುದಿನ.

31 ದತ್ತುಸ್ವೀಕಾರವಾದ ನಂತರ ಪೋಷಕ ತಂದೆಗೆ ಹೆಂಡತಿಯಲ್ಲಿ ಔರಸಪುತ್ರ ಹುಟ್ಟಿದರೆ ಅವನೇ ಸಂಸ್ಕಾರ ಮಾಡುವ ಅಧಿಕಾರಿ. ಆಗ ದತ್ತುಪುತ್ರನಿಗೆ ಮೂರುದಿನ ಆಶೌಚವು.

ಪರಾ—ದಶರಾತ್ರಜ್ಞಾತಿಗಳಲ್ಲಿ ದತ್ತುಸ್ವೀಕಾರವಾಗಿದ್ದರೆ ಅಂಥವನ ವಿಷಯದಲ್ಲಿ ಹತ್ತುದಿನ ಆಶೌಚವು ಇದ್ದೇ ಇದೆ. ತ್ರಿರಾತ್ರಜ್ಞಾತಿಗಳ ಲ್ಲಾದರೆ ಮೂರು ದಿನ: ಇತ್ಯಾದಿ ನ್ಯಾಯವನ್ನು ನೆನಪಿನಲ್ಲಿಡಬೇಕು ಮೇಲ್ಕಂಡೆ ದತ್ತುಪುತ್ರನ ವಿಷಯದ ಆಶೌಚವು ಭಿನ್ನಗೋತ್ರವಾಗಿದ್ದರೆ ಮಾತ್ರ.

## ವ್ಯಭಿಚಾರಿ ಸ್ತ್ರೀಯರ ಆಶೌಚಕ್ರಮ

ಅನುಲೋಮ ವ್ಯಭಿಚಾರಿ ಸ್ತ್ರೀಯು ಮೃತಪಟ್ಟರೆ (ವ್ಯಭಿಚಾರಿಣಿಯಾದವಳು ಪ್ರಸವಿಸಿದರೆ) ಹತ್ತಿರದಲ್ಲಾದರೆ ಮೊದಲಿನ ಗಂಡನಿಗೂ ಮತ್ತೊಬ್ಬ ಗಂಡನಿಗೂ ಮೂರು ದಿನ ಆಶೌಚವು. ಅಪರ ಜ್ಞಾತಿಗಳಿಗೆ ಒಂದು ದಿನ. ಹಾಗೆಯೇ ವ್ಯಭಿಚಾರಿ ಸ್ತ್ರೀ ಸತ್ತರೆ ಗಂಡಂದಿರಿಗೆ ಮೂರು ದಿನ, ಜ್ಞಾತಿಗಳಿಗೆ ಒಂದು ದಿನ ಆಶೌಚವು.

ಅನುಲೋಮ ಎಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಜಾತಿಗಳು ಕ್ರಮವಾಗಿ ಬ್ರಾಹ್ಮಣ ಸ್ತ್ರೀಯು ಕ್ಷತ್ರಿಯ, ವೈಶ್ಯ, ಶೂದ್ರ ಈ ಮೂರರಲ್ಲಿ ಹುಟ್ಟಿದವರ ಪುರುಷರಲ್ಲಿ ವ್ಯಭಿಚಾರ ಮಾಡಿದ ಸ್ತ್ರೀ ಅನುಲೋಮ ವ್ಯಭಿಚಾರಿಣಿ. ಹೀಗೆಯೇ ಕ್ಷತ್ರಿಯ ಸ್ತ್ರೀಯು ವೈಶ್ಯ ಶೂದ್ರ ಪುರುಷರಲ್ಲೂ, ವೈಶ್ಯ ಸ್ತ್ರೀ ಶೂದ್ರನಲ್ಲೂ ವ್ಯಭಿಚಾರ ಮಾಡಿದವಳು ಅನುಲೋಮ ವ್ಯಭಿಚಾರಿಣಿ.

ಇದಕ್ಕೆ ಬದಲು ಕ್ಷತ್ರಿಯಸ್ತ್ರೀ ಬ್ರಾಹ್ಮಣನಲ್ಲೂ, ವೈಶ್ಯಸ್ತ್ರೀಯು ಬ್ರಾಹ್ಮಣ ಕ್ಷತ್ರಿಯ ಪುರುಷರಲ್ಲೂ, ಶೂದ್ರಸ್ತ್ರೀಯು ಬ್ರಾಹ್ಮಣ-ಕ್ಷತ್ರಿಯ-ವೈಶ್ಯಾದಿಗಳಲ್ಲಿ ವ್ಯಭಿಚಾರ ಮಾಡಿದವಳು ಪ್ರತಿಲೋಮ ವ್ಯಭಿಚಾರಿಣಿ ಎಂದರಿಯಬೇಕು.. ಪ್ರತಿಲೋಮ ವ್ಯಭಿಚಾರಿಣಿಯು ಪ್ರಸವಿಸಿದರೂ, ಮೃತಪಟ್ಟರೂ ಆಶೌಚವಿಲ್ಲ.

ಇಬ್ಬರು ತಂದೆಯರಿಂದ ಹುಟ್ಟಿದ ವ್ಯಭಿಚಾರಿ ಸ್ತ್ರೀ ಪುತ್ರರಿಗೆ ಪರಸ್ಪರ ತ್ರಿರಾತ್ರ ಮೃತಾಶೌಚವಿದೆ.

## ಬಂಧುವರ್ಗದವರ ಆಶೌಚಕ್ರಮ

ಬಂಧುಗಳೆಂಬುವರು ಮೂರು ಬಗೆ, ಆತ್ಮಬಂಧು, ಮಾತೃಬಂಧು, ಪಿತೃಬಂಧು ಎಂಬುದಾಗಿ ಧರ್ಮಶಾಸ್ತ್ರದಲ್ಲಿ ಉಕ್ತವಾಗಿದೆ.

ಆತ್ಮಬಂಧುಗಳು ತನ್ನ ಸೋದರತ್ತೆ ಮಕ್ಕಳು ಮತ್ತು ತನ್ನ ಚಿಕ್ಕಮ್ಮ ದೊಡ್ಡಮ್ಮನ ಮಕ್ಕಳು ಮತ್ತು ಸೋದರಮಾವನ ಮಕ್ಕಳು.

ಪಿತೃಬಂಧುಗಳು – ತಂದೆಯ ಸೋದರತ್ತೆ ಮಕ್ಕಳೂ, ತಂದೆಯ ಚಿಕ್ಕಮ್ಮ ದೊಡ್ಡಮ್ಮನ ಮಕ್ಕಳೂ ಮತ್ತು ತಂದೆಯ ಸೋದರಮಾವನ ಮಕ್ಕಳು.

ಮಾತೃಬಂಧುಗಳು – ತಾಯಿಯ ಸೋದರತ್ತೆ ಮಕ್ಕಳು, ತಾಯಿಯ ಚಿಕ್ಕಮ್ಮ ದೊಡ್ಡಮ್ಮನ ಮಕ್ಕಳು ಮತ್ತು ತಾಯಿಯ ಸೋದರಮಾವನ ಮಕ್ಕಳು.

ಈ ಬಗೆಯ ಬಂಧುಗಳು ಮೃತಪಟ್ಟರೆ ಹತ್ತಿರದಲ್ಲಾದರೆ ಪಕ್ಷಿಣಿ, ದೂರದಲ್ಲಾದರ ಒಂದು ದಿನ ಮಾತ್ರ.

ಸಾಪತ್ನ್ಯ ಪಿತೃವರ್ಗದವರೂ, ಮಾತುಲ ಮೊದಲಾದವರು ಹೋದರೂ ಹತ್ತಿರದಲ್ಲಾದರೆ ಒಂದು ದಿನ, ದೂರದಲ್ಲಾದರೆ ಸ್ನಾನಮಾತ್ರ.

ದತ್ತುಸ್ವೀಕಾರ ಮಾಡಿದವರ ಸೋದರಮಾವ ಮೊದಲಾದವರು ಮೃತಪಟ್ಟರೆ ದತ್ತುಪುತ್ರನಿಗೆ ಹತ್ತಿರದಲ್ಲಾದರೆ ಒಂದು ದಿನ, ದೂರದಲ್ಲಾದರೆ ಸ್ನಾನ ಮಾತ್ರ.

ದತ್ತುಪುತ್ರನ ಜನಕವರ್ಗದ ಮಾತುಲಾದಿಗಳು ಹೋದರೆ ದತ್ತನಿಗೆ ಹತ್ತಿರದಲ್ಲಾದರೆ ಪಕ್ಷಿಣಿ, ದೂರದಲ್ಲಾದರೆ ಏಕದಿನ.

ಸಪತ್ನಿಪುತ್ರಿಯು (ಸವತಿಯ ಮಗಳು) ಮೃತಪಟ್ಟರೆ ಸಾಪತ್ನ್ಯ ಮಾತೃವಿಗೆ ಏಕದಿನ. ಹಾಗೆಯೇ ಮಾತೃಸಪತ್ನಿಯು ಮೃತಪಟ್ಟರೆ ಸಪತ್ನೀಪುತ್ರಿಗೆ ಏಕದಿನ, ದೂರದಲ್ಲಾದರೆ ಕೇವಲ ಸ್ನಾನ.

ಸವತಿತಾಯಿ, ತಂದೆ, ಸಹೋದರರೆ ಮೊದಲಾದ ಬಂಧುಗಳು ಮೃತ ಪಟ್ಟರೆ ಸಪತ್ನಿಗೆ ಹತ್ತಿರದಲ್ಲಿ ಸ್ನಾನ ಮಾತ್ರ, ಆಶೌಚವಿಲ್ಲ.

ದೌಹಿತ್ರ ಮತ್ತು ಭಾಗಿನೇಯ ಬಿಟ್ಟು ಉಳಿದ ಜ್ಞಾತಿಗಳಲ್ಲದ ಗಂಡು ಹುಡುಗರು ಉಪನಯನವಾಗದೆ ಮೊದಲೇ ಮೃತಪಟ್ಟರೆ ಪಕ್ಷಿಣಿ, ಉಪ ನಯನವಾದ ಮೇಲೆ ಆದರೆ ಮೂರುದಿನ, ಚೌಲವಾಗುವ ಮುಂಚೆಯೇ ಹೋದಲ್ಲಿ ಸ್ನಾನಮಾತ್ರ.

ತಾಯಿಯ ಅಕ್ಕತಂಗಿಯರು ವಿವಾಹವಾಗುವ ಮುಂಚೆಯೇ ಮೃತ ಪಟ್ಟರೆ ಹತ್ತಿರದಲ್ಲೂ ಸ್ನಾನ.

ಜಾಮಾತ (ಅಳಿಯ) ಮೃತಪಟ್ಟರೆ ಹತ್ತಿರದಲ್ಲೂ ಪಕ್ಷಿಣಿ ದೂರದಲ್ಲಿ ಒಂದು ದಿನ. ಅಳಿಯನು ಮಾವನ ಮನೆಯಲ್ಲೇ ಹೋದರೆ ಮೂರುದಿನ

## ವಿಶೇಷ ವಿಷಯ

ಯೋನಿಸಂಬಂಧದಲ್ಲಿ ಯಾವಯಾವ ಪುರುಷರು ಇರುವರೋ ಅವರ ಹೆಂಡರು ಮೃತಪಟ್ಟರೆ ಹತ್ತಿರದಲ್ಲೂ ಸ್ನಾನ ಮಾತ್ರ. ಸೋದರಮಾವನ ಹೆಂಡತಿ ಮೃತಪಟ್ಟರೆ ಮೂರು ದಿನ ಆಶೌಚವು.

ಯೋನಿಸಂಬಂಧದಲ್ಲಿ ಯಾವ ಸ್ತ್ರೀಯರು ಇರುವರೋ ಅವರ ಗಂಡಂ ದಿರು ಹೋದರೆ ಸ್ನಾನಮಾತ್ರ.

ಗುರು, ಗುರುಪತ್ನಿ, ಗುರುಪುತ್ರರು ಮೃತಪಟ್ಟರೆ ಹತ್ತಿರದಲ್ಲಿ ಪಕ್ಷಿಣಿ, ದೂರದಲ್ಲಾದರೆ ಒಂದುದಿನ. ಶಿಷ್ಯರು ಹೋದರೂ ಗುರು-ಪತ್ನಿ-ಪುತ್ರರಿಗೆ ಇದೇಬಗೆಯಲ್ಲಿ ಆಶೌಚವು. ಆದರೆ ಈ ಆಚರಣೆಯು ಬಹಳದಿನಗಳಿಂದ ತಪ್ಪಿಹೋಗಿದೆ.

ಹನ್ನೆರಡುವರ್ಷಕಾಲ ಜೊತೆಯಲ್ಲೇ ವೇದವನ್ನು ಅಧ್ಯಯನಮಾಡಿದ ಸಹಾಧ್ಯಾಯಿಯು ಮೃತಪಟ್ಟರೆ ಹತ್ತಿರದಲ್ಲಾದರೆ ಪಕ್ಷಿಣಿ, ದೂರದಲ್ಲಾದರೆ ಒಂದುದಿನ. ಹೀಗೆಯೇ ಮಿತ್ರನು ಮೃತಪಟ್ಟರೆ ಒಂದುದಿನ, ದೂರದಲ್ಲಾ ದರೆ ಸ್ನಾನಮಾತ್ರ,

## ವಿಶೇಷ ವಿಷಯ

ಇಲ್ಲಿ ಸಪಿಂಡರಿಗೆ ಮತ್ತು ಸಮಾನೋದಕರಿಗೂ, ಆಚಾರ್ಯ, ಮಾತಾ ಮಹ ಇವರಿಗೆ ಅವರ ಸಂಬಂಧಿಗಳು ಅವಶ್ಯ ತಿಲೋದಕವನ್ನು ಕೊಡಬೇಕು. ಅನ್ಯಥಾ ಅಶೌಚವು ಹೋಗುವುದಿಲ್ಲ. ಕೊಟ್ಟಿಲ್ಲವಾಗಿದ್ದರೆ ಒಂದು ದಿನ ಆಶೌಚವಿದ್ದು ತಿಲೋದಕವನ್ನು ಕೊಡಬೇಕು.

ಮದುವೆಯಾದ ಸ್ತ್ರೀಯರಿಗೆ ಮಾತಾಪಿತೃಗಳು, ಸಹೋದರರು, ಅವರ ಮಕ್ಕಳನ್ನು ಬಿಟ್ಟುಳಿದ ಪಿತೃವರ್ಗದ ಬಂಧುಗಳು ಮೃತಪಟ್ಟರೆ ಸ್ನಾನಮಾತ್ರವೆಂದು ಧರ್ಮಪ್ರವೃತ್ತಿಯನ್ನು ಅನುಸರಿಸುವ ಆಂಧ್ರಾದಿಗಳು ಹೇಳುವರು, ಇತರ ಜನರು ಪಕ್ಷಿಣೀ ಮೊದಲಾದ ಆಶೌಚವನ್ನು ಆಚರಿಸುವರು.

ದ್ರಾವಿಡರು ಮಾತ್ರ ಪರ್ವೇಸಾಮಾನ್ಯವಾಗಿ ಮದುವೆಯಾದ ಸ್ತ್ರೀಯರೂ ಅವರ ಸಂಬಂಧಿಗಳೂ ಸಹ ಪಕ್ಷಿಣಿಯನ್ನು ಆಚರಿಸುತ್ತಾರೆ.

## ಆಶೌಚವು ಕಳೆದನಂತರ ಶುದ್ಧಿಕ್ರಮ

ಅಶೌಚವು ಮುಗಿದ ಮೇಲೆ ಸಂಗಮಕಾಲದಲ್ಲಿ ಅಂದರೆ ಬೆಳಗಿನ ಆರು ಘಳಿಗೆ ಕಳೆದ ನಂತರ ಸ್ನಾನ ಮಾಡಿ ಬ್ರಾಹ್ಮಣನು ಕೈಯಿಂದ ನೀರನ್ನು ಸ್ಪರ್ಶಮಾಡಿ, ಆಚಮನ ಮಾಡಿದರೆ ಶುದ್ಧನಾಗುವನು. ಕ್ಷತ್ರಿಯನು ತನ್ನ ಆಯುಧವನ್ನೋ ವಾಹನವನ್ನೋ ಮುಟ್ಟಿದರೆ ಶುದ್ಧನಾಗುವನು. ಶೂದ್ರನು ಸ್ನಾನಮಾಡಿ ತನ್ನ ದಂಡವನ್ನು ಸ್ಪರ್ಶಿಸಬೇಕು. ಇದು ಸಂಕ್ಷೇಪ. ಮುಂದೆ ಶುದ್ಧಿಕ್ರಮವನ್ನು ವಿಸ್ತಾರವಾಗಿ ತಿಳಿಸಿದೆ.

ದಶಾಹ ಮಧ್ಯದಲ್ಲಿ ಜ್ಞಾತಿಗಳ ಮರಣ ಕೇಳಿಬಂದರೆ ಉಳಿದ ದಿನಗಳೆಲ್ಲಾ ಶುದ್ಧಿ.

## ಅತಿಕ್ರಾಂತಾಶೌಚ ನಿರ್ಣಯ

ಸಪಿಂಡರು ಅಂದರೆ ಜ್ಞಾತಿಗಳು ಸತ್ತರೆ ಅವರ ದಶಾಹಾಶೌಚ ಕಳೆದ ನಂತರ ತಿಳಿದರೆ ಮೂರು ತಿಂಗಳವರೆಗೂ ಮೂರುದಿನ ಇರಬೇಕು ಅದರ ನಂತರದ ಆರು ತಿಂಗಳವರೆಗೂ ಪಕ್ಷಿಣಿಯಿರಬೇಕು. ಅದರ ನಂತರ ಒಂಬತ್ತು ತಿಂಗಳು ಅಥವಾ ವರ್ಷ ಕಳೆದ ನಂತರ ತಿಳಿದರೆ ಸ್ನಾನ ಮಾತ್ರ.

ಷರಾ ಈ ಆಶೌಚವು ದಶಾಹವೆಂಬ ಪೂರ್ಣಾಶೌಚದ ವಿಷಯದಲ್ಲೂ ಮೃತನಿಗೆ ಸಂಸ್ಕಾರವು ನಡೆದಿದ್ದರೆ ಮಾತ್ರ. ನಡೆಯದಿದ್ದರೆ ದಹನಾಶೌಚ.

ತ್ರಿರಾತ್ರಾಶೌಚಿಗಳಿಗೆ ಮರಣವು ತ್ರಿರಾತ್ರಿಮಧ್ಯದಲ್ಲಿ ಕೇಳಿಬಂದರೆ ಉಳಿದ ದಿನಗಳಲ್ಲಿ ಶುದ್ಧಿ. ತ್ರಿರಾತ್ರವು ಕಳೆದಿದ್ದರೆ ಕೇವಲ ಸ್ನಾನಮಾತ್ರ.

ಟಿಪ್ಪಣಿ —ಒಂಬತ್ತು ತಿಂಗಳವರೆಗೂ ಒಂದುದಿನ. ಅನಂತರ ತಿಳಿದರೆ ಸ್ನಾನಮಾತ್ರ. ಇದು ವೃದ್ಧವಸಿಷ್ಠವಚನದಂತೆ ಆಚಾರವು. ಎರಡು ಬಗೆ ಧರ್ಮಶಾಸ್ತ್ರವಚನವಿದ್ದರೆ ವಿಕಲ್ಪ, ಅಂದರೆ ಯಾವುದಾದರೊಂದು ಮತ ವನ್ನವಲಂಬಿಸಿ ಆಚರಿಸಬೇಕು. ಅದರಲ್ಲೂ ಆಯಾಯ ದೇಶದ ಮತಾಚಾರ (ವೈದಿಕರ ಆಚಾರವನ್ನು) ನೋಡಿ ಆಚರಿಸಬೇಕು.

ಪಕ್ಷಿಣಿ ಆಶೌಚಿಗಳಿಗೆ ಮರಣವಾದಲ್ಲಿ ಪಕ್ಷಿಣೀ ಕಾಲದ ನಡುವೆ ಮರಣ ತಿಳಿದುಬಂದರೆ ಅದರ ಉಳಿದ ಕಾಲವು ಮುಗಿದೊಡನೆ ಶುದ್ಧಿಯು. ಪಕ್ಷಿಣೀ ಕಾಲವೂ ಮೀರಿಹೋದರೆ ಕೇವಲ ಸ್ನಾನಮಾತ್ರ.

ಒಂದೇ ದಿನ ಆಶೌಚವಿರುವವರಿಗೆ ಆ ದಿನವೂ ಕಳೆದರೆ ಸ್ನಾನಮಾತ್ರ.

ಮಾತಾಪಿತೃಗಳ ವಿಷಯದಲ್ಲಿ ದತ್ತಕನ್ಯೆಗೆ ಮಾತಾಪಿತೃಗಳ ಮೃತಾ ಶೌಚವು ಹತ್ತುದಿನಗಳೊಳಗೆ ತಿಳಿದರೆ ಮೂರುದಿನ ಆಶೌಚವಿರಬೇಕು. ಅದರ ಮೇಲ್ಪಟ್ಟಿದ್ದರೆ ಪಕ್ಷಿಣಿ ಆಶೌಚವು.

ಷರಾ— ಹೀಗೆಂದು ಧರ್ಮಶಾಸ್ತ್ರ ಗ್ರಂಥವನ್ನು ಅನುಸರಿಸುವವರು ಹೇಳುತ್ತಾರೆ. ಕೆಲವರು ತ್ರಿರಾತ್ರವು ಕಳೆದುಹೋಗಿದ್ದರೆ ಸ್ನಾನಮಾತ್ರ ವೆಂದು ಹೇಳುತ್ತಾರೆ. ಶಿಷ್ಟಾಚಾರವಿದ್ದಂತೆ ಕೇಳಿ ಆಚರಿಸಬೇಕು.

ಪುತ್ರಿಕಾ, ಭಗಿನೀ ಮತ್ತು ಭ್ರಾತೃಗಳ ವಿಷಯದಲ್ಲಿ ಮರಣವಾರ್ತೆ ತಿಳಿದಲ್ಲಿ ಅವರ ಸಂಬಂಧಿಗಳಿಗೆ ಹತ್ತು ದಿನಗಳೊಳಗೆ ಆದರೆ ಪಕ್ಷಿಣಿ, ನಂತರ ತಿಳಿದಲ್ಲಿ ಒಂದು ದಿನ ಮಾತ್ರ ಎಂದು ಧರ್ಮಪ್ರವೃತ್ತಿಕಾರರ ಮತವಿದೆ. ಯಾವಜ್ಜೀವವೂ ಪಕ್ಷಿಣಿಯೆಂದು ಮತಾಂತರವಿದೆ. ಪಕ್ಷಿಣೀಕಾಲವೂ ವಿಹಾರಿದ್ದರೆ ಸ್ನಾನಮಾತ್ರವೆಂದು ಮೂರನೇ ಪಕ್ಷ. ಅಲ್ಲಲ್ಲಿರುವ ಶಿಷ್ಟಾಚಾರದಂತೆ ನಡೆಯಬೇಕು.

ಪುತ್ರನ ವಿಷಯದಲ್ಲಿ ತಂದೆಗೆ ಹತ್ತುದಿನ ಕಳೆದನಂತರ ಮರಣ ತಿಳಿದರೆ ಒಂದು ವರ್ಷದ ಪರ್ಯಂತರ ಮೂರುದಿನ, ಅದೂ ಕಳೆದರೆ ಸ್ನಾನಮಾತ್ರ. ಕೆಲವರು ಒಂದುದಿನ ಇರಬೇಕೆಂದು ಹೇಳುವರು.

## ಪುತ್ರನ ವಿಷಯದಲ್ಲಿ ವಿಶೇಷ ವಚನ

ಪುತ್ರನು ಮೃತಪಟ್ಟು ಸಂಸ್ಕಾರವು ನಡೆದಿಲ್ಲವಾದರೆ ಒಂದು ವರ್ಷದ ನಂತರ ತಿಳಿದರೂ ತಂದೆಯು ಮೂರುದಿನ ಆಶೌಚವಿರಬೇಕು,

ಸಪತ್ನಮಾತೃ (ಮಲತಾಯಿ) ಮೃತಪಟ್ಟರೆ ಒಂದು ವರ್ಷಪರ್ಯಂತ ಮೂರು ದಿನ ಮಗನು ಆಶೌಚವಿರಬೇಕು. ವರ್ಷ ಕಳೆದ ಮೇಲಾದರೆ ಯಾವಜ್ಜೀವ ಪಕ್ಷಿಣಿಯಿರಬೇಕು.

ಪಕ್ಷಿಣಿಯೆಂದರೆ, ಒಂದು ಹಗಲು ಮತ್ತು ಎರಡು ರಾತ್ರಿ. ಅಥವಾ ಒಂದು ರಾತ್ರಿ ಎರಡು ಹಗಲು.

ಮಲತಾಯಿಯು ಸಂಸ್ಕಾರ ನಡೆದಿಲ್ಲವಾದರೆ ಮತ್ತು ಅವರಿಗೆ ಮಕ್ಕಳು ಇಲ್ಲದಿದ್ದರೆ ಒಂದು ವರ್ಷದವರೆಗೂ ದಶರಾತ್ರ ಆಶೌಚವು. ವರ್ಷ ಕಳೆದ ನಂತರ ತ್ರಿರಾತ್ರವಿರಬೇಕು, ಈ ಆಶೌಚವು ೩೦ ಯೋಜನ ದೂರದೇಶದ ಅಂತರವಿದ್ದರೂ ಇದ್ದೇ ಇದೆ.

ಅವರಲ್ಲೂ ಕಿರಿಮಗನಿಗೆ ತ್ರಿದಿನ, ಜ್ಯೇಷ್ಠನಿಗೆ ದಶದಿನಗಳೆಂದೂ ಅಭಿನವ ಷಡಶೀತಿಯಲ್ಲಿ (105ನೇ ಪುಟ) ಹೇಳಿದೆ.

ಸಪತ್ನಿ-ದಂಪತಿ-ಮಾತಾಪಿತೃಗಳಿಗೆ ಬಿಟ್ಟು ಉಳಿದವರಿಗೆ ಮೂವತ್ತು ಯೋಜನ ದೂರದಲ್ಲಿ ದೇಶಾಂತರದಲ್ಲಿ ಮರಣವಾದರೆ ಸ್ನಾನಮಾತ್ರ, ಹತ್ತು ದಿನಗಳೊಳಗೆ ಕೇಳಿಬಂದರೆ ಉಳಿದ ದಿನಗಳಲ್ಲಿ ಶುದ್ಧಿಯು.

ಮೇಲೆ ಹೇಳಿದವರನ್ನು ಬಿಟ್ಟು ಉಳಿದವರಿಗೆ ಯಾವುದೇ ಕಾರಣದಿಂದ ಮಂತ್ರವತ್ತಾಗಿ ಪುನಃ ದಹನ ನಡೆದಲ್ಲಿ ಆಗ ಅನೇಕವರ್ಷಗಳು ಕಳೆದಿದ್ದರೂ ಆಶೌಚ ಹಿಡಿಯದಿದ್ದ ಜ್ಞಾತಿಗಳಿಗೆ ತ್ರಿರಾತ್ರ ಆಶೌಚವು. ಒಂದು ವರ್ಷ ಕಳೆದನಂತರ ಒಂದೇ ದಿನವೆಂದು ಕೆಲವರ ಮತ.

ಮೊದಲೇ ಆಶೌಚ ಹಿಡಿದಿದ್ದರೆ ಪುನಃ ದಹನಸಂಸ್ಕಾರ ನಡೆಯುವ ಸಮಯದಲ್ಲಿ ಜ್ಞಾತಿಗಳಿಗೆ ಆಶೌಚವಿರುವುದಿಲ್ಲ. ಕರ್ತೃಭಿನ್ನರಿಗೆ ಮೊದಲೇ ತಿಲೋದಕ ಕೊಡದೇ ಇದ್ದಲ್ಲಿ ತಿಲೋದಕ ಕೊಡುವುದಕ್ಕಾಗಿ ಒಂದುದಿನ ಆಶೌಚವಿದೆ. ಕರ್ತೃವಿಗಾದರೆ ಮೊದಲು ಆಶೌಚವನ್ನು ಹಿಡಿದಿದ್ದರೂ ಪುನಃ ಮಂತ್ರವತ್ತಾಗಿ ದಹನಸಂಸ್ಕಾರ ಮಾಡುವಾಗ ಮೂರುದಿನ ಆಶೌಚ.

ಪುತ್ರನೇ ಕರ್ತೃವಾಗಿದ್ದಲ್ಲಿ ಹಿಂದೆ ಆಶೌಚ ಹಿಡಿಯದೇ ಬಿಟ್ಟಿದ್ದರೆ ದಶದಿನ ಆಶೌಚವು. ಹಿಂದೆ ಹಿಡಿದಿದ್ದರೆ ಮೂರುದಿನ ಮಾತ್ರ.

ಬೇರೆಕಾರಣದಿಂದ ಪುನಃ ದಹನಸಂಸ್ಕಾರವನ್ನು ಕಾಲಾಂತರದಲ್ಲಿ ಯಾರು ಮಾಡುವವರೋ ಆ ಬಂಧುಗಳು ತಮ್ಮ ತಮ್ಮ ಆಶೌಚವನ್ನು ಆಚರಿಸಿ ದಶಾಹಮಧ್ಯದಲ್ಲಿ ದರ್ಭಸ್ತಂಬದ ಮೇಲೆ ಉದಕದಾನ ಮಾಡಬೇಕು.

ದಶಾಹವು ಕಳೆದಮೇಲೆ ಕೇಳಿಬಂದಲ್ಲಿ ಮಾಡಬೇಕಾಗಿಲ್ಲ. ಆದರೆ ಪುನಃ ದಹನವು ನಡೆಯುವುದಾದರೆ ಮಾಡಲೇಬೇಕು, ಹತ್ತುದಿನಗಳ ನಡುವೆ ಮರಣ ಕೇಳಿಬಂದರೆ ಉದಕದಾನ ಮಾಡಬೇಕು. ಪುನಃ ದಹನವಾಗುವ ಕಾಲದಲ್ಲಿ ಏನೂ ಮಾಡಬೇಕಾಗಿಲ್ಲ.

ಕರ್ತೃವಿಗೆ ಮಾತ್ರ ಆಗಲೂ ಮೂರುದಿನ ಆಶೌಚವಿರುತ್ತದೆ. ಎಷ್ಟು ವರ್ಷಗಳು ಕಳೆದರೂ ಕರ್ತೃವಿಗೆ ಇದು ಇದ್ದೇ ಇದೆ.

ದಶಾಹದ ನಡುವೆ ಪುನಃ ದಹನ ನಡೆದರೆ ಪುತ್ರರಿಗೂ ಜ್ಞಾತಿಗಳಿಗೂ ದಶಾಹಶೇಷದಿನಗಳಲ್ಲಿ ಶುದ್ಧಿಯು.

ಆಹಿತಾಗ್ನಿಯು ಮೃತಪಟ್ಟಾಗ ಸಂಸ್ಕಾರಕ್ಕೆ ಮೊದಲು ಪುತ್ರರಿಗೂ ಜ್ಞಾತಿಗಳಿಗೂ ಎಲ್ಲರಿಗೂ ಆಶೌಚವಿರುವುದಿಲ್ಲ, ಆದರೆ ಪುನಃ ದಹನ ಮಾಡುವ ದಿನದಿಂದ ಆರಂಭಿಸಿ ಹತ್ತುದಿನ ಆಶೌಚವಿರುತ್ತದೆ. ಇದು ಆತ್ಮನ ಅಗ್ನಿದಹನ ಮಾಡಿದರೂ, ಪಾಲಾಶವಿಧಿಯನ್ನು ಮಾಡಿದರೂ ಈ ಆಶೌಚವು ಸಮಾನವೆ. ಆಹಿತಾಗ್ನಿಯಲ್ಲದವರಿಗೆ ಅಸ್ಥಿದಹನ ನಡೆದರೆ ಎಲ್ಲರಿಗೂ ಹತ್ತು ದಿನ. ಪಾಲಾಶವಿಧಿಯಾದರೆ ಮೂರುದಿನ ಮಾತ್ರ.

ಸಪಿಂಡರಲ್ಲದ ಸೋದರಮಾವ ಮೊದಲಾದವರಿಗೆ ಆಹಿತಾಗ್ನಿಯ ವಿಷಯದಲ್ಲಿ ದಹನ ಸಂಸ್ಕಾರದ ದಿನದಿಂದ ಆಶೌಚಕಾಲ ಮುಗಿದೊಡನೆ ಶುದ್ಧಿಯು. ಆಹಿತಾಗ್ನಿಯಲ್ಲದವರ ವಿಷಯದಲ್ಲಿ ಮರಣದಿನದಿಂದ ಆರಂಭಿಸಿ ತಮ್ಮ ಆಶೌಚಕಾಲ ಮುಗಿದೊಡನೆ ಶುದ್ಧಿಯು,

ದುರ್ಮರಣವಾಗಿದ್ದ ಆಹಿತಾಗ್ನಿ–ಆಹಿತಾಗ್ನಿಯಲ್ಲದವರ ವಿಷಯದಲ್ಲಿ ದಹನಕ್ಕೆ ಮೊದಲು ಪುತ್ರರಿಗೂ, ಜ್ಞಾತಿಗಳಿಗೂ ಆಶೌಚವಿರುವುದಿಲ್ಲ. ಆದರೆ ಪುನಃ ದಹನಮೊದಲುಗೊಂಡು ಆಶೌಚವು. ಇದು ಬುದ್ಧಿಪೂರ್ವಕ ಮರಣಹೊಂದಿದ್ದರೆ ಮಾತ್ರ.

ಬುದ್ಧಿಪೂರ್ವಕವಲ್ಲದೆ ಪ್ರಮಾದದಿಂದ ದುರ್ಮರಣವಾಗಿದ್ದರೆ ಮರಣ ದಿನದಿಂದಲೇ ಆಶೌಚವು. ಇಂಥವರಿಗೆ ಕೂಡಲೆ ಸಂಸ್ಕಾರ ಮಾಡಬೇಕು.

## ಅನೇಕ ಆಶೌಚಗಳು ಸೇರಿದಾಗ ಆಚರಣೆ ಹೇಗೆ ?

ಒಂದು ಆಶೌಚವು ಅನುವರ್ತಿಸುತ್ತಿರುವಾಗ ಮತ್ತೊಂದು ಆಶೌಚವು ಬರುವುದುಂಟು, ಸಮವಾಗಲಿ, ವಿಷಮವಾಗಲಿ, ವಿಜಾತೀಯವಾಗಲಿ ಎರಡು ಆಶೌಚಗಳು ಏಕಕಾಲದಲ್ಲಿ ಸೇರಿದಾಗ ಒಂದೇ ಕಾಲದಲ್ಲಿ ಶುದ್ಧಿಯು.

ಉದಾ, — ಜಾತಾಶೌಚಗಳು ಎರಡು ಹತ್ತುದಿನಗಳಲ್ಲಿದ್ದು ಒಂದೇಕಾಲದಲ್ಲಿ ಸೇರಿದರೆ ಸಮಕಾಲದಲ್ಲಿಯೇ ಶುದ್ಧಿ.

ಸಮವಾಗಿಯೂ ಸಜಾತೀಯವಾಗಿಯೂ ಇರುವ ಎರಡು ಆಶೌಚ ಗಳಲ್ಲಿ ಒಂದು ಮೊದಲು ಇನ್ನೊಂದು ಆಮೇಲೆ ಬಂದರೆ ಮೊದಲು ಬಂದ ಆಶೌಚದ ಕಾಲದಲ್ಲಿಯೇ ಶುದ್ಧಿಯಾಗುವುದು.

ಉದಾ. —ಒಂದು ಜಾತಾಶೌಚವು ಎರಡುದಿನ ಮುಂಚಿತವಾಗಿ ಬಂದು ಇದರ ನಡುವೆ ಮತ್ತೊಂದು ಪೂರ್ಣವಾದ ಜಾತಾಶೌಚವು ಬಂದರೆ ಮೊದ ಲಿನ ಜಾತಾಶೌಚದಿಂದಲೇ ಶುದ್ಧಿಯು. ಇದರಂತೆಯೇ ಅಲ್ಪಕಾಲದ ಜಾತಾಶೌಚವೂ ಮೊದಲಿನದರಿಂದಲೇ ನಿವೃತ್ತಿಯಾಗುವುದು.

ಹತ್ತುದಿನದ ಜಾತಾಶೌಚಗಳು ಅಥವಾ ಮೃತಾಶೌಚಗಳು ಬಂದು ನಡುವೆ ಜಾತಾ ಅಥವಾ ಮೃತಾಶೌಚವು ಸೇರಿದರೆ ಅದರೊಳಗೆ ಯಾವುದು ಹೆಚ್ಚು ಕಾಲವುಳ್ಳದ್ದೋ ಅದರಿಂದಲೇ ನಿವೃತ್ತಿಯು.

ಮೊದಲು ಬಂದ ಆಶೌಚವು ಅಲ್ಪವಾಗಿದ್ದು ಆಮೇಲೆ ಬಂದದ್ದರ ಅರ್ಧಕ್ಕಿಂತಲೂ ಅಧಿಕಕಾಲದ್ದಾದರೆ ಅಲ್ಪದಿಂದಲೇ ನಿವೃತ್ತಿಯು.

ಉದಾ. - ಮೂರು ದಿನದ ಆಶೌಚವು ಮೊದಲು ಬಂದಿದೆ. ಆಮೇಲೆ ಬಂದದ್ದು ಪಕ್ಷಿಣಿ. ಇದು ಮೊದಲು ಬಂದದ್ದರಿಂದಲೇ ನಿವೃತ್ತಿಯು.

ವಿಜಾತೀಯವಾದ ಜಾತಾಶೌಚ-ಮೃತಾಶೌಚಗಳು ಸೇರಿದಾಗ ಸಮ ವಾಗಲಿ, ಅಧಿಕವಾಗಲಿ ಮೃತಾಶೌಚದಿಂದಲೇ ನಿವೃತ್ತಿಯಾಗುವುದು,

ಜಾತಾಶೌಚವು ಅಧಿಕಕಾಲವುಳ್ಳದ್ದಾದರೆ ಅಲ್ಪಕಾಲದ ಮೃತಾಶೌಚವು ಜಾತಾಶೌಚದಿಂದಲೇ ನಿವೃತ್ತಿಯಾಗುವುದು.

ಜಾತಾ ಅಥವಾ ಮೃತಾಶೌಚವು ಹತ್ತು ದಿನಗಳಿದ್ದು ಮುಗಿಯುವುದ ರೊಳಗೆ ಮತ್ತೊಂದು ಹತ್ತುದಿನದ ಆಶೌಚವು ಹತ್ತನೇ ದಿನವೇ ಬಂದರೆ ಎರಡು ದಿನಗಳಿದ್ದು ನಂತರ ನಿವೃತ್ತಿಯಾಗುವದು. ಆದರೆ ಹತ್ತನೇ ದಿನ ಬೆಳಗಿನ ಝಾವ ಸೂರ್ಯೋದಯಕ್ಕೆ ಸ್ವಲ್ಪ ಮುಂಚಿತವಾಗಿ ಮತ್ತೊಂದು

ಹತ್ತುದಿನದ ಆಶೌಚವು ಬಾದರೆ ಮೂರು ದಿನಗಳು ಆಶೌಚವಿದ್ದು ನಿವೃತ್ತಿ ಯಾಗುವುದು.

ಮಾತಾಪಿತೃಗಳ ಮೃತಾಶೌಚವಿರುವಾಗಲೇ ಬೇರೆ ಆಶೌಚವು ಬಂದರೆ ಮಾತಾಪಿತೃಗಳ ಮೃತಾಶೌಚದಿಂದಲೇ ನಿವೃತ್ತಿಯು. ಹಾಗೆಯೇ ಬೇರೆ ಆಶೌಚವಿರುವಾಗ ಮಾತಾಪಿತೃಗಳ ಆಶೌಚ ಬಂದರೆ ಮಾತಾಪಿತೃಗಳ ಆಶೌಚ ದಿಂದಲೇ ನಿವೃತ್ತಿಯು,

ದಹನಸಂಸ್ಕಾರ ಮಾಡಿದವನ ದಹನನಿಮಿತ್ತವಾದ ಆಶೌಚವಿರುವಾಗ ಮತ್ತೊಂದು ಬಂದರೆ ದಹನಾಶೌಚದಿಂದಲೇ ನಿವೃತ್ತಿಯಾಗುವದು.

ಮಾತಾಪಿತೃಗಳಿಗೆ ಪುತ್ರಜನನ ನಿಮಿತ್ತವಾದ ಆಶೌಚವಿರುವಾಗ ಬೇರೆ ಆಶೌಚ ಬಂದರೆ ಜನನಾಶೌಚದಿಂದಲೇ ನಿವೃತ್ತಿ. ಹೀಗೆಯೇ ಪ್ರಕ್ರಿಯೆ ಜನನದಲ್ಲೂ ಸಹ ಅನ್ವಯಿಸುವುದು.

ಪಿತೃವು ಪ್ರೇತಸಂಸ್ಕಾರ ಮಾಡುವಲ್ಲಿ ಪುತ್ರಜನನ ನಿಮಿತ್ತಾಶೌಚವು ಮೊದಲು ಅಥವಾ ಆಮೇಲೆ ಬಂದ ಪ್ರೇತಾಶೌಚದಿಂದಲೇ ನಿವೃತ್ತಿಯಾಗುತ್ತದೆ. ಪ್ರೇತಸಂಸ್ಕಾರ ಮಾಡದಿದ್ದರೆ ಮೃತಾಶೌಚವು ಜನನಾಶೌಚದಿಂದಲೆ ನಿವೃತ್ತಿಯಾಗುತ್ತದೆ.

ಪಿತೃಮರಣಾಶೌಚದ ನಡುವೆ ಮಾತೃಮರಣವಾದರೆ ಪಿತೃವಿನ ದಶಾಹಗಳೂ ಕಳೆದನಂತರ ಮಾತೃವಿಗಾಗಿ ಪಕ್ಷಿಣಿಯನ್ನು ಆಚರಿಸಬೇಕು.

ಪಿತೃವು ಸನ್ಯಾಸ ಸ್ವೀಕರಿಸಿದ್ದರೂ, ದುರ್ಮರಣ ಹೊಂದಿದರೂ ಪಕ್ಷಿಣಿ ಇಲ್ಲ, ಆದರೆ ಮಾತೃಮರಣದಿನದಿಂದ ಆರಂಭಿಸಿ ಪೂರ್ಣ ದಶಾಹ ಆಶೌಚವು,

ಮಾತೃಮರಣಾಶೌಚದ ಮಧ್ಯದಲ್ಲಿ ಪಿತೃಮರಣವಾದರೆ ಪಿತೃವಿನ ಪೂರ್ಣಾಶೌಚವನ್ನೇ ಹತ್ತುದಿನ ಆಚರಿಸಬೇಕು.

ಅನುಗಮನವಿಲ್ಲದೆ ದೈವಾತ್ ಮಾತೃ ಮರಣವಾದಗೆ ಹತ್ತುದಿನ ಗಳೊಳಗೆ ಆದರೆ ಪಕ್ಷಿಣಿ ಇರಬೇಕು. ಪಿತೃಮರಣವಾಗಿ ಹತ್ತನೇ ದಿನ ಮಾತೃಮರಣವಾದರೆ ಎರಡು ದಿನ ಹೆಚ್ಚಾಗಿ ಆಶೌಚವಿರಬೇಕು. ಎಂಟನೇ ಯಾಮದಲ್ಲಿ ಸೂರ್ಯೋದಯಕ್ಕೆ ಮುಂಚೆ ಮಾತೃಮರಣವಾದರೆ ಮೂರು ದಿನ ಹೆಚ್ಚಾಗಿ ಆಶೌಚವಿರಬೇಕು.

ಮೇಲ್ಕಂಡಂತೆ ಪಕ್ಷಿಣಿ ಆಚರಿಸುವಾಗಲೂ ಹೆಚ್ಚಾಗಿ ಎರಡು ದಿನಗಳ ಆಶೌಚವಿರುವಾಗಲೂ ಪಿತೃವಿಗೆ ಹನ್ನೊಂದನೇ ದಿನದಲ್ಲೇ ಏಕೋದ್ದಿಷ್ಟ ಮಾಡಬೇಕು. ಕರ್ತೃವಿಗೆ ತಾತ್ಕಾಲಿಕವಾಗಿ ಶುದ್ಧಿಯಿದೆ.

ಪಿತೃಮರಣದ ಆಶೌಚದ ನಡುವೆ ದೇಶಾಂತರದಲ್ಲಿದ್ದ ಮಾತೃವಿನ ಮರಣಸಮಾಚಾರ ತಿಳಿದಲ್ಲಿ, ಮಾತೃವಿಗೆ ಸಂಸ್ಕಾರ ನಡೆದಿದ್ದರೆ ಎರಡು ಆಶೌಚಗಳನ್ನೂ ಏಕಕಾಲದಲ್ಲೇ ತೀರಿಸಿ ಶುದ್ಧಿ ಮಾಡಿಕೊಳ್ಳಬಹುದು. ಮಾತೃವಿಗೆ ಸಂಸ್ಕಾರ ನಡೆಯದೇ ಇದ್ದಲ್ಲಿ ಪಿತೃವಿನ ದಶಾಹ ಮುಗಿದಮೇಲೆ ಮಾತೃವಿನ ನಿಮಿತ್ತ ಪಕ್ಷಿಣಿಯಿರಬೇಕು.

ಮಾತೃವಿನ ಮೃತಾಶೌಚವಿರುವಾಗ ದೇಶಾಂತರದಲ್ಲಿ ಪಿತೃವಿನ ಮರಣ ವಾರ್ತೆಯನ್ನು ಕೇಳಿದರೆ ಕೇಳಿದ ದಿನದಿಂದ ಹತ್ತುದಿನವೂ ಪಿತೃವಿನ ಮರಣಾ ಶೌಚವನ್ನು ಆಚರಿಸಬೇಕು.

ದೇಶಾಂತರದಲ್ಲಿ ತಂದೆತಾಯಿಗಳು ಮೃತಪಟ್ಟು ಏಕಕಾಲದಲ್ಲಿ ಮರಣ ವಾರ್ತೆ ಕೇಳಿದರೆ ಏಕಕಾಲದಲ್ಲಿ ಶುದ್ಧಿಯು.

ಒಂದು ಆಶೌಚವಿರುವಾಗ ಹಿಂದೆಯೋ ಕಳೆದುಹೋದ (ಅತಿಕ್ರಾಂತ) ಆಶೌಚ ಸೇರಿಬಂದರೆ ಈಗಿರುವ ಆಶೌಚದಿಂದಲೇ ಅತಿಕ್ರಾಂತ ಆಶೌಚವು ನಿವೃತ್ತಿಯಾಗುವುದು.

ಅತಿಕ್ರಾಂತ ಆಶೌಚವು ಹೆಚ್ಚುಕಾಲವುಳ್ಳದ್ದಾದರೆ ಈಗಿರುವ ಆಶೌಚ ಅತಿಕ್ರಾಂತಾಶೌಚದಿಂದಲೇ ನಿವೃತ್ತಿಯಾಗುವುದು.

ದಹನ ಮಾಡಿದ ಕರ್ತೃವಿಗೆ ಈಗಿರುವ ಆಶೌಚವು ಅತಿಕ್ರಾಂತದಿಂದಲೇ ಮುಗಿಯುತ್ತದೆ. ಅತಿಕ್ರಾಂತ ಮತ್ತು ವರ್ತಮಾನಕಾಲದ ಆಶೌಚಗಳಲ್ಲಿ ಎರಡರಲ್ಲೂ ದಹನಸಂಸ್ಕಾರ ಮಾಡಿದವನಾಗಿದ್ದರೆ ವರ್ತಮಾನಕಾಲದ ಆಶೌಚವೇ ಪ್ರಬಲ. ಇದರಿಂದ ಹಿಂದಿನದು (ದಹನನಿಮಿತ್ತವಾದದ್ದು) ಹೋಗುವುದು. ಆದರೆ ಈ ವಿಷಯ ಮಾತಾಪಿತೃಗಳಿಗೆ ಸಂಬಂಧಿಸಿಲ್ಲ.

ಮೊದಲು ಒಬ್ಬನ ದಹನಸಂಸ್ಕಾರ ಮಾಡಿ ಅದರ ಆಶೌಚವಿರುವಾಗಲೆ ಬೇರೆ ಬಂಧುಗಳಲ್ಲಿ ಒಬ್ಬ, ಇಬ್ಬರು, ಅನೇಕರು ಇವರನ್ನು ದಹಿಸಿ ಸಂಸ್ಕರಿಸಿದರೆ ಮೊದಲಿನ ಆಶೌಚದಿಂದಲೇ ಆಮೇಲಿನ ಆಶೌಚಗಳಿಗೆ ನಿವೃತ್ತಿಯು. ಹಾಗೂ ಅವರ ಪ್ರೇತಕೃತ್ಯಗಳು ಮುಗಿಯುವವು. ಏಕೋದ್ದಿಷ್ಟವನ್ನು ಮಾತ್ರ ಆಯಾಯ ಏಕಾದಶಾಹದಲ್ಲೇ ಮಾಡಬೇಕು.

ಜ್ಞಾತಿಗಳ ದಹನಾಶೌಚದ ನಡುವೆ ಮಾತಾಪಿತೃಗಳ ದಹನಸಂಸ್ಕಾರ ಮಾಡಿದರೆ ಆವಾಗ ಪೂರ್ವಾಶೌಚದಿಂದ ಶುದ್ಧಿಯಾಗುವುದಿಲ್ಲ. ಆದರೆ ಮಾತಾಪಿತೃಗಳ ದಹನದಿಂದ ಆರಂಭಿಸಿ ಪೂರ್ಣ ದಶಾಹಾಶೌಚವನ್ನೇ ಆಚರಿಸಬೇಕು.

## ಆಶೌಚದಲ್ಲಿ ಅನುಸರಿಸಬೇಕಾದ ನಿಯಮಗಳು.

ಹಿಂದೆಯೇ ಪುಟ 174 ರಿಂದ 177 ರ ವರೆಗೆ ಕೆಲವು ನಿಯಮಗಳನ್ನು ತಿಳಿಸಿದೆ. ಅವಶಿಷ್ಟ ಭಾಗವನ್ನು ಇಲ್ಲಿ ತಿಳಿಸಲಾಗಿದೆ.

## ದ್ರವ್ಯಾಶೌಚವು

1 ಸ್ವಾಮಿಗೆ ಆಶೌಚವಿದ್ದಾಗ, ಆವನ ತಂಡುಲಾದಿ ದ್ರವ್ಯಗಳು ಅಶುದ್ಧವು, ಆವುಗಳನ್ನು ಆಶೌಚ ಕಳೆದ ನಂತರ ನೀರಿನಿಂದ ಪ್ರೋಕ್ಷಿಸಿದರೆ ಶುದ್ಧವಾಗುವುದು. ಆದ್ದರಿಂದ ಆಶೌಚವಿರುವ ದಿನಗಳಲ್ಲಿ ಸ್ವಾಮಿಯು ಪದಾರ್ಥಗಳನ್ನು ಸ್ವೀಕರಿಸಬಾರದು. ಇದು ಸಾಮಾನ್ಯ ವಿಷಯ.

## ಅಪವಾದ ಶಾಸ್ತ್ರ

2 ಆದರೆ, ಹಾಲು, ಮೊಸರು, ತುಪ್ಪ. ಮಜ್ಜಿಗೆ, ಬೆಲ್ಲ, ಉಪ್ಪು, ಜೇನುತುಪ್ಪ, ಹೂವು, ಹಣ್ಣು, ತರಕಾರಿ, ಕಟ್ಟಿಗೆ ಇವುಗಳನ್ನು ಆಶೌಚಿಯು ಕೈಯಿಂದ ನೇರಾ ತೆಗೆದುಕೊಳ್ಳದೆ, ಅವನ ಅನುಮತಿಯಿಂದ ತಾನೆ ಸ್ವೀಕರಿಸಿದಲ್ಲಿ ದೋಷವಿಲ್ಲ.

3 ಹೀಗೆಯೇ ಬಾವಿಯ ನೀರನ್ನು, ತೈಲ. ಔಷಧ, ಕೃಷ್ಣಾಜಿನ, ಗದ್ದೆಯಲ್ಲಿದ್ದ ಧಾನ್ಯಗಳನ್ನು ಸ್ವೀಕರಿಸಬಹುದು. ಆದರೆ ಆಶೌಚಿಯು ಮುಟ್ಟದ್ದನ್ನು ನಾವು ಸ್ವೀಕರಿಸಬಾರದು. ಸ್ವಾಮಿ ಸ್ಪೃಷ್ಟಾನಿ ದುಷ್ಯಂತಿ ಎಂದು ನಿಷೇಧಿಸಿದೆ.

4 ಇದೇರೀತಿ ಅಂಗಡಿಗಳಲ್ಲಿ ಇನ್ನೊಬ್ಬರಿಂದ ತೂಗಿಸಿ, ಅಳೆಸಿದ ದವಸಧಾನ್ಯಗಳನ್ನು ಕೊಟ್ಟರೆ ಆಗ ಸ್ವೀಕರಿಸಬಹುದು.

5 ಸಂಪರ್ಕಾಶೌಚವುಳ್ಳವನು ಮತ್ತು ಅತಿಕ್ರಾಂತ ಆಶೌಚವುಳ್ಳವನು ಆದವನ ಅಕ್ಕಿ ಮುಂತಾದ ದ್ರವ್ಯಗಳನ್ನು ಸ್ವೀಕರಿಸಬಹುದು.

6 ದುರ್ಭಿಕ್ಷ, ದೇಶಕ್ಷೋಭೆ ಮೊದಲಾದ ಮಹಾ ಆಪತ್ತುಗಳಲ್ಲಿ ಒಂದು ದಿನಕ್ಕೆ ಬೇಕಾದ ಆಮದ್ರವ್ಯಗಳನ್ನು ಸ್ವೀಕರಿಸಿದರೂ ದೋಷವಲ್ಲ.

7 ಯಜ್ಞ, ವಿವಾಹ, ಉಪನಯನ, ಚೌಲ, ಸೀಮಂತ, ಪುಂಸವನ, ದೇವತಾ ಉತ್ಸವ, ದೇವತಾ ಪ್ರತಿಷ್ಠೆ ಮುಂತಾದವುಗಳನ್ನು ಆರಂಭಿಸಿದ ನಂತರ ಮಧ್ಯೆ ಸೂತಕಾದಿಗಳು ಬಂದರೆ ಮೊದಲೆ ದೇವರಿಗೂ, ಬ್ರಾಹ್ಮಣರಿಗಾಗಿಯೂ ಸಂಕಲ್ಪಿಸಿದ್ದ ದ್ರವ್ಯವನ್ನು ಸ್ವೀಕರಿಸಬಹುದು, ಪಕ್ವಾನ್ನವನ್ನು ಮಾತ್ರ ಆಶೌಚವು ಬರುವ ಮೊದಲೆ ಮಾಡಿದ್ದಾಗಿದ್ದರೆ ಆಶೌಚಿಯು ಮುಟ್ಟದೆ ಬೇರೆಯವರು ಬಡಿಸಿದರೆ ಬ್ರಾಹ್ಮಣರೂ ಭೋಜನ ಮಾಡಬಹುದು.

8 ಅನ್ನದಾತನು ತನಗೆ ಜನನಮರಣ ನಿಮಿತ್ತ ಆಶೌಚವು ಬಂದಿದೆ ಎಂದು ತಿಳಿದದ್ದರೆ, ಭೋಕ್ತೃಗಳು ತಿಳಿಯದಿರುವಾಗಲೂ ತನ್ನ ಅನ್ನವನ್ನು ಅವರಿಗೆ ದಾನ ಮಾಡಬಾರದು.

9 ಒಂದು ಸಮಯ ದಾತೃವಿಗೆ ಅಶೌಚವಿರುವುದನ್ನು ಭೋಕ್ತೃವು ತಿಳಿದಿದ್ದರೂ. ದಾತೃವು ತಿಳಿಯದಿದ್ದರೂ ಅವನ ಅನ್ನವನ್ನು ಈತನು ಊಟಮಾಡಬಾರದು.

10 ದಾತೃವೂ, ಭೋಕ್ತೃವೂ ಜನನಾದಿ ಆಶೌಚವನ್ನು ಮೊದಲು ಕಳಿಯದವರಾಗಿ ಊಟವು ನಡೆಯುತ್ತಿರುವಾಗ ತಿಳಿದರೆ ಎಲೆಗೆ ಹಾಕಿದ್ದನ್ನು ಮಾತ್ರ ಊಟಮಾಡಿ ಬೇರೆ ಮನೆಯಿಂದ ನೀರನ್ನು ತರಿಸಿ ಉತ್ತರಾಪೋಶನೆ ತೆಗೆದುಕೊಂಡು ಬೇರನೀರಿನಿಂದ ಶುದ್ಧಿಮಾಡಿಕೊಳ್ಳಬೇಕು, ಊಟದಮಧ್ಯೆ ನೀರು ಬೇಕಾದರೂ ಬೇರೆ ಮನೆಯಿಂದ ತರಿಸಿ ತೆಗೆದುಕೊಳ್ಳಬೇಕು. ಕಾರಣ ಎಲೆಯ ಮೇಲೆ ಬಡಿಸಿದ ಅನ್ನವು ಮೊದಲೇ ಸ್ವಾಮಿಯಿಂದ ದತ್ತವಾದ್ದರಿಂದ ಭೋಕ್ತೃವಿಗೆ ಅದು ಸಂಬಂಧಪಟ್ಟಿತು. ಆದರಿಂದ ಈತನು ಆ ಅನ್ನವನ್ನು ಊಟಮಾಡಿದಲ್ಲಿ ದೋಷವಾಗುವುದಿಲ್ಲ.

11 ವಿವಾಹಾದಿ ಸಂಸ್ಕಾರಗಳನ್ನು ಬಿಟ್ಟು ಉಳಿದ ಸ್ಥಳದಲ್ಲಿ ಆಶೌಚವು ಬರುವ ಮುಂಚೆ ಮಾಡಿದ ಅನ್ನವಾದರೂ ಮತ್ತೊಬ್ಬರು ಬಡಿಸಿದರೂ ಭೋಕ್ತೃಗಳು ಊಟಮಾಡಬಾರದು.

12 ಮೃತದಿನ, ಆ ರಾತ್ರಿಯಲ್ಲಿ ಅಡಿಗೆ ಮಾಡಬಾರದು. ಬೇರೆಯವರು ಮಾಡಿದ್ದನ್ನು, ಮೊದಲೇ ಮಾಡಿದ್ದನ್ನು ಉಪಯೋಗಿಸಬಹುದು.

13 ಮೃತಹೊಂದಿದ ೧, ೩, ೫, ೭ ಈ ದಿನಗಳಲ್ಲಿ ಜ್ಞಾತಿಗಳೊಂದಿಗೆ ಊಟ ಮಾಡಬೇಕು.

ಹತ್ತು ದಿನದೊಳಗೆ ಹೇಳಿದ ದಿನಗಳಲ್ಲಿ ಜ್ಞಾತಿಗಳು ಭೋಜನಮಾಡಿ ತೃಪ್ತರಾದರೆ ಪ್ರೇತವು ತೃಪ್ತಿಹೊಂದುವುದು. ಜ್ಞಾತಿಗಳ ಮಾತುಕಥೆಗಳಿಂದಲೂ, ಸಹಭೋಜನದಿಂದಲೂ ಪ್ರೇತವು ಶೀಘ್ರದಲ್ಲಿ ತೃಪ್ತಿಹೊಂದುವುದೆಂದು ಆಶ್ವಲಾಯನರ ವಚನವಿದೆ.

ಜನನಾಶೌಚದಲ್ಲಿ ಮೇಲೆ ಹೇಳಿದ ಈ ಎಲ್ಲ ನಿಯಮಗಳೂ ಇಲ್ಲ. ತಾಂಬೂಲಾದಿಗಳನ್ನು ಸೇವಿಸಬಹುದು.

14 ಪರಮೇಶ್ವರ, ನಾರಾಯಣ ಮುಂತಾದ ನಾಮಗಳನ್ನು ಉಚ್ಚರಿಸಬಹುದು. ಅಗ್ನಿ ಮುಂತಾದ ಇತರ ದೇವತೆಗಳ ನಾಮವನ್ನು ಉಚ್ಚರಿಸಬಾರದು.

15 ಆಶೌಚದಲ್ಲಿ ನೆಲದಮೇಲೆ ಮಲಗಬೇಕು. ಬ್ರಹ್ಮಚರ್ಯದಲ್ಲಿರಬೇಕು. ತಾಂಬೂಲ ಹಾಕಬಾರದು. ದೇವಾಲಯದೊಳಗೆ ಹೋಗಬಾರದು. ಜ್ಞಾತಿಗಳೂ ಇತರರೂ ಪರಸ್ಪರ ಮುಟ್ಟಿಕೊಳ್ಳಬಾರದು. ಜ್ಞಾತಿಗಳು ಮುಟ್ಟಿಕೊಂಡರೆ ಸಚೇಲಸ್ನಾನ ಮಾಡಬೇಕು.

ಆಶೌಚ ಕಳೆದಕೂಡಲೇ ಗೃಹಶುದ್ಧಿ ಮಾಡಿಸಿ ಪುಣ್ಯಾಹ ಮಾಡಿಸಬೇಕು.

## ಆಶೌಚಾಂತ್ಯದಲ್ಲಿ ಕರ್ತವ್ಯ

ಆಶೌಚಾಂತ್ಯದಲ್ಲಿ ಬ್ರಾಹ್ಮಣರನ್ನು ಗಂಧಪುಷ್ಪಾದಿಗಳಿಂದ ಪೂಜಿಸಿ ಅವರಿಂದ ಸ್ವಸ್ತಿವಾಚನ (ಪುಣ್ಯಾಹವಾಚನೆ) ಮಾಡಿಸಬೇಕು. ಶುದ್ಧಿಯನ್ನು ಅಪೇಕ್ಷಿಸುವವನೂ ಶ್ರೇಯಸ್ಕಾಮಿಯೂ ಅವಶ್ಯ ಪುಣ್ಯಾಹ ಮಾಡಬೇಕೆಂದು ವಸಿಷ್ಠ. ವೇದವ್ಯಾಸ ಮುಂತಾದವರ ವಚನವಿದೆ,

ಶೂದ್ರರಿಗೆ ವೈದಿಕಮಂತ್ರವಿಲ್ಲದೆ ಮೂರಾವರ್ತಿ ಪುಣ್ಯಾಹವಾಚನವನ್ನು ಬ್ರಾಹ್ಮಣರಿಂದ ಹೇಳಿಸಿದ್ದರಿಂದಲೇ ಶುದ್ಧಿಯಾಗುವುದು.

ಮೇಲೆ ಹೇಳಿದಂತೆ ಶಾಸ್ತ್ರನಿಯಮದಿಂದ ಉತ್ತರಕ್ರಿಯಾದಿಗಳನ್ನು ಆಚರಿಸಿದಲ್ಲಿ ಮೃತರಾದ ಮಾತಾಪಿತೃ ಮೊದಲಾದವರು ಪಿತೃದೇವತಾ ಸ್ವರೂಪವನ್ನು ಹೊಂದಿ ಪುತ್ರರು ಮಾಡುವ ಶ್ರಾದ್ಧಾದಿಗಳ ಪುಣ್ಯಫಲವನ್ನು ಅನುಭವಿಸುತ್ತಾ ಸರ್ವದಾ ಪುತ್ರಾದಿಗಳಿಗೆ ವಂಶಾಭಿವೃದ್ಧಿಯನ್ನು ಪ್ರಾರ್ಥಿಸುವರು. ಅವರ ಅನುಗ್ರಹದಿಂದ ಪುತ್ರಾದಿಗಳು ದೀರ್ಘಾಯುಷಿಗಳಾಗಿ ಸತ್ಸಂತಾನವನ್ನು ಹೊಂದಿ ಶ್ರೇಯಸ್ಸನ್ನು ಪಡೆಯುವರು.

---